ಮುಂಬಯಿ ವಿದ್ಯಾಖಾತೆಯವರಿಂದ ವ್ಹರ್ನ್ಯಾಕ್ಯುಲರ ಟ್ರೇನಿಂಗ ಸಂಸ್ಥೆಗಳಿಗೆ ಪಠ್ಯ
ಪುಸ್ತಕವೆಂದೂ ಮೈಸೂರು ವಿದ್ಯಾಖಾತೆಯವರಿಂದ ವ್ಹರ್ನ್ಯಾಕ್ಯುಲರ ಟೀಚರ್ಸ್
ಸರ್ಟಿಫಿಕೇಟ ಪರೀಕ್ಷೆಗಳಿಗೆ ಆಧಾರ ಗ್ರಂಥವೆಂದೂ ಮಂಜೂರಾಗಿದೆ.

# ಶೈಕ್ಷಣಿಕ ಮನಶ್ಶಾಸ್ತ್ರ

ಮುನ್ನುಡಿ :

**ಪಿ. ಎಸ್. ಕಟ್ಟಿ, ಎಮ್. ಎ.**

ಪ್ರಿನ್ಸಿಪಾಲ್, ಸೆಕಂಡರಿ ಟೀಚರ್ಸ್ ಕಾಲೇಜ, ಬೆಳಗಾವಿ

**ದಿ ಮದ್ರಾಸ ಸ್ಕೂಲ ಬುಕ್ ಆ್ಯಂಡ ಲಿಟರೇಚರ ಸೊಸಾಯಿ**
**ಅವರಿಂದ ಬಹುಮಾನವನ್ನು ಪಡೆದಿದೆ.**

ಲೇಖಕರು :

**ವ್ಹಿ. ಕೆ. ಜವಳಿ, ಬಿ. ಎ. (ಆನರ್ಸ್), ಬಿ. ಟಿ., ಡಿಪ್. ಪಿ. ಈಡಿ.**

ಅಧ್ಯಾಪಕ, ಟ್ರೇನಿಂಗ ಕಾಲೇಜ, ಧಾರವಾಡ

ಎರಡನೆಯ ಮುದ್ರಣ, ತಿದ್ದಿ ಬೆಳೆಯಿಸಿದೆ

ಪ್ರಕಾಶಕರು :

ಫೆಬ್ರುವರಿ ] **ರಾಮಾತ್ರಯ ಬುಕ್ಕ ಡಿಪೊ, ಧಾರವಾಡ** [ ೧೯೪೩

**ಬೆಲೆ: ೧—೪—೦**

ಮೊದಲನೆಯ ಮುದ್ರಣ, ೧೯೪೨
ಎರಡನೆಯ ಮುದ್ರಣ, ೧೯೪೩



ಮುದ್ರಕರು :
ಶ್ರೀಪಾದ ಎಲ್ಲಪ್ಪಾ ಪವಾರ,
ಧಾರವಾಡ ಪ್ರಿಂಟಿಂಗ ಪ್ರೆಸ್,
ಧಾರವಾಡ.

# ಮುನ್ನುಡಿ

ಕೆಲಕಾಲ ನನ್ನ ವಿದ್ಯಾರ್ಥಿಯಾದ ಶ್ರೀ ವ್ಹಿ. ಕೆ. ಜವಳಿಯವರು ತಾವು ಬರೆದ ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯಲು ಕೇಳಿದ್ದಾರೆ. ಹಿರಿಯನೂ ಗುರುವೂ ಆದ ನಾನು ಅವರ ಬೆನ್ನು ಚಪ್ಪರಿಸಿ ಹುರಿದುಂಬಿಸ ಬೇಕೆಂದು ಈ ಕಾರ್ಯ ಮಾಡಲೊಪ್ಪಿಕೊಂಡಿದ್ದೇನೆ.

ಆದರೂ ಮುಖ್ಯವಾಗಿ ಅವರು ಮಾಡಿದ ಸಾಹಸವನ್ನು ನೆನೆಯುವು ದಕ್ಕಾಗಿಯೇ ಈ ನಾಲ್ಕು ಮಾತುಗಳನ್ನು ಬರೆಯುತ್ತಿದ್ದೇನೆ. ಮನಶ್ಶಾಸ್ತ್ರದಂಥ

ಗಹನವಾದ ವಿಷಯದ ಮೇಲೆ, ಕನ್ನಡದಲ್ಲಿ ಇದಕ್ಕೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳು ರೂಢವಿಲ್ಲದಾಗ, ಬರೆಯುವುದು ಸಾಹಸವೇ ಸರಿ. ಇದಲ್ಲದೆ ಈ ವಿಷಯವನ್ನು ವಿವರವಾಗಿ ವಿವೇಚಿಸಲೂ ಇತ್ತೀಚಿಗೆ ಮನ್ನಣೆ ಪಡೆದ ಗ್ರಂಥಕಾರರಾದ ಮ್ಯಾಕ್‌ಡೂಗಲ್, ನನ್ ಮುಂತಾದವರ ವಿಚಾರಗಳನ್ನು ಕನ್ನಡಿಗರ ಮುಂದಿಡಲೂ ಹವಣಿಸಿದ್ದಾರೆ. ಅವರ ಈ ಕೃತಿಯನ್ನು ಕನ್ನಡ ಜನ—ವಿಶೇಷವಾಗಿ ಶಿಕ್ಷಕರು—ಆದರದಿಂದ ಬರಮಾಡಿಕೊಂಡು ಅವರಿಂದ ಮುಂದೆ ಹೆಚ್ಚು ಕಾರ್ಯವಾಗುವಂತೆ ಪ್ರೋತ್ಸಾಹಿಸಲೆಂದು ಹಾರೈಸುತ್ತೇನೆ.

ಶಿಕ್ಷಕನಿಗೆ ವಿಷಯ ಗೊತ್ತಿದ್ದರೆ ಸಾಕು; ಅದನ್ನು ಅವನು ಕಲಿಸಬಲ್ಲನು ಎಂಬ ಮಾತನ್ನು ಶಿಕ್ಷಣಕಾರ್ಯದಲ್ಲಿ ತೊಡಗಿದವರು ಈಗ ಒಪ್ಪುವಂತಿಲ್ಲ. ಏಕೆಂದರೆ ಶಿಕ್ಷಣದ ಧ್ಯೇಯ ಜ್ಞಾನ ಕೊಡುವುದೆಂದು ಮುಖ್ಯವಾಗಿ ಹೇಳಕೂಡದು. ಮುಖ್ಯ ಧ್ಯೇಯ ಮಕ್ಕಳ **ಶಿಕ್ಷಣ**— ಅವರ ವಿಕಾಸ, ಅವರ ತನುಮನ ಅಂತಃಕರಣಗಳ ಬೆಳವಣಿಗೆ, ಸಂಸ್ಕರಣ; ಜ್ಞಾನ ಇದಕ್ಕೆ ಸಾಧನ ಮಾತ್ರ. ಜ್ಞಾನವನ್ನು ಯೋಗ್ಯ ವೇಳೆಯಲ್ಲಿ ಯೋಗ್ಯ ಪ್ರಮಾಣದಿಂದ ಮನ ಹಿಡಿಯುವ ರೂಪದಲ್ಲಿ ಕೊಟ್ಟು ಮಕ್ಕಳ ಮನೋವಿಕಾಸವಾಗುವಂತೆ ಹೆಣಗುವುದೇ ಶಿಕ್ಷಣಕಲೆಯ ಗುಟ್ಟು. ಇದನ್ನರಿತೇ ಸದ್ಯದ ಶಿಕ್ಷಕರ ಶಿಕ್ಷಣಕ್ರಮದಲ್ಲಿ ಮನಶ್ಶಾಸ್ತ್ರದ ಅಭ್ಯಾಸಕ್ಕೆ ಹೆಚ್ಚು ಗಮನಕೊಡಲಾಗುತ್ತಿದೆ. ಶಿಕ್ಷಕರು ತಾವು ಕಲಿಸಲುದ್ಯುಕ್ತರಾದ ಮಕ್ಕಳ ಮನಸ್ಸಿನ ಮಟ್ಟ, ಶಕ್ತಿ, ಒಲುವುಗಳನ್ನು ತಿಳಿಯದೆ ಅವರಿಗೆ ಜ್ಞಾನವನ್ನು ಸರಿಯಾಗಿ ಫಲಕಾರಿಯಾಗಿ ಕೊಡಲಾರರು.

ಈ ರೀತಿಯಾಗಿ ವಿಚಾರಮಾಡಿದರೆ ಶ್ರೀ. ಜವಳಿಯವರ ಈ ಪ್ರಯತ್ನಕ್ಕಾಗಿ ಕರ್ನಾಟಕದ ಶಿಕ್ಷಕರೂ ಶಿಕ್ಷಣಕಾರ್ಯದಲ್ಲಿ ಆಸಕ್ತಿಯುಳ್ಳ ಕನ್ನಡಿಗರೂ ಅವರಿಗೆ ಅಭಿನಂದನೆಗಳನ್ನು ಸಲ್ಲಿಸಲೇಬೇಕು. ಹಾಗೂ ಅವರ ಈ ಋಣವನ್ನು ಕನ್ನಡಿಗರು ಯಾವ ರೀತಿಯಿಂದ ತೀರಿಸುವರು?

ಮಾಧ್ಯಮಿಕ ಶಿಕ್ಷಕರ ಕಾಲೇಜ
ಬೆಳಗಾವಿ
ತಾ. ೨೪—೧—೧೯೪೨

**P. S. Katti**

# ಮೊದಲನೆಯ ಮುದ್ರಣದ ಅರಿಕೆ

ಕನ್ನಡದಲ್ಲಿ ಶಿಕ್ಷಣಸಾಹಿತ್ಯ ವಿರಳ. ಅದರಲ್ಲಿಯೂ ಮನಶ್ಶಾಸ್ತ್ರವನ್ನು ಶಿಕ್ಷಣಕ್ಕೆ ಅನ್ವಯಿಸಿ ಹೇಳುವ ಗ್ರಂಥಗಳು ತೀರ ವಿರಳ. ಇತ್ತೀಚಿಗೆ ಈ ಶಾಸ್ತ್ರಗಳು ಬಹು ಪ್ರಗತಿಹೊಂದುತ್ತ ಸಾಗಿವೆ. ಮನಶ್ಶಾಸ್ತ್ರದ ಹೊಸ ಸಂಶೋಧನೆಗಳು ಶಿಕ್ಷಣಶಾಸ್ತ್ರವನ್ನೇ ವ್ಯಾಪಿಸಿವೆ. ಅವುಗಳನ್ನು ಕನ್ನಡಿಗರ ಅವಗಾಹನೆಗೆ ತರಲು ಬಯಸಿ ಈ ಚಿಕ್ಕ ಪುಸ್ತಕವನ್ನು ರಚಿಸುವ ಕಾರ್ಯವನ್ನು ಕೈಕೊಂಡೆನು.

ಮನಶ್ಶಾಸ್ತ್ರದಲ್ಲಿ ಭಿನ್ನ ವಾದಗಳುಂಟು. ಅವುಗಳನ್ನು ಕೂಲಂಕುಷ ವಾಗಿ ಚರ್ಚಿಸುವ ಗ್ರಂಥಗಳು ಇಂಗ್ಲೀಷ ಭಾಷೆಯಲ್ಲಿ ಹೇರಳವಾಗಿವೆ. ಪ್ರಾಮುಖ್ಯವಾಗಿ ಡಾ|| ವಿಲಿಯಮ್ ಮ್ಯಾಕ್‌ಡೂಗಲ್ಲ್ ಮತ್ತು ಸರ್ ಪರ್ಸಿ ನನ್ನ್ ಇವರ ತತ್ವಪ್ರತಿಪಾದನೆಯನ್ನು ನಾನು ಅನುಸರಿಸಿದ್ದೇನೆ. ಅವರ ಸಿದ್ಧಾಂತಗಳು ಹೆಚ್ಚು ಸಮಂಜಸವಾಗಿ ತೋರುವುವಲ್ಲದೆ ಅವುಗಳಿಗೂ ಭಾರತೀಯರ ವಿಚಾರಸರಣಿಗೂ ಅತ್ಯಂತ ಹೋಲಿಕೆಯುಂಟು. ಈ ಪುಸ್ತಕ ದಲ್ಲಿ ಭಾರತೀಯರ ತತ್ವದೃಷ್ಟಿಯನ್ನು ಮಂಡಿಸಲು ಯತ್ನಿಸಿದ್ದೇನೆ. ಮುಖ್ಯ ವಾಗಿ ಪಾಶ್ಚಾತ್ಯ ಮನೋವೈಜ್ಞಾನಿಕರ ತತ್ವಗಳನ್ನೇ ವಿವೇಚಿಸಲಾಗಿದೆ. ಅವು ಹಿಂದುಸ್ತಾನದ ಸಂಸ್ಕೃತಿಗೂ ಅವರ ಜೀವನಕ್ಕೂ ಎಷ್ಟರಮಟ್ಟಿಗೆ ಅನ್ವಯಿಸುವುವೆಂಬುದನ್ನಾದರೂ ನಾವು ನೋಡಬೇಕಾಗಿದೆ. ಆದರೆ ಮನುಷ್ಯನ ಸ್ವಭಾವವು ಯಾವ ದೇಶದಲ್ಲಿಯೇ ಆಗಲಿ ಮೂಲತಃ ಒಂದೇ ಆಗಿರುತ್ತದೆ.

ಕನ್ನಡದಲ್ಲಿ ಈ ಪುಸ್ತಕವನ್ನು ಬರೆಯುವಾಗ ತಕ್ಕ ಪಾರಿಭಾಷಿಕಗಳನ್ನು ರಚಿಸುವುದು ಅವಶ್ಯವೆನಿಸಿತು. ಪುಸ್ತಕದ ಕೊನೆಗೆ ಇಂಥ ಪಾರಿಭಾಷಿಕ ಶಬ್ದಗಳ ಕೋಶವನ್ನು—ಕನ್ನಡ, ಇಂಗ್ಲೀಷ, ಹಿಂದುಸ್ತಾನಿ ಮತ್ತು ಮರಾಠಿ ಯಲ್ಲಿ—ಕೊಡಲಾಗಿದೆ. ಓದುಗರು ಸೂಕ್ತ ಕಂಡ ಪದಗಳನ್ನು ಸ್ವೀಕರಿಸ ಬಹುದು.

ಪ್ರಾಥಮಿಕ ಶಿಕ್ಷಕರ ಹಿತವನ್ನೇ ಗುರಿಯಾಗಿಟ್ಟುಕೊಂಡು ಟ್ರೇನಿಂಗ ಕಾಲೇಜಿನ ವಿದ್ಯಾರ್ಥಿಗಳ ಅಭ್ಯಾಸಪತ್ರಿಕೆಗೆ ಅನುಸಾರವಾಗಿಯೇ

ಈ ಪುಸ್ತಕವು ಬರೆಯಲ್ಪಟ್ಟಿದೆ. ಶಾಲಾಧ್ಯಾಪಕರಿಗೂ ಇತರ ಶಿಕ್ಷಣಪ್ರೇಮಿಗಳಿಗೂ ಇದು ಸಹಾಯವಾಗುವುದೆಂದು ನಂಬಿದ್ದೇನೆ. ಮನಶ್ಶಾಸ್ತ್ರದ ವಿಷಯವು ಕ್ಲಿಷ್ಟವಾದುದರಿಂದ ಓದುವವರಿಗೆ ತಿಳಿಯುವಂತೆ ಅದನ್ನು ಆದಷ್ಟು ಸುಲಭವಾದ ಭಾಷೆಯಲ್ಲಿ ಬರೆಯಲು ಯತ್ನಿಸಿರುವೆನು.

ನಾನು ಆಧಾರವಾಗಿಟ್ಟುಕೊಂಡ ಗ್ರಂಥಗಳ ಪಟ್ಟಿಯನ್ನು ಕಡೆಗೆ ಸೇರಿಸಿದ್ದೇನೆ. ಅವೆಲ್ಲವುಗಳ ಗ್ರಂಥಕರ್ತರಿಗೆ ಋಣಿಯಾಗಿರುವೆನು.

ಧಾರವಾಡ ಟ್ರೇನಿಂಗ ಕಾಲೇಜಿನಲ್ಲಿ ನನ್ನ ಸಹವ್ಯವಸಾಯಿಗಳಾದ ಶ್ರೀ. ಆಯ್. ಎಸ್. ಬಿದರಿ, ಬಿ. ಎ., ಬಿ. ಟಿ. ಇವರೂ ಶ್ರೀ. ಗುರುನಾಥ ಜೋಶಿ, ಬಿ. ಎ. ಇವರೂ ಅಲ್ಲದೆ ಪ್ರಾಕ್ಟಿಸಿಂಗ್ ಸ್ಕೂಲಿನ ಹೆಡ್‌ಮಾಸ್ತರರಾದ ಶ್ರೀ. ಎನ್. ವ್ಹಿ. ಕುಲಡಿಯವರೂ ಈ ಗ್ರಂಥರಚನೆಯ ಕಾರ್ಯದಲ್ಲಿ ನನಗೆ ಬಹುವಿಧದಿಂದ ನೆರವಾದರು. ಕಾರವಾರ ಹೈಸ್ಕೂಲಿನ ಹೆಡ್ ಮಾಸ್ತರರಾಗಿರುವ ಶ್ರೀ. ಎಸ್. ಆರ್. ತಟ್ಟಿ, ಬಿ.ಎ., ಎಸ್.ಟಿ ಸಿ.ಡಿ ಇವರು ಈ ಪುಸ್ತಕದ ಕೈಬರೆಹದ ಪ್ರತಿಯನ್ನು ಸಾದ್ಯಂತ ಓದಿ ಹಲವು ಸೂಚನೆಗಳನ್ನು ಮಾಡಿದರು. ನಮ್ಮ ಟ್ರೇನಿಂಗ ಕಾಲೇಜದ ಪ್ರಿನ್ಸಿಪಾಲರಾದ ಶ್ರೀ. ಎಚ್. ಎಸ್. ತೊರಗಲ್, ಎಮ್. ಎ., ಎಸ್. ಟಿ. ಸಿ. ಡಿ. ಇವರು ನನ್ನನ್ನು ಈ ಕಾರ್ಯದಲ್ಲಿ ತುಂಬ ಪ್ರೋತ್ಸಾಹಿಸಿದರು. ಈ ಎಲ್ಲ ಮಹನೀಯರಿಗೆ ನಾನು ಅತ್ಯಂತ ಉಪಕೃತನಾಗಿದ್ದೇನೆ.

ನಾನು ಮುಂಬೈಯಲ್ಲಿ ಬಿ. ಟಿ. ಕಾಲೇಜಿನಲ್ಲಿ ಓದುವಾಗ ನನ್ನ ಗುರುವರ್ಯರಾಗಿದ್ದ—ಈಗ ಬೆಳಗಾಂವ ಎಸ್. ಟಿ. ಕಾಲೇಜಿನ ಪ್ರಿನ್ಸಿಪಾಲರಾಗಿರುವ—ರ್‍ಯಾಂಗಲರ್ ಪಿ. ಎಸ್. ಕಟ್ಟಿ ಅವರು ನನ್ನ ಮೇಲಿನ ವಾತ್ಸಲ್ಯದಿಂದ ಈ ಪುಸ್ತಕಕ್ಕೆ ಅಮೂಲ್ಯವಾದ ಮುನ್ನುಡಿಯನ್ನು ಬರೆದು ನನ್ನನ್ನು ಕೃತಜ್ಞನನ್ನಾಗಿ ಮಾಡಿರುವರು. ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.

ಟ್ರೇನಿಂಗ ಕಾಲೇಜ ಫಾರ್ ಮೆನ್
ಧಾರವಾಡ
[illegible]

# ಎರಡನೆಯ ಮುದ್ರಣದ ಅರಿಕೆ

ಈ ಪುಸ್ತಕದ ಬೇಡಿಕೆಯು ಹೆಚ್ಚಾದುದರಿಂದ ಇದನ್ನು ಮತ್ತೊಮ್ಮೆ ಮುದ್ರಿಸುವ ಪ್ರಸಂಗವು ಒದಗಿತು. ಓದುಗರಿಗೆ ಹೆಚ್ಚು ಉಪಯುಕ್ತವಾಗಲೆಂದು ಈ ಆವೃತ್ತಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿದೆ. ವಿಷಯ ವಿವೇಚನೆಯು ಹೆಚ್ಚು ಸ್ಪಷ್ಟವಾಗಬೇಕೆಂಬ ದೃಷ್ಟಿಯಿಂದ ಅನೇಕ ಕಡೆ ಭಾಷಾಸರಣಿಯಲ್ಲಿ ಮಾರ್ಪಾಡುಗಳನ್ನು ಮಾಡಲಾಗಿದೆ. ಅಲ್ಲಲ್ಲಿ ಹೊಸ ವಿಷಯುಗಳನ್ನೂ ಸೇರಿಸಲಾಗಿದೆ. ವಿಶೇಷವಾಗಿ "ಕ್ರೀಡಾಪದ್ಧತಿ", "ಮನಸ್ಸಿನ ಹೋರಾಟ" ಮತ್ತು "ರೂಢಿ (ಚಟ)" ಈ ವಿಷಯುಗಳನ್ನು ಸ್ವಲ್ಪ ವಿಸ್ತರಿಸಿ ವಿವೇಚಿಸಿದ್ದೇನೆ. ಈ ಪುಸ್ತಕವನ್ನು ಪರೀಕ್ಷೆಗೋಸ್ಕರ ಅಭ್ಯಾಸ ಮಾಡುವವರಿಗೆ ಅನುಕೂಲವಾಗಲೆಂದು ಟ್ರೇಂಡ ಟೀಚರ್ಸ್ ಸರ್ಟಿಫಿಕೇಟ ಪರೀಕ್ಷೆಯ ನಾಲ್ಕು ವರ್ಷದ ಪ್ರಶ್ನೆಗಳನ್ನು ಸೇರಿಸಲಾಗಿದೆ.

ಮೈಸೂರು ವಿದ್ಯಾಖಾತೆಯವರು ಈ ಪುಸ್ತಕವನ್ನು ತಮ್ಮ ವರ್ನ್ಯಾಕ್ಯುಲರ ಟೀಚರ್ಸ ಸರ್ಟಿಫಿಕೇಟ (V. T. C.) ಪರೀಕ್ಷೆಗೆ ಆಧಾರ ಗ್ರಂಥ (Reference Book) ವೆಂದೂ ಮಿಡಲ್ ಸ್ಕೂಲ ಮತ್ತು ಟ್ರೇನಿಂಗ ಸಂಸ್ಥೆಗಳಿಗೆ ಲಾಯಬ್ರರಿ ಪುಸ್ತಕವೆಂದೂ ಮಂಜೂರು ಮಾಡಿರುವರು (T. B. C. No. 121 of 41-42). ವ್ಹಿ. ಟಿ. ಸಿ. ಪರೀಕ್ಷೆಯ ಅಭ್ಯಾಸ ಪತ್ರಿಕೆಯಲ್ಲಿ "ರಸಭಾವಗಳು" ಮತ್ತು "ಶಿಕ್ಷಣದ ವರ್ಗಾಂತರ" ಎಂಬ ಎರಡು ವಿಷಯುಗಳನ್ನು ಹೆಚ್ಚಿಗೆ ಸೇರಿಸಿರುವರು. ಅವುಗಳನ್ನು ಎಲ್ಲ ಅಧ್ಯಾಪಕರು ತಿಳಿದಿರುವುದು ವಿಹಿತವಾದುದರಿಂದ ಅವುಗಳ ಬಗ್ಗೆ ಈ ಆವೃತ್ತಿಯಲ್ಲಿ ಕೊನೆಗೆ ಎರಡು ಪ್ರಕರಣಗಳನ್ನು ಜೋಡಿಸಿದೆ. ಒಟ್ಟಿನಲ್ಲಿ ಕರ್ನಾಟಕದ ಎಲ್ಲ ಭಾಗದ ಶಿಕ್ಷಕರಿಗೆ ಉಪಯೋಗವಾಗುವಂತಹ ಬದಲಾವಣೆಗಳನ್ನು ಮಾಡಿದೆ.

ಈ ಪುಸ್ತಕದ ಪುನರಾವಲೋಕನದ ಕಾಲಕ್ಕೆ ಭಾಷೆಯ ದೃಷ್ಟಿಯಿಂದಲೂ ವಿಷಯಪ್ರತಿಪಾದನೆಯ ದೃಷ್ಟಿಯಿಂದಲೂ ನನಗೆ ಹಲವು ಸೂಚನೆಗಳನ್ನು ಕೊಟ್ಟ ಪ್ರೊ. ಎಸ್. ಎಸ್. ಮಾಳವಾಡ ಮತ್ತು ಶ್ರೀ. ಎಸ್. ಆರ್. ರೋಹಿಡೇಕರ ಅವರಿಗೆ ನಾನು ಉಪಕೃತನಾಗಿದ್ದೇನೆ.

ಧಾರವಾಡ
೧—೨—೧೯೪೩

[signature]

# ಇದೇ ಬರೆಹಗಾರರಿಂದ

**ಮಕ್ಕಳ ಆಟಗಳು (ಅಚ್ಚಿನಲ್ಲಿದೆ) —**

ಈ ಪುಸ್ತಕದಲ್ಲಿ ದೇಶೀಯ ಮತ್ತು ವಿದೇಶೀಯ ನಾಲ್ಕು ನೂರು ಸಣ್ಣ ಕ್ಷೇತ್ರದ ಆಟಗಳು, ದೇಶೀಯ ಎಲ್ಲ ಬಯಲಾಟಗಳು, ಲಾರಿ, ಲೇಝಿಮು, ಲೋಡು, ಡಂಬೆಲ್ಸ್, ಕೋಲಾಟ, ಗರ್ಭಾ ನೃತ್ಯ, ಸರ್ವಾಂಗ ಸುಂದರ ವ್ಯಾಯಾಮ, ಆಸನ, ಅಷ್ಟಾಂಗ ದಂಡ, ಸಾಮು, ಬೈಠಕ ಮೊದಲಾದ ಕವಾಯತುಗಳು ವರ್ಣಿಸಲ್ಪಟ್ಟಿವೆ. ಅಲ್ಲದೆ ಶಾರೀರಿಕ ಶಿಕ್ಷಣದ ತತ್ವಗಳು, ಶಾರೀರಿಕ ಚಟುವಟಿಕೆಗಳನ್ನು ಕಲಿಸುವ ಪದ್ಧತಿ, ಮಾದರಿಯ ಪಾಠಗಳು ಮೊದಲಾದವುಗಳನ್ನು ವಿವೇಚಿಸಲಾಗಿದೆ. ಚಿತ್ರಗಳಿಂದ ಉದಾಹರಿಸಿದೆ.

**ಕಲಿಸುವ ಹೊಸ ಪದ್ಧತಿಗಳು (ಬೇಗನೆ ಪ್ರಕಟವಾಗಲಿದೆ).—**

ಕನ್ನಡ, ಗಣಿತ, ಇತಿಹಾಸ, ಭೂಗೋಲ, ವಿಜ್ಞಾನ ಶಾಸ್ತ್ರ, ಕೈಕೆಲಸ, ಡ್ರಾಯಿಂಗ, ಹಿಂದುಸ್ತಾನಿ, ಶಾರೀರಿಕ ಶಿಕ್ಷಣ ಮತ್ತು ಬಹುವರ್ಗ ಅಧ್ಯಾಪನಗಳನ್ನು ಕಲಿಸುವ ಆಧುನಿಕ ಪದ್ಧತಿಗಳನ್ನು ವಿವೇಚಿಸುವ ಗ್ರಂಥ. ಆಯಾ ವಿಷಯಗಳಲ್ಲಿ ತಜ್ಞರಾದವರ ಲೇಖನಗಳ ಸಂಗ್ರಹವಿದು.

**ನೂರು ಮಾದರಿಯ ಪಾಠಗಳ ಟಿಪ್ಪಣಿಗಳು (ಬೇಗನೆ ಪ್ರಕಟವಾಗಲಿದೆ).—**

ಬೇರೆ ಬೇರೆ ವರ್ಗಗಳಿಗೆ ಬೇರೆ ಬೇರೆ ವಿಷಯಗಳನ್ನು ಕಲಿಸುವಾಗ ಪಾಠದ ಟಿಪ್ಪಣಿಗಳನ್ನು ಯಾವ ರೀತಿಯಿಂದ ಬರೆಯಬೇಕೆಂಬುದನ್ನು ತೋರಿಸುತ್ತದೆ. ಮೇಲಿನ ಪುಸ್ತಕಕ್ಕೆ ಪುರವಣಿಯಂತಿದೆ.

# ಪರಿವಿಡಿ

*

# ಶೈಕ್ಷಣಿಕ ಮನಶ್ಶಾಸ್ತ್ರ

## ೧

## ಶಿಕ್ಷಣವೂ ಮನಶ್ಶಾಸ್ತ್ರವೂ

ಮನಶ್ಶಾಸ್ತ್ರವು ಶಿಕ್ಷಣದ ಅಡಿಗಲ್ಲು. ಈ ತತ್ವವನ್ನು ಪುರಾತನ ಪಂಡಿತರೂ ಜ್ಞಾನಿಗಳೂ ಕಂಡುಹಿಡಿದಿರುತ್ತಾರೆ. ವಿದ್ಯಾಭ್ಯಾಸ ಮಾಡಿಸುವಾಗ ಶಿಕ್ಷಕನು ವಿದ್ಯಾರ್ಥಿಯ ಯೋಗ್ಯತೆಯನ್ನು ಅರಿತಿರಬೇಕು. ಸ್ತ್ರೀ–ಪುರುಷರ ಸ್ವಭಾವದಲ್ಲಿ ವ್ಯತ್ಯಾಸವಿರುವುದೆಂದೂ ಬೋಧೆಯು ತಾಯ್ನುಡಿಯಲ್ಲಿಯೆ ಆಗಬೇಕೆಂದೂ ಗೌತಮ ಬುದ್ಧನು ಬಹುಕಾಲದ ಹಿಂದೆಯೆ ಸಾರಿದ್ದಾನೆ. ಯೋಗ್ಯ ಲಕ್ಷಣಗಳುಳ್ಳ—ಉತ್ತಮ ಶೀಲ-ಸ್ವಭಾವ ಗಳುಳ್ಳ—ಶಿಷ್ಯನಿಗೆ ಮಾತ್ರ ವೇದಾಭ್ಯಾಸ ಮಾಡಿಸಬೇಕೆಂದು ಶಂಕರಾ ಚಾರ್ಯನು ಹೇಳಿರುತ್ತಾನೆ. ಶಿಕ್ಷಣ ಯೋಜನೆಯು ಶಿಷ್ಯನ ಸ್ವಭಾವವನ್ನು ಅನುಸರಿಸಬೇಕೆಂದು ಗ್ರೀಕ ತತ್ವಜ್ಞಾನಿಯಾದ ಪ್ಲೇಟೊನು ಅಭಿಪ್ರಾಯ ಪಡುತ್ತಾನೆ. ಆದರೆ ಸ್ವಿತ್ಸರ್ಲ್ಲಂಡದ ಶಿಕ್ಷಣ ಸುಧಾರಕನಾದ ಪೆಸ್ತಲಾಜಿಯು ಶಿಕ್ಷಣಕ್ಕೆ ಮನಶ್ಶಾಸ್ತ್ರವೇ ಆಧಾರವೆಂದು ನಂಬಿದ್ದನು. ವಿಕಾಸಹೊಂದು ತ್ತಿರುವ ಮಗುವಿನ ಮನಸ್ಸಿನ ದೃಷ್ಟಿಯಿಂದಲೇ ಶಿಕ್ಷಣದ ಎಲ್ಲ ಸಮಸ್ಯೆಗಳನ್ನು ವಿವೇಚಿಸಬೇಕೆಂದು ಮೊಟ್ಟಮೊದಲು ಜನರಿಗೆ ಸ್ಪಷ್ಟವಾಗಿ ಒತ್ತಿ ಹೇಳಿದವ ನೆಂದರೆ ಇವನೇ. ಶಿಷ್ಯನ ಮನಸ್ಸನ್ನು ತಿಳಿದುಕೊಳ್ಳುವುದು ಗುರುವಿನ ಆದ್ಯ ಕರ್ತವ್ಯವೆಂದೂ ಶಾಲೆಯ ಶಿಕ್ಷಣಕ್ರಮವು ಮನಸ್ಸಿನ ಕಾರ್ಯಕಲಾಪಗಳ ಯೋಗ್ಯಜ್ಞಾನವನ್ನು ಅವಲಂಬಿಸಿರಬೇಕೆಂದೂ ಇವನು ಸಾರಿದನು. ಇವನಿಗಿಂತ ಪೂರ್ವದಲ್ಲಿ ಕ್ವಿಂಟಿಲಿಯನ್ ಮೊದಲಾದ ಶಿಕ್ಷಣತಜ್ಞರು ಶಿಕ್ಷಕ ನಿಗೆ ಮನಶ್ಶಾಸ್ತ್ರದ ಪರಿಚಯವು ಅವಶ್ಯವೆಂಬ ಸಂಗತಿಯನ್ನು ಅರಿತಿದ್ದರೂ ಅದರ ಸ್ಪಷ್ಟ ಕಲ್ಪನೆಯು ಅವರಿಗೆ ಇದ್ದಿರಲಿಲ್ಲ. ಆಧುನಿಕ ಶಿಕ್ಷಣ

ಸುಧಾರಕರೆಲ್ಲ ಪೆಸ್ಟಲಾಜಿಯು ತೋರಿಸಿದ ಮಾರ್ಗವನ್ನೇ ಅನುಸರಿಸಿ ಮುನ್ನಡೆ ಇಡುತ್ತಿರುವರು. ಹರ್ಬಾರ್ಟ್, ಫ್ರೋಬೆಲ್, ಮಾಂಟೀಸರಿ ಮೊದಲಾದ ಶಿಕ್ಷಣತಜ್ಞರು ತಮ್ಮ ಶೈಕ್ಷಣಿಕ ಯೋಜನೆಗಳನ್ನು ವಿದ್ಯಾರ್ಥಿಯ ಸ್ವಭಾವ-ಸಾಮರ್ಥ್ಯಗಳ ದೃಷ್ಟಿಯಿಂದಲೇ ರಚಿಸಿರುವರು. ರವೀಂದ್ರನಾಥ ಟಾಗೋರ ಮತ್ತು ಮಹಾತ್ಮಾ ಗಾಂಧಿಯವರ ಶಿಕ್ಷಣಪದ್ಧತಿಯಲ್ಲಿಯೂ ಬಾಲಕನ ಸ್ವಭಾವಕ್ಕೇ ಪ್ರಾಧಾನ್ಯವನ್ನು ಕೊಡಲಾಗಿದೆ. ಇದೇ ಮಾತು ನಾಲಂದಾ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡಬೇಕಾದ ವಿದ್ಯಾರ್ಥಿಯು ಮೊದಲು ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕಾಗಿತ್ತೆಂಬುದರಲ್ಲಿ ಅಡಕವಾಗಿದೆ. ವಿಷಯ ಕಲಿಸುವ ಪೂರ್ವದಲ್ಲಿ ವಿದ್ಯಾರ್ಥಿಯ ಬುದ್ಧಿಸಾಮರ್ಥ್ಯವನ್ನು ತಿಳಿದಿರಬೇಕೆಂಬ ತತ್ವವನ್ನು ನಮ್ಮ ದೇಶದ ಜ್ಞಾನಿಗಳು ಮೊದಲೇ ಅರಿತಿದ್ದರು. ಇದನ್ನೇ ಇಂದಿನ ಪ್ರಸಿದ್ಧ ಶಿಕ್ಷಣತತ್ವಜ್ಞಾನಿಯಾದ ಸರ್ ಜಾನ್ ಅಡ್ಯಾಮ್ಸನು ಸೂತ್ರರೂಪದಲ್ಲಿ ಹೀಗೆ ತಿಳಿಸುವನು: "ಶಿಕ್ಷಕನು **ರಾಮನಿಗೆ** ಗಣಿತ ಕಲಿಸುತ್ತಾನೆ." ಶಿಕ್ಷಕನು ಕಲಿಸುವ ವಿಷಯವನ್ನೂ ಕಲಿಯುವ ವಿದ್ಯಾರ್ಥಿಯನ್ನೂ ಅಭ್ಯಸಿಸಬೇಕೆಂಬುದೇ ಇದರರ್ಥ. ರಾಮನ ಅಭ್ಯಾಸವೇ ಮನಶ್ಶಾಸ್ತ್ರವಾದ್ದರಿಂದ ಶಿಕ್ಷಕನು ಮನಶ್ಶಾಸ್ತ್ರದ ಪರಿಚಯವನ್ನು ಮಾಡಿಕೊಳ್ಳಲೇಬೇಕು. ಅಂದರೇನೇ ವಿದ್ಯಾರ್ಥಿಯ ಮನೋವ್ಯಾಪಾರಗಳಿಗೆ ಮತ್ತು ಬೇಡಿಕೆಗಳಿಗೆ ಅನುಗುಣವಾಗಿ ಶಿಕ್ಷಣ ಕೊಡಬಲ್ಲನು.

ಬಾಲಕನ ವಿದ್ಯಾರ್ಜನೆಯು ಸೊಗಸಾಗಿಯೂ ಸುಲಭವಾಗಿಯೂ ಶೀಘ್ರವಾಗಿಯೂ ಸಾಗಬೇಕೆಂದು ಆಧುನಿಕ ಶಿಕ್ಷಕನು ಅಪೇಕ್ಷಿಸುತ್ತಾನೆ. ಯಾವ ರೀತಿಯಿಂದ ಕಲಿಸಿದರೆ ವಿಷಯವು ವಿದ್ಯಾರ್ಥಿಗೆ ರುಚಿಸುವುದು? ವಿದ್ಯಾರ್ಥಿಯು ವಿಷಯದ ಕಡೆಗೆ ಲಕ್ಷ್ಯವನ್ನು ಕೊಡುವನು? ಅದು ಅವನ ಮನಸ್ಸಿನಲ್ಲಿ ಬಿಂಬಿಸುವುದು? ಅದನ್ನು ಹೆಚ್ಚಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲವು ಉಂಟಾಗುವುದು? ಎಂಬ ಯೋಜನೆಯನ್ನು ಶಿಕ್ಷಣಕಲಾ ನಿಪುಣನಾದ ಶಿಕ್ಷಕನು ಮಾಡುತ್ತಾನೆ. ಶಿಕ್ಷಕನು ಶಿಕ್ಷಣಕಾರ್ಯದಲ್ಲಿ ನೈಪುಣ್ಯವನ್ನು ಸಂಪಾದಿಸಬೇಕಾದರೆ—ತನ್ನ ಶಿಕ್ಷಣಕಾರ್ಯವು ಸಫಲವಾಗಬೇಕಾದರೆ, ಅವನು ಬಾಲಕನ ಮನೋವ್ಯಾಪಾರಗಳನ್ನು ಅರಿತುಕೊಳ್ಳಬೇಕು. ಎಂದರೆ ಬಾಲಕನು ಯಾವುದನ್ನು ಅಪೇಕ್ಷಿಸುತ್ತಾನೆ, ಯಾವ ರೀತಿಯಿಂದ ವಿಚಾರಿಸು

ತ್ತಾನೆ, ಯಾವುದನ್ನು ತಿಳಿದುಕೊಂಡಿದ್ದಾನೆ, ಯಾವುದನ್ನು ತಿಳಿದುಕೊಂಡಿರುವುದಿಲ್ಲ ಮುಂತಾದ ವಿಷಯಗಳನ್ನು ಶಿಕ್ಷಕನು ಕಂಡುಹಿಡಿಯಬೇಕು. ಬಾಲಕನ ಮನೋವೃತ್ತಿಗಳನ್ನು ಕಂಡುಹಿಡಿಯಲಿಕ್ಕೆ ಮನಶ್ಶಾಸ್ತ್ರದ ಅಭ್ಯಾಸವು ಅವನಿಗೆ ಸಹಾಯವಾಗುವುದು. ಹರ್ಬಾರ್ಟ್ ಮೊದಲಾದ ಶಿಕ್ಷಣಪಂಡಿತರು ವಿಷಯವಿವೇಚನೆಯು ಮೆಟ್ಟಲುಮೆಟ್ಟಲುಗಳಾಗಿ ಸಾಗಬೇಕೆಂತಲೂ ಅದು ಶಿಕ್ಷಣದ ಸಾಮಾನ್ಯ ತತ್ವಗಳನ್ನು ಅನುಸರಿಸಬೇಕೆಂತಲೂ ಹೇಳುವಾಗ ಮನಶ್ಶಾಸ್ತ್ರವನ್ನೇ ಆಧಾರವಾಗಿ ಇಟ್ಟುಕೊಳ್ಳುತ್ತಾರೆ. ಅಂತು, ಅಧ್ಯಯನ ಕ್ರಮವು ಮನಶ್ಶಾಸ್ತ್ರದ ನಿಯಮಗಳಿಗೆ ಒಳಪಟ್ಟಿರಬೇಕು. ಕಲಿಸುವ ಹೊಸ ಪದ್ಧತಿಯನ್ನು ಶೋಧಿಸುವಲ್ಲಿ, ಹೊಸ ಹೊಸ ಪ್ರಯೋಗಗಳನ್ನು ಮಾಡುವಲ್ಲಿ, ಶಿಕ್ಷಣಯೋಜನೆಯ ಹೊಸ ರೀತಿಯನ್ನು ಕಂಡುಹಿಡಿಯುವಲ್ಲಿ ಮನಶ್ಶಾಸ್ತ್ರದ ಉಪಯೋಗವು ಬಹಳವಾಗಿ ಆಗುತ್ತದೆ. ಆದುದರಿಂದ ಶಿಕ್ಷಣವ್ಯವಸಾಯಕ್ಕೆ ಮನಶ್ಶಾಸ್ತ್ರದ ಜ್ಞಾನವು ಅವಶ್ಯವಾಗಿ ಬೇಕಾದುದು.

ಹೊಸ ಶಿಕ್ಷಣವು ಕೇವಲ ಬೋಧನೆಯಲ್ಲಿ ನಿರತವಾಗಿ ತೃಪ್ತಿಪಡುವುದಿಲ್ಲ. **ಬಾಲಕನ ಶೀಲಸ್ವಭಾವಗಳನ್ನು ತಿದ್ದುವುದೇ ಶಿಕ್ಷಣದ ಹೆಗ್ಗುರಿಯೆಂದು ಈಗಿನ ಶಿಕ್ಷಣತಜ್ಞರ ಮತ.** ಶೀಲಸ್ವಭಾವಗಳು ಹೇಗೆ ವಿಕಾಸ ಹೊಂದುತ್ತವೆ, ಪರಿಸ್ಥಿತಿಯು ಬಾಲಕನ ಮೇಲೆ ಯಾವ ಪರಿಣಾಮವನ್ನುಂಟು ಮಾಡುತ್ತದೆ, ಒಬ್ಬ ವ್ಯಕ್ತಿಯ ವರ್ಚಸ್ಸು ಇನ್ನೊಬ್ಬನ ಮೇಲೆ ಹೇಗೆ ಬೀಳುತ್ತದೆ, ಸಂಘಜೀವನವು ವ್ಯಕ್ತಿಯ ವರ್ತನವನ್ನು ಹೇಗೆ ಮಾರ್ಪಡಿಸುತ್ತದೆ ಎಂಬುದನ್ನು ಅರಿತುಕೊಳ್ಳುವುದು ಶಿಕ್ಷಕನ ಮುಖ್ಯ ಕರ್ತವ್ಯವಾಗಿದೆ. ಬಾಲಕರ ಶೀಲಸ್ವಭಾವಗಳನ್ನು ಅರಿತುಕೊಳ್ಳಬೇಕಾದರೆ ಶಿಕ್ಷಕನು ಮನಶ್ಶಾಸ್ತ್ರದ ಕಡೆಗೇನೇ ತೆರಳಬೇಕು.

ಕಲಿಸುವ ವಿಷಯಗಳು ಬಾಲಕನ ವಯೋಮಾನಕ್ಕೆ ಅನುಗುಣವಾಗಿರಬೇಕು. ವಯಸ್ಸಿಗೆ ತಕ್ಕ ವಿಷಯಗಳನ್ನು ಕಲಿಸುವ ಯೋಜನೆಯನ್ನು ಮಾಡುವ ಸಮಯದಲ್ಲಿ ಬಾಲಕನ ಬುದ್ಧಿಯ ಬಲವನ್ನೂ ಬೇಡಿಕೆಗಳನ್ನೂ ಅರಿತಿರಬೇಕಾದುದು ಆವಶ್ಯಕ. ಶಿಕ್ಷಣದ ಯೋಜನೆಯನ್ನು ಕಲ್ಪಿಸುವಾಗ ಮೊದಲು ಮಗುವಿನ ಬೆಳವಣಿಗೆಯ ಮುಖ್ಯ ಅವಸ್ಥೆಗಳನ್ನೂ ಅವುಗಳ ಲಕ್ಷಣ

ಗಳನ್ನೂ ತಿಳಿದಿರಬೇಕು. ಬಾಲಕನ ಬುದ್ಧಿಯ ಬೆಳವಣಿಗೆಯ ಕಲ್ಪನೆಯು ಮನಶ್ಶಾಸ್ತ್ರದ ಅಭ್ಯಾಸದಿಂದ ಉಂಟಾಗುವುದು. ಇದಲ್ಲದೆ ಆಧುನಿಕ ಶಿಕ್ಷಣದ ಸಮಸ್ಯೆಗಳನ್ನು—ಸಾಮಾನ್ಯ ಶಿಕ್ಷಣ, ಪ್ರೌಢಶಿಕ್ಷಣ, ಸ್ತ್ರೀಶಿಕ್ಷಣ, ಸಹಶಿಕ್ಷಣ, ವೃತ್ತಿಶಿಕ್ಷಣ, ಶಾರೀರಿಕ ಶಿಕ್ಷಣ, ನೈತಿಕ-ಧಾರ್ಮಿಕ ಶಿಕ್ಷಣ ಮುಂತಾದುವುಗಳ ಸಮಸ್ಯೆಗಳನ್ನು—ಬಿಡಿಸುವಾಗಲೂ ಮನಶ್ಶಾಸ್ತ್ರದ ಪರಿಚಯವು ತುಂಬಾ ಸಹಾಯಕವಾಗುತ್ತದೆ.

ಮನುಷ್ಯನನ್ನು ಕುರಿತು ವಿವೇಚಿಸುವ ಸಾಹಿತ್ಯ, ಕಲೆ, ತತ್ವ, ಧರ್ಮ, ನೀತಿ, ರಾಜನೀತಿ, ನ್ಯಾಯ, ವೈದ್ಯ, ಶಿಕ್ಷಣ ಈ ಎಲ್ಲ ಶಾಸ್ತ್ರಗಳಿಗೂ ಮನಶ್ಶಾಸ್ತ್ರದ ಬೆಂಬಲವು ಬೇಕೇಬೇಕು. ಶಿಕ್ಷಣಶಾಸ್ತ್ರವು ಮನುಷ್ಯನ ಸಂಸ್ಕೃತಿಗೆ ಸಂಬಂಧಿಸಿದ ಸಂಗತಿಗಳನ್ನು ವಿವೇಚಿಸುವುದರಿಂದ ಅದು ಮನಶ್ಶಾಸ್ತ್ರದ ಸಹಾಯವನ್ನು ಕೋರಲೇಬೇಕು, ಪಡೆಯಲೇಬೇಕು. ಮನುಷ್ಯನ ಮನಸ್ಸಿನ ಸ್ವರೂಪ, ಸಹಜಪ್ರವೃತ್ತಿಗಳು, ಪರಂಪರೆ ಮತ್ತು ಪರಿಸ್ಥಿತಿಗಳಿಂದ ಬುದ್ಧಿಯ ಮೇಲೂ ಸ್ವಭಾವದ ಮೇಲೂ ಆಗುವ ಪರಿಣಾಮ, ಜ್ಞಾನದ ಬೆಳವಣಿಗೆ, ಮನಸ್ಸಿನ ವಿಕಾಸ, ಬುದ್ಧಿಯ ಮಾಪನೆ, ಶೀಲ, ಸ್ವಭಾವ, ಅಭಿರುಚಿ, ಅವಧಾನ, ಸ್ಮರಣೆ, ವಿವೇಚನೆ, ತರ್ಕ, ಊಹೆ, ಕಲ್ಪನೆ, ಶಿಕ್ಷಕನ ಪ್ರತಿಭೆ, ವ್ಯಕ್ತಿತ್ವ ಮೊದಲಾದ ವಿಷಯಗಳ ಜ್ಞಾನವು ಶಿಕ್ಷಕನಿಗೆ ಆವಶ್ಯಕವಾದುದರಿಂದ ಅವನು ಮನಶ್ಶಾಸ್ತ್ರದ ಅಭ್ಯಾಸವನ್ನು ಮಾಡಲೇಬೇಕಾದುದು ನಿರ್ವಿವಾದದ ಮಾತಾಗಿದೆ.

ಹೀಗೆ ಮನಶ್ಶಾಸ್ತ್ರವು ಇಂದಿನ ಶಿಕ್ಷಣತತ್ವಗಳಲ್ಲಿ ಅಗ್ರಸ್ಥಾನವನ್ನು ಪಡೆದಿರುತ್ತದೆ. ಆದರೆ ಶಿಕ್ಷಣದ ಕ್ಷೇತ್ರವು ವಿಶಾಲವಾದುದು. ಶಿಕ್ಷಣದ ಎಲ್ಲ ವಿಷಯಗಳೂ ಮನಶ್ಶಾಸ್ತ್ರದಲ್ಲಿ ಬರಲಾರವು. ಮನಶ್ಶಾಸ್ತ್ರವು ನಿರ್ಣಯಿಸದ ಕೆಲವು ವಿಷಯಗಳು ಶಿಕ್ಷಣಶಾಸ್ತ್ರದಲ್ಲಿ ಬರುವವು. ಶಿಕ್ಷಣದ ಧ್ಯೇಯಗಳನ್ನು ಗೊತ್ತುಪಡಿಸುವ ಕಾರ್ಯವು ಮನಶ್ಶಾಸ್ತ್ರದ್ದಲ್ಲ; ಅದು ತತ್ವಶಾಸ್ತ್ರದ ಕೆಲಸವು. ಶಿಕ್ಷಕನು ತನ್ನ ಎದುರಿನಲ್ಲಿ ಯಾವ ಉದ್ದೇಶಗಳನ್ನು ಇಟ್ಟುಕೊಂಡಿರಬೇಕು, ಯಾವ ಆದರ್ಶವನ್ನು ಸಾಧಿಸಬೇಕು ಎಂಬ ಉದಾತ್ತ ವಿಚಾರಗಳನ್ನು ಹೇಳುವುದು ತತ್ವಜ್ಞಾನ. ಶಿಕ್ಷಣದ ಧ್ಯೇಯಗಳನ್ನು ನಿರ್ಣಯಿಸುವುದು

ಮನಶ್ಶಾಸ್ತ್ರದ ಕಾರ್ಯವಲ್ಲವೆಂದು ಒಪ್ಪಿಕೊಂಡರೂ ಅದು ಅವುಗಳ ಸಾಧ್ಯಾಸಾಧ್ಯತೆಯನ್ನು ಹೇಳಬಲ್ಲುದು. ಉದಾಹರಣಾರ್ಥವಾಗಿ—ಪ್ರವೃತ್ತಿಯನ್ನು ನಾಶಮಾಡುವುದು ಅಸಾಧ್ಯವೆಂದು ಮನಶ್ಶಾಸ್ತ್ರವು ಹೇಳುತ್ತದೆ. "ವ್ಯಕ್ತಿತ್ವದ ವಿಕಾಸವೇ ಶಿಕ್ಷಣದ ಧ್ಯೇಯ" ಎಂದು ಸರ್ ಟಿ. ಪರ್ಸಿ ನನ್ ಅವರ ಅಭಿಪ್ರಾಯ. ಈ ಧ್ಯೇಯವುಳ್ಳ ಶಿಕ್ಷಣವೇ ನಿಸರ್ಗಾನುಗಾಮಿಯಾದ ಶಿಕ್ಷಣವೆಂದು ತೋರಿಸಲು ಮನಶ್ಶಾಸ್ತ್ರದ ಆಧಾರವನ್ನೇ ಇಟ್ಟುಕೊಳ್ಳಲಾಗಿದೆ. ಈ ಧ್ಯೇಯವನ್ನು ತಾನು ಎಷ್ಟರಮಟ್ಟಿಗೆ ಸಾಧಿಸಿದ್ದೇನೆಂಬುದನ್ನೂ ವಿದ್ಯಾರ್ಥಿಯ ಆಚಾರ-ವಿಚಾರಗಳನ್ನು ತಿದ್ದುವಲ್ಲಿ ತಾನು ಯಶಸ್ವಿಯಾಗಿರುವನೊ ಇಲ್ಲವೊ ಎಂಬುದನ್ನೂ ಶಿಕ್ಷಕನು ಮನಶ್ಶಾಸ್ತ್ರದ ಸಹಾಯವಿಲ್ಲದೆ ತಿಳಿದುಕೊಳ್ಳಲಾರನು. ಶಿಕ್ಷಕನ ಕಾರ್ಯಸಾಫಲ್ಯದ ಮಟ್ಟನ್ನು ಪರೀಕ್ಷಿಸುವ ಒರೆಗಲ್ಲೇ ಮನಶ್ಶಾಸ್ತ್ರವು. ಮನಶ್ಶಾಸ್ತ್ರವು ಶಿಕ್ಷಕನ ಧ್ಯೇಯಸಾಧನೆಯ ಮಾರ್ಗದಲ್ಲಿಯ ವಿದ್ಯುದ್ದೀಪವು.

ಮನಶ್ಶಾಸ್ತ್ರದ ಕೇವಲ ಪರಿಚಯವನ್ನು ಮಾಡಿಕೊಳ್ಳುವುದರಿಂದ ಶಿಕ್ಷಕನು ಆದರ್ಶ ಶಿಕ್ಷಕನಾಗಲಾರನು. ಪ್ರತಿನಿತ್ಯವೂ ಅದರ ಉಪಯೋಗವನ್ನು ತನ್ನ ಕಾರ್ಯದಲ್ಲಿ ಮಾಡಿಕೊಳ್ಳುವ ಜಾಣ್ಮೆಯೂ ಕೌಶಲ್ಯವೂ ಪ್ರತಿಭೆಯೂ ಅವನಲ್ಲಿರಬೇಕು. ಇವುಗಳಲ್ಲದೆ ವಿದ್ಯಾರ್ಥಿಗಳ ಕೂಡ ಯಾವ ಬಗೆಯ ವರ್ತನೆಯನ್ನಿಡಬೇಕೆಂಬ ಜ್ಞಾನ, ವಿಷಯಪ್ರಭುತ್ವ, ಕಾರ್ಯದಕ್ಷತೆ, ಶಿಕ್ಷಣ ವ್ಯವಸಾಯದಲ್ಲಿ ಪ್ರೇಮ, ಅಚ್ಚುಕಟ್ಟುತನ ಮೊದಲಾದುವೂ ಶಿಕ್ಷಕನಿಗೆ ಅತ್ಯಾವಶ್ಯಕ.

ಮನಶ್ಶಾಸ್ತ್ರದಲ್ಲಿಯೂ ಅನೇಕ ಭೇದಗಳುಂಟು. ಅವೆಲ್ಲವುಗಳ ಪರಿಚಯವು ಶಿಕ್ಷಕನಿಗೆ ಒಂದೊಂದು ಬಗೆಯಿಂದ ಸಹಾಯವೀಯುವುದು. ಅಲ್ಲದೆ ಅವನಿಗೆ ತನ್ನ ವರ್ತನ, ತನ್ನ ಮನಸ್ಸಿನ ವ್ಯಾಪಾರಗಳ ನಿರೀಕ್ಷಣೆ, ತನ್ನ ಬಾಲ್ಯಾವಸ್ಥೆಯ ಅನುಭವಗಳ — ಆಚಾರ-ವಿಚಾರಗಳ — ಸ್ಮರಣೆ ಮೊದಲಾದುವು ಹೆಚ್ಚು ಪ್ರಯೋಜನಕಾರಿಗಳಾಗುವುವು. ಇವೆಲ್ಲವು ಚಿಕ್ಕ ಮಕ್ಕಳ ವರ್ತನೆಯನ್ನು ಪರೀಕ್ಷಿಸಲು ನೆರವಾಗುವುವು.

ರೋಗಿಯನ್ನು ಪರೀಕ್ಷಿಸಿ ವೈದ್ಯನು ಔಷಧವನ್ನು ಕೊಡುವಂತೆ ವಿದ್ಯಾರ್ಥಿಯನ್ನು ಪರೀಕ್ಷಿಸಿ ಶಿಕ್ಷಕನು ವಿದ್ಯೆಯನ್ನು ಕೊಡಬೇಕು. ರೋಗಿಯ ದೇಹ ಸಾಮರ್ಥ್ಯವನ್ನು ನೋಡಿ ಆಹಾರವನ್ನು ಕೊಡುವಂತೆ ವಿದ್ಯಾರ್ಥಿಯ ಬುದ್ಧಿ ಸಾಮರ್ಥ್ಯವನ್ನು ನೋಡಿ ವಿಷಯವನ್ನು ಬೋಧಿಸಬೇಕು. ರೋಗಿಯನ್ನು ನಿರೋಗಿಯನ್ನಾಗಿ ಮಾಡುವದು ವೈದ್ಯನ ಧ್ಯೇಯವಿದ್ದಂತೆ ಅಶಿಕ್ಷಿತನನ್ನು ಸುಶಿಕ್ಷಿತನನ್ನಾಗಿ ಮಾಡುವುದು ಶಿಕ್ಷಕನ ಧ್ಯೇಯವಾಗಿದೆ. ವೈದ್ಯನಿಗೆ ಶರೀರ ವಿಜ್ಞಾನದ ಅಭ್ಯಾಸವು ಅವಶ್ಯವಿರುವಂತೆ ಶಿಕ್ಷಕನಿಗೆ ಮನೋವಿಜ್ಞಾನದ ಅಭ್ಯಾಸವು ಆವಶ್ಯಕ. ಮನಶ್ಶಾಸ್ತ್ರದ ಪರಿಚಯವಿಲ್ಲದ ಶಿಕ್ಷಕನು ಚುಕ್ಕಾಣಿ ಇಲ್ಲದ ಹಡಗವಿದ್ದಂತೆ. ಆದುದರಿಂದ ಶಿಕ್ಷಕನು ಮನಶ್ಶಾಸ್ತ್ರವನ್ನು ಆಳವಾಗಿಯೂ ಆಸ್ಥೆಯಿಂದಲೂ ಅಭ್ಯಸಿಸಬೇಕು.

ಮನಶ್ಶಾಸ್ತ್ರದ ಯಾವ ಯಾವ ತತ್ವಗಳನ್ನು ಅರಿತುಕೊಂಡರೆ ಶಿಕ್ಷಕನಿಗೆ ತನ್ನ ಕಾರ್ಯದಲ್ಲಿ ಯಶಸ್ಸು ಸಿಕ್ಕಲು ಅನುಕೂಲವಾಗುವುದು ಎಂಬುದನ್ನು ಮುಂದಿನ ಪ್ರಕರಣಗಳಲ್ಲಿ ವಿಶದವಾಗಿ ವಿವೇಚಿಸಲಾಗಿದೆ.

೨

# ಮನಸ್ಸಿನ ಸ್ವರೂಪ

ಶಿಕ್ಷಕನಿಗೆ ಮನಶ್ಶಾಸ್ತ್ರದ ಅಭ್ಯಾಸವು ಅತ್ಯವಶ್ಯವೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ಹೇಳಲಾಗಿದೆ. ಮನಶ್ಶಾಸ್ತ್ರವೆಂದರೇನು, ಅದು ಚರ್ಚಿಸುವ ವಿಷಯವಾವುದು ಮತ್ತು ಅದನ್ನು ಅಭ್ಯಸಿಸುವ ಬಗೆ ಯಾವುದು ಎಂಬುದನ್ನು ಕುರಿತು ಈಗ ಸ್ವಲ್ಪ ವಿಚಾರಿಸುವ.

ಡ್ರಿವ್ಹರ್ ಎಂಬ ಮನಶ್ಶಾಸ್ತ್ರಜ್ಞನು "ಪ್ರಾಣಿಗಳ ಮನಃಪ್ರೇರಿತವಾದ ವರ್ತನೆಯನ್ನು ಮನಸಿನ ದೃಷ್ಟಿಯಿಂದ ವಿವರಿಸುವ ಶಾಸ್ತ್ರವೇ ಮನಶ್ಶಾಸ್ತ್ರವು" ಎಂದು ಹೇಳಿರುವನು. ಎಂದರೆ ಮನೋವ್ಯಾಪಾರಗಳಿಗೆ ಸಂಬಂಧಪಟ್ಟ ಶಾಸ್ತ್ರವೇ ಮನಶ್ಶಾಸ್ತ್ರವೆಂದು ಹೇಳಿದಂತಾಯಿತು. ಹಾಗಾದರೆ ಮನಸ್ಸೆಂದರೆ ಏನು ? "ಚೇತನವುಳ್ಳ ಒಂದು ವಸ್ತುವೇ ಮನಸ್ಸು" ಎಂದು ಮ್ಯಾಕ್‌ಡೂ-ಗಲ್ಲನು ಹೇಳಿರುವನು. ಚೇತನವೆಂದರೇನು ? ಚೇತನವು ಒಂದು ಮಾನಸಿಕ ಸ್ಥಿತಿಯು. ಅದು ಒಂದು ಪ್ರವಾಹದಂತಿದೆ. ಅದರಲ್ಲಿ ಅನೇಕ ವ್ಯಾಪಾರಗಳು ನಡೆಯುತ್ತಿರುತ್ತವೆ. ಆ ವ್ಯಾಪಾರಗಳನ್ನೂ ಅವುಗಳ ಕಾರಣಗಳನ್ನೂ ತಿಳಿಸಿ ಕೊಡುವುದೇ ಮನಶ್ಶಾಸ್ತ್ರವು.

**ಅಂತರಾವಲೋಕನ ಮತ್ತು ವರ್ತನಾವಲೋಕನ.**—ಮನೋವ್ಯಾಪಾರಗಳನ್ನು ತಿಳಿದುಕೊಳ್ಳಲು ಬಗೆಗಳು ಎರಡಿವೆ: (೧) ಅಂತರಾವಲೋಕನ (ಒಳನೋಟ) (೨) ವರ್ತನಾವಲೋಕನ (ಹೊರನೋಟ). ಅಂತರಾವಲೋಕನದಲ್ಲಿ "ಮನಸ್ಸು ತನ್ನ ಕಾರ್ಯಕಲಾಪಗಳನ್ನು ತಾನೇ ನಿರೀಕ್ಷಿಸುವುದು." ಪ್ರತಿಯೊಬ್ಬನು ತನ್ನ ಅನುಭವಗಳನ್ನು ವಿಂಗಡಿಸಿ ಅವುಗಳ ಲಕ್ಷಣಗಳನ್ನು ತಿಳಿದುಕೊಳ್ಳುವುದು ಮನಶ್ಶಾಸ್ತ್ರದ ಮುಖ್ಯವಾದ ರೀತಿಯಾದರೂ ಒಂದು ದೃಷ್ಟಿಯಿಂದ ಇದು ದೋಷಯುಕ್ತವಾಗಿದೆ. ಏಕೆಂದರೆ

ಇಲ್ಲಿ ನಿರೀಕ್ಷಕನೂ ನಿರೀಕ್ಷಿಸಲ್ಪಡುವ ವಸ್ತುವೂ ಭಿನ್ನವಾಗಿರದೆ ಒಂದೇ ಆಗಿವೆ. ಎರಡೂ ಕ್ರಿಯೆಗಳನ್ನು ಮನಸ್ಸು ಏಕಕಾಲಕ್ಕೆ ಮಾಡಲಾರದು. ನಾನು ಸಿಟ್ಟಿನ ಭರದಲ್ಲಿದ್ದಾಗ ನನ್ನ ಸಿಟ್ಟನ್ನು ನಾನೇ ಪರೀಕ್ಷಿಸಲು ಉದ್ಯುಕ್ತನಾದರೆ ನನ್ನ ಸಿಟ್ಟೇ ತಣ್ಣಗಾಗುವುದು. ಜೇಮ್ಸನು ಇದನ್ನು ಒಂದು ಉಪಮೆಯಿಂದ ಸುಂದರವಾಗಿ ಹೇಳಿದ್ದಾನೆ—"ಕತ್ತಲನ್ನು ನೋಡಲು ದೀಪ ಹಚ್ಚಿದ ಹಾಗೆ ಇದೆ ಅಂತರಾವಲೋಕನ" ಎಂದು. ಈ ದೋಷವನ್ನು ಅನುಭವಸ್ಮರಣೆಯಿಂದ ದೂರ ಮಾಡಲು ಸಾಧ್ಯವಿದೆ. ಆದರೆ ಬಾಲಕರ, ಹುಚ್ಚರ, ಕಾಡುಜನರ ಮನೋವೃತ್ತಿ – ವ್ಯಾಪಾರಗಳನ್ನು ಅಂತರಾವಲೋಕನದ ಸಹಾಯದಿಂದ ತಿಳಿಯುವುದು ಕಠಿನವೆನಿಸುವುದು. ಅಲ್ಲದೆ ಇದು ವ್ಯಕ್ತಿಗತವೆಂಬ ದೋಷಕ್ಕೂ ಗುರಿಯಾಗಿರುತ್ತದೆ. ಒಬ್ಬನ ಮನೋವೃತ್ತಿಯನ್ನು ಇನ್ನೊಬ್ಬನು ಅನುಭವಿಸಲಾರನು. ಈ ತರಹದ ಆಕ್ಷೇಪಗಳನ್ನು ತಪ್ಪಿಸಲೋಸುಗ ವರ್ತನವಾದಿಗಳು ಹೊರನೋಟದ ರೀತಿಯನ್ನು ಅನುಸರಿಸುತ್ತಾರೆ. ಅಂಗಚೇಷ್ಟೆ, ನಡೆ-ನುಡಿ ಮುಂತಾದ ವರ್ತನದ ಬಾಹ್ಯಚಿಹ್ನಗಳಿಂದ ಮನೋವೃತ್ತಿಗಳನ್ನು ತಿಳಿದುಕೊಳ್ಳುವುದೇ ವರ್ತನಾವಲೋಕನವೆನಿಸುವುದು. ಮನುಷ್ಯನ ಅಂಗವಿಕಾರಗಳನ್ನು ನೋಡಿ ಅವನು ಸಿಟ್ಟಿನಲ್ಲಿರುವನೆಂದು ಅನುಮಾನಿಸಲು ಬರುವುದು. ಆದರೆ ನಮ್ಮ ಸ್ವಂತ ಸಿಟ್ಟಿನ ಅನುಭವವೇ ಈ ಅನುಮಾನಕ್ಕೆ ಆಧಾರವು. ಹೀಗೆ ಹೊರನೋಟಕ್ಕೂ ಒಳನೋಟವೇ ಮೂಲಾಧಾರವಾಗಿದೆ. ಅಂತರಾವಲೋಕನ, ವರ್ತನಾವಲೋಕನ ಇವೆರಡನ್ನೂ ಒಳಗೊಂಡ ಪ್ರಾಯೋಗಿಕ ರೀತಿಯನ್ನು ಅನುಸರಿಸುವ ಮೂರನೆಯದೊಂದು ಮಾರ್ಗವೂ ಈಗ ಪ್ರಚಾರದಲ್ಲಿ ಬಂದಿದೆ.

**ಮನುಷ್ಯನು ಯಂತ್ರವಲ್ಲ.**— ಮನಶ್ಶಾಸ್ತ್ರವು ಮನಸ್ಸಿಗೆ ಸಂಬಂಧಪಟ್ಟ ಶಾಸ್ತ್ರವಾದುದರಿಂದ ಮನಸ್ಸಿನ ಸ್ವರೂಪವಾವುದೆಂಬುದನ್ನು ಮೊದಲು ವಿಚಾರಿಸುವುದು ವಿಹಿತವಾಗುವುದು. ಮನಸ್ಸಿನ ಸ್ವರೂಪವು ಪ್ರಾಣಿಗಳ ವರ್ತನದಲ್ಲಿ ಅಥವಾ ವ್ಯವಹಾರದಲ್ಲಿ ವ್ಯಕ್ತವಾಗುತ್ತದೆ. ಪ್ರಾಣಿಯ ವರ್ತನಕ್ಕೂ ಯಂತ್ರದ ಕ್ರಿಯೆಗೂ ಮಹದಂತರವುಂಟು. ಕಾಲಿನಿಂದ ಒದೆದ ಚೆಂಡು ನೆಲದ ಮೇಲೆ ಉರುಳಬಹುದು, ಇಲ್ಲವೆ ಆಕಾಶದಲ್ಲಿ ವಕ್ರಾಕಾರವಾಗಿ ಚಲಿಸಿ ನೆಲಕ್ಕೆ ಬೀಳಬಹುದು. ಚೆಂಡಿನ ಈ ಚಲನವು ಕಾಲಿನ ಒದಿಕೆ,

ಗುರುತ್ವಾಕರ್ಷಣ ಶಕ್ತಿ, ಭೂಮಿಯ ಘರ್ಷಣಶಕ್ತಿ ಮತ್ತು ಗಾಳಿಯ ತಡೆ ಇವುಗಳನ್ನು ಅವಲಂಬಿಸಿರುತ್ತದೆ. ಈ ಚಲನಕ್ರಿಯೆಯು ಕೇವಲ ಹೊರಗಿನ ಭೌತಿಕ ನಿಯಮಗಳಿಗೆ ಒಳಪಟ್ಟಿರುತ್ತದೆ. ಚೆಂಡಿಗೆ ಸ್ವತಂತ್ರವಾದ ಇಚ್ಛೆ ಇಲ್ಲ ಆದರೆ ಅದೇ ಒಂದು ಗುಬ್ಬಿಯ ವರ್ತನೆಯನ್ನು ನೋಡಿದರೆ ಅದು ಬೇರೆಯಾಗಿ ಕಾಣುತ್ತದೆ. ತನ್ನನ್ನು ಹಿಡಿಯಲಿಕ್ಕೆ ಬಂದ ಬೆಕ್ಕನ್ನು ನೋಡಿ ಅದು ಹಾರಿ ಸುರಕ್ಷಿತವಾದ ಮರದ ರೆಂಬೆಯ ಮೇಲೆ ಹೋಗಿ ಕುಳಿತು ಕೊಳ್ಳುತ್ತದೆ. ಚೆಂಡಿನ ಚಲನವು ಯಾಂತ್ರಿಕ ಕ್ರಿಯೆಯು; ಗುಬ್ಬಿಯ ಚಲನವು ಯಾಂತ್ರಿಕ ನಿಯಮಗಳಿಗೆ ಒಳಪಡದ ವರ್ತನವು ಗುಬ್ಬಿಯ ವರ್ತನವು ಅಂತರಂಗಪ್ರೇರಿತವಾದುದು – ಸ್ವಯಂಸ್ಫೂರ್ತಿಯಿಂದಾದುದು; ಚೆಂಡಿನ ಚಲನವು ಬಾಹ್ಯನಿಯಂತ್ರಿತವಾದುದು. ಅಂದರೆ ಕೇವಲ ಸ್ಥೂಲಸೃಷ್ಟಿಯ—ಭೌತವಿಜ್ಞಾನದ—ನಿಯಮಗಳಿಗೆ ಚೆಂಡಿನ ಚಲನವು ಒಳಪಟ್ಟಿರುವುದು. ಈ ಸಂದರ್ಭದಲ್ಲಿ ಗುಬ್ಬಿಯು ಕಾಲಕಾಲಕ್ಕೆ ಬೇರೆ ಬೇರೆ ರೀತಿಯಲ್ಲಿ ವರ್ತಿಸಬಹುದು, ಆದರೆ ಚೆಂಡಿನ ಮಾತು ಹಾಗಲ್ಲ. ಅದರ ಚಲನೆಯಲ್ಲಿ ಗುಬ್ಬಿಯ ವೈವಿಧ್ಯಯುಕ್ತವಾದ ಚಲನವು ಕಂಡು ಬರಲಾರದು. ಇದರಲ್ಲಿ ಒಂದು ಮುಖ್ಯವಾದ ವಿಷಯವೇನೆಂದರೆ— **ವರ್ತನವು ಉದ್ದೇಶಯುತವಾದುದು.** ಚೆಂಡಿನ ಚಲನವು ಉದ್ದೇಶರಹಿತ ವಾದುದು, ಗುಬ್ಬಿಯ ಚಲನವು ಉದ್ದೇಶಯುತವಾದುದು; ಸುರಕ್ಷಿತವಾದ ಸ್ಥಾನವನ್ನು ಹೊಂದುವುದೇ ಇಲ್ಲಿ ಗುಬ್ಬಿಯ ಚಲನದ ಮುಖ್ಯ ಉದ್ದೇಶವು, ಗುರಿಯು.

ಈ ವ್ಯತ್ಯಾಸದ ಮೇಲಿಂದ ಸೃಷ್ಟಿಯೊಳಗಿನ ವಸ್ತುಗಳಲ್ಲಿ ಸಚೇತನ ಮತ್ತು ಅಚೇತನ ಎಂಬ ಎರಡು ಮುಖ್ಯ ವರ್ಗಗಳನ್ನು ಮಾಡಬಹುದು. ಸಚೇತನ ವಸ್ತುಗಳಲ್ಲಿ ಎಲ್ಲ ಜೀವಿಗಳೂ ಅಚೇತನ ವಸ್ತುಗಳಲ್ಲಿ ಸರ್ವ ಜಡಪದಾರ್ಥಗಳೂ ಸಮಾವೇಶವಾಗುವವು. ಸಚೇತನ ವಸ್ತುಗಳ ವರ್ತನಕ್ಕೆ ಯಾವುದಾದರೊಂದು ಉದ್ದೇಶವಾಗಲಿ, ಧ್ಯೇಯವಾಗಲಿ ಕಾರಣವಾಗಿರು ತ್ತದೆ; ಆದರೆ ಅಚೇತನ ವಸ್ತುಗಳ ಚಲನೆಗೆ ಭೌತಿಕ ಮತ್ತು ರಸಾಯನ ಶಾಸ್ತ್ರದ ನಿಯಮಗಳು ಕಾರಣವಾಗಿರುತ್ತವೆ. "ಉದ್ದೇಶವಿಲ್ಲದೆ ಮಂದ ಮತಿಯೂ ಸಹ ವರ್ತಿಸುವುದಿಲ್ಲ"—**प्रयोजनमनुद्दिश्य न मन्दोऽपि प्रवर्तते ।**

ಮನುಷ್ಯನ ವರ್ತನಕ್ಕೆ ಆಹಾರ, ವಿಶ್ರಾಂತಿ, ಜ್ಞಾನ, ಹೊನ್ನು, ಹೆಣ್ಣು, ಜಯ, ಗೌರವ, ಧರ್ಮ, ಪರೋಪಕಾರ, ಮೊದಲಾದ ಯಾವುದಾದ ರೊಂದು ಉದ್ದೇಶವೊ ಗುರಿಯೊ ಕಾರಣವಾಗಿರುತ್ತದೆ. ಜಡವಸ್ತುಗಳ ಕ್ರಿಯೆಗಳು ಯಾಂತ್ರಿಕವಾಗಿರುವುದರಿಂದ, ಅವುಗಳ ನಿಯಮಗಳು ಪ್ರಾಣಿಗಳ ವರ್ತನಕ್ಕೆ ಅನ್ವಯಿಸಲಾರವು. ಜೀವಿಗಳ ಕ್ರಿಯೆಯ ನಿಯಮಗಳೇ ಬೇರೆ, ಜಡವಸ್ತುಗಳ ಕ್ರಿಯೆಗಳ ನಿಯಮಗಳೇ ಬೇರೆ. ಜಡವಸ್ತುಗಳ ಕ್ರಿಯೆಯು ಯಂತ್ರವತ್ ಇರುವುದರಿಂದ ಮನಶ್ಶಾಸ್ತ್ರವು ಅವುಗಳಿಗೆ ಸಂಬಂಧಪಟ್ಟಿರುವು ದಿಲ್ಲ. ಮನಶ್ಶಾಸ್ತ್ರದ ವಿಷಯವು ವರ್ತನವು, ಯಂತ್ರಕ್ರಿಯೆಯಲ್ಲ. ಅದು ಜೀವಿಗಳ ಕ್ರಿಯೆಗಳಿಗೆ ಸಂಬಂಧಪಟ್ಟ ವಿಷಯವಾಗಿದೆ. ಇರುವೆ ಮೊದಲಾದ ಸರ್ವ ಜೀವರಾಶಿಗಳು ಸ್ವಾತಂತ್ರ್ಯವುಳ್ಳ ಚೈತನ್ಯಗಳು. ಈ ಚೈತನ್ಯವು ಕ್ಷುದ್ರಜಂತುವಿನಿಂದ ಮೊದಲುಗೊಂಡು ಶ್ರೇಷ್ಠಜೀವಿಯಾದ ಮನುಷ್ಯನ ವರೆಗೂ ವಿಕಾಸಹೊಂದುತ್ತ ಹೋಗುವುದು. ಮನುಷ್ಯನು ತನ್ನ ಬುದ್ಧಿಬಲ ದಿಂದ ಸಾರಾಸಾರ ವಿಚಾರಮಾಡಿ, ಇಹಪರ ಕಲ್ಪನೆಯಿಂದೊಡಗೂಡಿದವ ನಾಗಿ, ಅಗೋಚರವಾದ ಧ್ಯೇಯಗಳನ್ನಿಟ್ಟುಕೊಂಡು ತಾನು ವ್ಯವಹರಿಸ ಬೇಕಾದ ಮಾರ್ಗವನ್ನು ಹಾಕಿಕೊಳ್ಳುತ್ತಾನೆ.

ಜೀವಿಯು ಯಂತ್ರವಲ್ಲವೆಂದು ಒಪ್ಪಿಕೊಂಡ ಮೇಲೆ ನಾವು ಮನಸ್ಸಿನ ಅಸ್ತಿತ್ವವನ್ನೂ ಒಪ್ಪಿದಂತಾಯಿತು. ವರ್ತನದ ಎರಡು ಮುಖ್ಯ ಲಕ್ಷಣಗಳಾದ **ಗುರಿಶೋಧನೆ ಮತ್ತು ಕಾರ್ಯವ್ಯತ್ಯಾಸ** ಇವು ಮನಸ್ಸು ಉಂಟೆಂಬುದಕ್ಕೆ ಬಲವಾದ ಸಾಕ್ಷಿಗಳು. ಮನಸ್ಸಿನ ಅಸ್ತಿತ್ವವು ಮನಶ್ಶಾಸ್ತ್ರದ ಮೂಲ ಗ್ರಹಿಕೆಗಳಲ್ಲಿ ಮೊದಲನೆಯದು. ಈ ಗ್ರಹಿಕೆಯನ್ನು ಬಿಟ್ಟರೆ ನಾವು ವಿವೇಚಿಸುವುದು ಮನಶ್ಶಾಸ್ತ್ರವಾಗದೆ ಶರೀರಶಾಸ್ತ್ರವಾಗುವುದು. ಮನಸ್ಸು ಒಂದು ಸ್ಥೂಲವಾದ ವಸ್ತುವಲ್ಲ; ಅದು ಸ್ಥೂಲವಾಗಿದ್ದರೆ ಮಿದುಳಿನ ಒಂದು ಭಾಗವಾಗಿರಬೇಕಾಗಿದ್ದಿತು. ಮನಸ್ಸಿನಲ್ಲಿ ಸಂಭವಿಸುವ ಬಯಕೆ, ಭಯ, ಭಕ್ತಿ, ಸಂಕಲ್ಪ, ಆಶೆ, ಆಕಾಂಕ್ಷೆ, ವಿಚಾರ ಮೊದಲಾದವುಗಳು ಎಲ್ಲವೂ ಅಮೂರ್ತವಾಗಿವೆ. ಆದುದರಿಂದ ಮನಸ್ಸು ಸ್ಥೂಲಪದಾರ್ಥವೊ ಅಲ್ಲವೊ ಎಂಬುದನ್ನು ಕುರಿತು ಹೇಳುವುದೂ ಮನಸ್ಸಿನ ವ್ಯಾಖ್ಯೆಯನ್ನು ಹೇಳುವುದೂ

ಅಸಾಧ್ಯವಾದುದಾಗಿದೆ. ಆದರೂ ಮ್ಯಾಕ್‌ಡೂಗಲ್ಲ್‌ನು ಹೇಳುವಂತೆ 'ಜೀವಿಯ ಅನುಭವದಲ್ಲಿ ಮತ್ತು ಅವನ ವರ್ತನದಲ್ಲಿ ವ್ಯಕ್ತವಾಗುವುದೇ ಮನಸ್ಸು' ಎಂದು ಹೇಳಬಹುದು. ಎಷ್ಟು ಚಿಕ್ಕ ಪ್ರಾಣಿಯಾದರೂ ಅದರಲ್ಲಿರುವ ಈ ಮನಸ್ಸೇ ಅದನ್ನು ಯಂತ್ರದಿಂದ ಪ್ರತ್ಯೇಕಿಸುತ್ತದೆ. ಮನಸ್ಸು ವರ್ತನೆಗಳ ಸೂತ್ರಧಾರಕನಂತಿದೆ.

**ಮನಸ್ಸು ಮತ್ತು ದೇಹ.**— ಮನುಷ್ಯನೂ ಒಂದು ಜೀವಿಯೆ. ಅವನಲ್ಲಿರುವ ಮನಸ್ಸಿಗೂ ಅವನ ಶರೀರಕ್ಕೂ ನಿಕಟಸಂಬಂಧವು ಇರುತ್ತದೆ. ಈ ಸಂಬಂಧದ ಬಗ್ಗೆ ಅನೇಕ ಭಿನ್ನಾಭಿಪ್ರಾಯಗಳುಂಟು ಮನಸ್ಸು ಬೇರೆ, ದೇಹವು ಬೇರೆ ಎಂದು ಕೆಲವರು (ದ್ವೈತಿಗಳು) ಹೇಳುತ್ತಾರೆ. ಜಗತ್ತಿನಲ್ಲಿ ಒಂದೇ ಒಂದು ತತ್ವವು ಉಂಟೆಂದೂ ಶರೀರ ಮತ್ತು ಮನಸ್ಸು ಬೇರೆ ಬೇರೆ ಇಲ್ಲವೆಂದೂ ಬೇರೆ ಕೆಲವರು (ಅದ್ವೈತಿಗಳು) ಹೇಳುತ್ತಾರೆ. ಪೌರ್ವಾತ್ಯರಲ್ಲಿಯೂ ಪಾಶ್ಚಿಮಾತ್ಯರಲ್ಲಿಯೂ ಈ ಭಿನ್ನ ವಾದಗಳನ್ನು ಪ್ರತಿಪಾದಿಸುವ ಅನೇಕ ತತ್ವಜ್ಞಾನಿಗಳಿದ್ದಾರೆ. ಸರ್ ಟಿ. ಪರ್ಸಿ ನನ್ನ್ ಮೊದಲಾದ ಆಧುನಿಕ ಪಂಡಿತರು ಮನಸ್ಸು ಮತ್ತು ದೇಹ ಇವೆರಡನ್ನೂ ಒಂದರಿಂದ ಒಂದನ್ನು ಪ್ರತ್ಯೇಕಿಸುವುದಿಲ್ಲ. ದೇಹ-ಮನಸ್ಸು, ಮನಸ್ಸು-ದೇಹ ಇವೆರಡನ್ನೂ ಕೂಡಿಸಿಯೆ ವಿಚಾರಿಸುತ್ತಾರೆ. ಮನಸ್ಸು ಮತ್ತು ದೇಹ ಇವುಗಳ ಸಂಬಂಧವನ್ನು ಕುರಿತು ಆಳವಾಗಿ, ಅತ್ಯಂತ ಗೂಢವಾಗಿ ವಿಚಾರ ಮಾಡುವುದು ತತ್ವಶಾಸ್ತ್ರದ ಕಾರ್ಯವು. ಈ ವಿಷಯವನ್ನು ಶೈಕ್ಷಣಿಕ ಮನಶ್ಶಾಸ್ತ್ರದಲ್ಲಿ ವಿವೇಚಿಸುವುದು ಅನಾವಶ್ಯಕ. ಇಲ್ಲಿ ನಮಗೆ ಮುಖ್ಯವಾಗಿ ಬೇಕಾದುದು ಮನಸ್ಸಿನ ಅಸ್ತಿತ್ವದ ಗ್ರಹಿಕೆ—ಮನುಷ್ಯನಲ್ಲಿ ಮನಸ್ಸೆಂಬುದು ಒಂದು ಉಂಟು ಎಂಬ ಮಾತು. ಮನಸ್ಸು ಒಂದು ಅಖಂಡವಾದ ಚೈತನ್ಯವು. ಈ ಚೈತನ್ಯವು ಅಥವಾ ಶಕ್ತಿಯು ಅನೇಕ ರೀತಿಯಲ್ಲಿ ವರ್ತಿಸುತ್ತದೆ. ಪ್ರತಿಯೊಂದು ಕಾರ್ಯದಲ್ಲಿಯೂ ಸಂಪೂರ್ಣ ಮನಸ್ಸು ವ್ಯವಹರಿಸುತ್ತದೆ. ದೇಹವು ಬೆಳೆಯುತ್ತಿರುವಂತೆ ಮನಸ್ಸೂ ಶಾಖೋಪಶಾಖೆಗಳಲ್ಲಿ ವಿಕಾಸ ಹೊಂದುತ್ತದೆ. ಮ್ಯಾಕ್‌ಡೂಗಲ್ಲ್‌ನು ಇತ್ತೀಚೆಗೆ ಪ್ರಕಟಿಸಿದ "ಜೀವನ ಸಮಸ್ಯೆ" (*The Riddle of Life, 1938*) ಎಂಬ

ಪುಸ್ತಕದಲ್ಲಿ ಆಧುನಿಕ ವೈಜ್ಞಾನಿಕರು ಮನಸ್ಸಿನ ಅಸ್ತಿತ್ವವನ್ನು ಹೇಗೆ ನಂಬಲಾರಂಭಿಸಿರುವರೆಂಬುದನ್ನು ವಿಶದವಾಗಿ ವರ್ಣಿಸಿದ್ದಾನೆ. ಮನಸ್ಸಿನ ಸ್ವರೂಪದ ಬಗ್ಗೆ ಈ ಕಲ್ಪನೆಯನ್ನು ಬಹುಜನ ಮನಶ್ಶಾಸ್ತ್ರಕಾರರು ಒಪ್ಪುತ್ತಾರೆ.

ಮನಶ್ಶಾಸ್ತ್ರವನ್ನು ಅಭ್ಯಾಸ ಮಾಡುವಾಗ ಶರೀರಶಾಸ್ತ್ರಕ್ಕೆ ಸೇರಿದ ಮಜ್ಜಾವ್ಯೂಹದ ಪರಿಚಯವು ತಕ್ಕಮಟ್ಟಿಗಾದರೂ ಬೇಕೆಂದು ಕೆಲವರ ಅಭಿಪ್ರಾಯ. ಆದರೆ ಇದು ಅನಾವಶ್ಯಕವೆಂದು ತೋರುತ್ತದೆ. "ಶರೀರಶಾಸ್ತ್ರ ಮತ್ತು ಅಸ್ಥಿಪಂಜರದ ಜ್ಞಾನವು ತಿಲಮಾತ್ರವೂ ಇಲ್ಲದೆ ಅವಲೋಕನ, ಪ್ರಯೋಗ, ಅನುಮಾನ, ಪ್ರಮಾಣ ಇವುಗಳ ಆಧಾರದಿಂದ ನಾವು ಮನಶ್ಶಾಸ್ತ್ರವನ್ನು ರಚಿಸಬಲ್ಲೆವು" ಎಂದು ಮ್ಯಾಕ್‌ಡೂಗಲ್ಲನು ಹೇಳುತ್ತಾನೆ ಮನಸ್ಸು ನಿರಾಕಾರವಾದ ವಸ್ತುವೆಂದು ಹೇಳುವ ಆಧುನಿಕ ಪ್ರಖ್ಯಾತ ಮನಶ್ಶಾಸ್ತ್ರಜ್ಞರಲ್ಲಿ ಸ್ಟಾವುಟ್, ಸ್ಪಿಯರಮನ್, ಫ್ರಾಯ್ಡ್, ಮತ್ತು ಮ್ಯಾಕ್‌ಡೂಗಲ್ಲ್ ಇವರು ಅಗ್ರಗಣ್ಯರು.

**ಮನಸ್ಸಿನ ಸ್ವರೂಪ.**—ಮನಸ್ಸಿನ ಸ್ವರೂಪವನ್ನು ಎರಡು ಬಗೆಯಾಗಿ ವಿಂಗಡಿಸುತ್ತಾರೆ: (೧) ಅನುಭವ ಅಥವಾ ಮನೋವ್ಯಾಪಾರಗಳು (೨) ಮನಸ್ಸಿನ ವ್ಯೂಹ ಅಥವಾ ರಚನೆ. ಮನುಷ್ಯನು ಜಾಗ್ರತಾವಸ್ಥೆಯಲ್ಲಿದ್ದಾಗ ನಡೆಯುವ ಮನಸ್ಸಿನ ಕ್ರಿಯೆಯೆ ಅನುಭವವು. ಮನಸ್ಸಿನ ರಚನೆಯು ಅಪ್ರತ್ಯಕ್ಷವಾದುದು. ನಾವು ಅದರ ಸ್ವರೂಪವನ್ನು ಅದರ ಪರಿಣಾಮಗಳಿಂದ ಮಾತ್ರ ತಿಳಿದುಕೊಳ್ಳಬಹುದು.

ಮನುಷ್ಯನಿಗೆ ಚೆನ್ನಾಗಿ ಗೊತ್ತಿದ್ದ ವಿಷಯವೆಂದರೆ ಆತನ ಅನುಭವ. ನಾನು ನೋಡುತ್ತೇನೆ, ನಾನು ಕೇಳುತ್ತೇನೆ, ನಾನು ತಿಳಿದುಕೊಳ್ಳುತ್ತೇನೆ, ಬಯಸುತ್ತೇನೆ; ನಾನು ಸುಖಪಡುತ್ತಿದ್ದೇನೆ, ದುಃಖಪಡುತ್ತಿದ್ದೇನೆ; ನಾನು ಪ್ರಯತ್ನಿಸುತ್ತಿದ್ದೇನೆ ಮುಂತಾದ ನನ್ನ ಮನಸ್ಸಿನ ಸ್ಥಿತಿಗತಿಗಳೇ ನನ್ನ ಅನುಭವಗಳಾಗುತ್ತವೆ. ಈ ಅನುಭವವನ್ನು ಮೂರು ವಿಧವಾಗಿ ವಿಭಾಗಿಸಬಹುದು: (೧) ಬೋಧೆ (Cognition), (೨) ಸಂವೇದನೆ (Affect),

ಮತ್ತು (೩) ಸಂಕಲ್ಪ (Conation). ಹಾದಿಗುಂಟ ಹೋಗುವಾಗ ಒಂದು ಹೂವು ನನ್ನ ಕಣ್ಣಿಗೆ ಬೀಳುತ್ತದೆ. ಆ ಹೂವು ಗುಲಾಬಿಯ ಹೂವು ಎಂದು ಆಗುವ ಜ್ಞಾನವೇ ಬೋಧೆಯು. ಅದನ್ನು ನೋಡಿ ನನಗೆ ಆಹ್ಲಾದ ವಾಗುತ್ತದೆ. ಅದೇ ಸಂವೇದನೆ. ನಾನು ಆ ಹೂವನ್ನು ಬಯಸುತ್ತೇನೆ, ಅಥವಾ ಕೊಯ್ಯುತ್ತೇನೆ. ಇದೇ ಸಂಕಲ್ಪ. ಅನುಭವದ ಈ ಮೂರು ಬಗೆಯಾದ ಅಂಶಗಳು ಮುಪ್ಪುರಿಯಂತೆ ಒಂದಕ್ಕೊಂದು ಜೊತೆಯಾಗಿ ಸೇರಿಕೊಂಡಿರುತ್ತವೆ; ಅವು ಒಂದನ್ನೊಂದು ಅಗಲಿ ಇರುವುದಿಲ್ಲ. ಆದರೆ ಪ್ರಸಂಗಕ್ಕೆ ತಕ್ಕಂತೆ ಒಂದು ಪ್ರಬಲವಾಗಿರಬಹುದು, ಇನ್ನೆರಡು ನಿರ್ಬಲವಾಗಿ ಇರಬಹುದು. ಲೆಕ್ಕವನ್ನು ಬಿಡಿಸುವಾಗ ಬೋಧೆಯು ಪ್ರಧಾನವಾಗಿದ್ದರೂ ಸಂವೇದನೆಯು ಅಂದರೆ ಅದನ್ನು ಬಿಡಿಸುವಾಗ ಆಗುವ ಸಂತೋಷವೂ ಅದು ಕಠಿನವೆನಿಸಿದಾಗ ಆಗುವ ವ್ಯಥೆಯೂ ಅದರಲ್ಲಿ ಸಮಾವೇಶವಾಗಿರುತ್ತವೆ. ಲೆಕ್ಕವನ್ನು ಬಿಡಿಸಬೇಕೆಂದು ಮಾಡುವ ದೀರ್ಘವಾದ ಯತ್ನವೂ ಬಿಡಿಸಿದುದನ್ನು ಉಳಿದವರಿಗೆ ಹೇಳಬೇಕೆಂಬ ಇಚ್ಛೆಯೂ ಬೋಧೆಯಲ್ಲಿ ಸೇರಿಕೊಂಡಿರುತ್ತವೆ. ಈ ಬಗೆಯಾಗಿ ಹಾವನ್ನು ಕಂಡಾಗ ಪ್ರಬಲವಾಗಿರುವ ಭಯವು ಸಂವೇದನೆಯಲ್ಲಿ ಹುದುಗಿಕೊಂಡಿರುತ್ತದೆ. ಭಯೋತ್ಪಾದಕ ವಸ್ತುವಿನ ಜ್ಞಾನವೂ ಭಯವನ್ನು ತಪ್ಪಿಸಲು ಮಾಡುವ ಪ್ರಯತ್ನವೂ ಸಂವೇದನೆಯ ಕೂಡ ಇದ್ದೇ ಇರುತ್ತವೆ. ಓಡುವ ಮೇಲಾಟದಲ್ಲಿ ಸಂಕಲ್ಪವು ಪ್ರಬಲವಾಗಿರುತ್ತದೆ. ಆದರೆ ಆಶೆ–ನಿರಾಶೆ ಎಂಬ ಸಂವೇದನೆಯೂ ಗುರಿಯಾಗಿರುವ ವಸ್ತುವಿನ ಜ್ಞಾನವೂ ಅದರಲ್ಲಿ ಅಡಕವಾಗಿರುತ್ತವೆ. ಹೀಗೆ ಅನುಭವವು ಅಭೇದ್ಯವಾದ ಒಂದೇ ಒಂದು ವಸ್ತುವಾಗಿದೆ. ಆದರೆ ಈ ಅನುಭವವು ಯಾವನಾದರೂ ಒಬ್ಬ ವ್ಯಕ್ತಿಯದು ಮಾತ್ರ ಇರುತ್ತದೆ. ದುಃಖಾನುಭವವನ್ನು ವಿಚಾರಿಸುವಾಗ ಆ ದುಃಖವನ್ನು ಪಡೆಯುವ ಒಬ್ಬ ವ್ಯಕ್ತಿಯು ಇರಲೇಬೇಕು. ಮನಶ್ಶಾಸ್ತ್ರವು ಈ ವ್ಯಕ್ತಿಯ ವಿಚಾರವನ್ನೂ ಗ್ರಹಿಸಬೇಕಾಗುತ್ತದೆ.

ಮನಸ್ಸಿನ ಕ್ರಿಯೆಗಳು ಅಥವಾ ಅನುಭವಗಳು ಪ್ರತಿಕ್ಷಣಕ್ಕೂ ಬದಲಾಗುತ್ತ ಹೋಗುತ್ತವೆ. ಅನುಭವವನ್ನು ಒಂದು ಪ್ರವಾಹಕ್ಕೆ ಹೋಲಿಸ

ಬಹುದು. ಕವಿಯು "ಮನವೆಂಬ ಮರ್ಕಟವ........" ಎಂದು ಹಾಡುವಾಗ ಚಿತ್ತವೃತ್ತಿಗಳು ಚಂಚಲವೆಂದೇ ಹೇಳುತ್ತಾನೆ. ಚಿತ್ತವೃತ್ತಿಗಳು ಚಂಚಲ ವಾಗಿದ್ದಾಗ್ಯೂ ಅವುಗಳಿಗೆ ಆಧಾರವಾದ ಒಂದು ಸ್ಥಿರವಾದ ವಸ್ತುವು ಇರಲೇ ಬೇಕು. ಅನುಭವಕ್ಕೆ ಆಧಾರವಾದ ಮತ್ತು ಅನುಭವವನ್ನು ಸಜ್ಜುಗೊಳಿಸುವ ಮನಸ್ಸಿನ ಹಿನ್ನೆಲೆಯನ್ನೂ ನಾವು ಗ್ರಹಿಸಲೇಬೇಕು. ಇದಕ್ಕೆ ಮನಸ್ಸಿನ ವ್ಯೂಹ ಅಥವಾ ರಚನೆಯೆಂದು ಕರೆಯಬಹುದು. ಈ ವ್ಯೂಹವು ವ್ಯಕ್ತಿಯ ಮತ್ತು ವಂಶದ ಅನುಭವಗಳಿಂದ ಬದಲಾವಣೆಯನ್ನು ಹೊಂದುತ್ತ ಹೋಗುತ್ತದೆ. ಈ ವ್ಯೂಹವು ಅವ್ಯಕ್ತವಾಗಿರುವುದರಿಂದ ಇದರ ಅಸ್ತಿತ್ವವನ್ನು ಇದರ ಪರಿಣಾಮಗಳಿಂದಲೇ ನಾವು ತಿಳಿಯುತ್ತೇವೆ. ನಾನು ಒಬ್ಬ ಮನುಷ್ಯ ನನ್ನು ಇದೇ ಮೊದಲು ಭೆಟ್ಟಿಯಾಗಿರುವೆನೆಂದು ಕಲ್ಪಿಸುವ. ಕೆಲಕಾಲದ ವರೆಗೆ ಅವನ ವಿಷಯವನ್ನೇ ಮರೆಯುತ್ತೇನೆ. ಇನ್ನೊಂದು ಬಾರಿ ಅವನ ಭೆಟ್ಟಿಯಾದಾಗ ಅವನನ್ನು ನಾನು ಗುರುತಿಸುತ್ತೇನೆ. ಮೊದಲು ಭೆಟ್ಟಿ ಯಾದಾಗಿನ ಅನುಭವದ ಪರಿಣಾಮದಿಂದಲೇ ನಾನು ಅವನನ್ನು ಗುರುತಿಸಲು ಶಕ್ಯವಾಯಿತು. ಹೀಗೆ ನಮ್ಮಲ್ಲಿ ಪೂರ್ವದ ಅನುಭವದ ಪರಿಣಾಮಗಳು ಉಳಿಯುತ್ತವೆ. **ಈ ಅನುಭವ ಶೇಷಗಳನ್ನೇ ಮನಸ್ಸಿನ ಒಲವುಗಳೆಂದು ಕರೆಯುತ್ತಾರೆ.** ಮನಸ್ಸಿನ ಈ ಪೂರ್ವ ಒಲವುಗಳಿಂದುಂಟಾದ ವ್ಯೂಹವು ಅನುಭವದಿಂದ ಪ್ರತಿನಿತ್ಯವೂ ಬದಲಾವಣೆ ಹೊಂದುತ್ತ ಹೋಗುತ್ತದೆ ಮನಸ್ಸಿನ ವ್ಯೂಹವನ್ನು ಒಂದು ಕವಿತೆಯ 'ಶಬ್ದ' ವ್ಯೂಹಕ್ಕೆ ಅಥವಾ ರಾಗದ ಆಲಾಪಕ್ಕೆ ಹೋಲಿಸಬಹುದೆಂದು ಮ್ಯಾಕ್‌ಡೂಗಲ್ಲನು ಹೇಳುತ್ತಾನೆ. ಇದನ್ನು ಮಜ್ಜಾವ್ಯೂಹಕ್ಕೂ ಹೋಲಿಸಬಹುದು. ಆದರೆ ಮನಸ್ಸಿನ ವ್ಯೂಹವು ಒಂದು ಸ್ಥೂಲವಾದ ವಸ್ತುವೆಂದು ಕಲ್ಪಿಸಕೂಡದು. ಮನಸ್ಸಿನ ಕ್ರಿಯೆ ಗಳನ್ನು ಅನುಭವದ ಮೂಲಕ ನಾವು ಸುಲಭವಾಗಿ ತಿಳಿದುಕೊಳ್ಳಬಹುದು. ಆದರೆ ಮನಸ್ಸಿನ ವ್ಯೂಹದ ರೂಪರೇಖೆಗಳನ್ನು ಕಂಡುಹಿಡಿಯುವುದು ಅಸಾಧ್ಯ. ಅದು ಅಗೋಚರವಾದ ಸೂಕ್ಷ್ಮವಸ್ತುವು. ಅದು ಚೇತನಾತ್ಮಕ ವಾದುದು; ಹೊಸ ಹೊಸ ಕವಲೊಡೆಯುವ ಗಿಡದಂತೆ ಬೆಳೆಯುತ್ತ ಹೋಗುವಂತಹದು. ಅನುಭವದ ಹಿನ್ನೆಲೆಯಾಗಿ ನಿಂತು ಅದನ್ನು ನಿಯಂತ್ರಿಸುವುದು ಅದರ ಕಾರ್ಯ.

ಒಟ್ಟಿನಲ್ಲಿ ಮನಸ್ಸಿನ ಸ್ವರೂಪದ ಬಗ್ಗೆ ಮುಖ್ಯವಾದ ಈ ಎರಡು ಗ್ರಹಿಕೆಗಳನ್ನು ನಾವು ನಂಬಲೇಬೇಕು— ಅನುಭವ, ಮನಸ್ಸಿನ ಕ್ರಿಯೆ ಅಥವಾ ಜಾಗ್ರತಾವಸ್ಥೆ; ಚೇತನಾತ್ಮಕವಾದ ಮನಸ್ಸಿನ ವ್ಯೂಹ, ಅನುಭವ ವನ್ನು ನಿರ್ಧರಿಸುವ ಪೂರ್ವದ ಒಲವು ಅಥವಾ ಅಜಾಗ್ರತಾವಸ್ಥೆ.

**ಮನಸ್ಸಿನ ಸ್ವರೂಪದ ಬಗ್ಗೆ ಭಿನ್ನವಾದಗಳು.—** ಮನಸ್ಸಿನ ಸ್ವರೂಪದ ಬಗ್ಗೆ ಐದು ಮುಖ್ಯ ವಾದಗಳು ಇವೆ. ಅವುಗಳನ್ನು ಕುರಿತು ಸ್ವಲ್ಪ ವಿವೇಚಿಸಿದರೆ ಮನಸ್ಸಿನ ನಿಜಸ್ವರೂಪದ ಬಗ್ಗೆ ಜ್ಞಾನಮಾಡಿಕೊಳ್ಳಲು ಸಹಾಯಕವಾಗುವುದು. ಆದುದರಿಂದ ಅವುಗಳನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವುದು ಅಪ್ರಸ್ತುತವಾಗಲಾರದು.

(೧) **"ಶಕ್ತಿ" ವಾದ** (The Faculty Theory).—ಮನಸ್ಸು ಎಂಬುದು ಅನೇಕ "ಶಕ್ತಿ"ಗಳಿಂದ ಕೂಡಿದ ಒಂದು ಗಂಟು ಎಂದು ಇಲ್ಲಿಯ ವರೆಗೆ ಬಹುಜನ ಶಾಸ್ತ್ರಕಾರರು ನಂಬಿದ್ದರು. ಆದರೆ ಆಧುನಿಕ ಮನಶ್ಶಾಸ್ತ್ರಜ್ಞರು ಈ ವಾದವನ್ನು ಒಪ್ಪುವುದಿಲ್ಲ. ಬುದ್ಧಿ, ಸ್ಮರಣೆ, ಕಲ್ಪನೆ, ತರ್ಕ, ವಾಕ್, ಅವಧಾನ, ಮುಂತಾಗಿ ಮನಸ್ಸಿನ "ಶಕ್ತಿ" ಗಳನ್ನು ವಿಂಗಡಿಸುತ್ತ ಹೋದರೆ ಮನಸ್ಸಿನ ಸ್ವರೂಪದ ಬಗ್ಗೆ ತಪ್ಪು ಕಲ್ಪನೆ ಯಾಗುವುದು. ಮನಸ್ಸು ಅಖಂಡವಾದ ವಸ್ತುವು, "ಶಕ್ತಿಗಳ" ಸಿವುಡಲ್ಲ. ಈ "ಶಕ್ತಿ"ಗಳು ಮನಸ್ಸಿನ ಬೇರೆ ಬೇರೆ ಕಾರ್ಯಗಳು, ಅಥವಾ ಅನುಭವದ ಬೇರೆ ಬೇರೆ ಪ್ರಕಾರಗಳು ಎಂದು ಎನ್ನಬಹುದು. ಮನಸ್ಸಿನಲ್ಲಿ ಕೆಲವು ಚೈತನ್ಯಗಳುಂಟಾದರೆ ಅವುಗಳನ್ನು "ಶಕ್ತಿ" ಗಳೆಂದು ಕರೆಯ ಕೂಡದು.

(೨) **ಸಾಹಚರ್ಯ ವಾದ**(The Association Theory).—ಮನಸ್ಸಿನಲ್ಲಿ ಉದ್ಭವಿಸುವ ಕಲ್ಪನಾತರಂಗಗಳು ಅಥವಾ ವಿಚಾರಗಳು ಕೆಲವು ನಿಯಮಗಳಿಗೆ ಸಂಬಂಧಿಸಿವೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಬುದ್ಧಿಯ ಬೆಳವಣಿಗೆ, ನೈತಿಕ ಸಂಸ್ಕಾರ, ಚಟ, ಮೊದಲಾದ ಮನಸ್ಸಿನ ಕಾರ್ಯಗಳು ಸಂಬಂಧ ಅಥವಾ ಸಾಹಚರ್ಯ ನಿಯಮವನ್ನು ಪಾಲಿಸುವುವು ಎಂದು ಹೇಳುತ್ತಾರೆ. ಆದರೆ ವಿಚಾರಗಳಲ್ಲಿ ಸಂಬಂಧವುಂಟಾಗಬೇಕಾದರೆ ವ್ಯಕ್ತಿಯ ಆಸಕ್ತಿಯೆ ಅದಕ್ಕೆ ಮೂಲ ಕಾರಣವು. ಕತ್ತಲೆಯನ್ನು

ಕಂಡರೆ ಮಗುವಿಗೆ ಭೂತದ ಕಲ್ಪನೆಯು ಬರುತ್ತದೆ. ಯಾಕೆಂದರೆ ಈ ಕಲ್ಪನೆಯು ಅವನ ಭಯಪ್ರವೃತ್ತಿಯನ್ನು ಚೇತರಿಸುವುದು.

(೩) **ಯಾಂತ್ರಿಕ ವಾದ** (The Machanistic Theory).—ಡಾ|| ಜೆ. ಬಿ. ವ್ಯಾಟ್‌ಸನ್ ಇವನು ಈ ವಾದದ ಪುರಸ್ಕರ್ತನು. ವರ್ತನ ವಾದಿಗಳು ಮನುಷ್ಯನು ಒಂದು ವಿಚಿತ್ರವಾದ ಯಂತ್ರವೆಂದು ತಿಳಿಯುತ್ತಾರೆ. ನಾವು ತಿಳಿದಿರುವ ಮನಸ್ಸಿನ ಕಾರ್ಯಗಳೆಲ್ಲವೂ ಮಿದುಳಿನ ಕಾರ್ಯಗಳು ಎಂದು ಅವರ ನಂಬಿಕೆ. ಮನಸ್ಸೆಂಬ ವಸ್ತುವೇ ಇಲ್ಲವೆಂದೂ ಮನುಷ್ಯನ ಕ್ರಿಯೆಗಳೆಲ್ಲ ಪರಾವರ್ತನ ಕ್ರಿಯೆಗಳೆಂದೂ ಅವರು ಹೇಳುತ್ತಾರೆ. ಈ ಯಾಂತ್ರಿಕ ವಾದವು ಸರಿಯಾದುದಲ್ಲವೆಂದು ಈ ಮೊದಲೇ ಹೇಳಿಯಾಗಿದೆ. ಕಾಲಿದಾಸ, ಶೆಕ್ಸಪೀಯರ್, ಜಗದೀಶಚಂದ್ರ ಬೋಸ್, ನ್ಯೂಟನ್ ಮೊದಲಾದವರ ಕೃತಿಗಳು ಪರಾವರ್ತನಕ್ರಿಯೆಗಳಲ್ಲ. ಅವು ಸ್ವಯಂಪ್ರೇರಿತ ವಾದವುಗಳು.

(೪) **ವಿಭಾಗ ವಾದ** (The Compartment Theory).—ಸಿಗ್ಮಂಡ್ ಫ್ರಾಯ್ಡ್ ಎಂಬ ಮನೋವಿಜ್ಞಾನಿಯ ಅನುಯಾಯಿಗಳು ಮನಸ್ಸಿನಲ್ಲಿ ಜಾಗ್ರತ, ಅನಾವಿಷ್ಕೃತ ಮತ್ತು ಅಜಾಗ್ರತ ಎಂದು ಮೂರು ಭಾಗಗಳನ್ನು ಮಾಡುತ್ತಾರೆ. ಅವು ಒಂದಕ್ಕೊಂದು ಭಿನ್ನವಾಗಿರುವುವೆಂದು ಅವರ ಅಭಿಪ್ರಾಯ. ಆದರೆ ಮನಸ್ಸನ್ನು ಹೀಗೆ ವಿಭಾಗಿಸಲು ಬರುವುದಿಲ್ಲ ವೆಂದೂ ಅದು ಅಭೇದ್ಯವಾಗಿರುವುದೆಂದೂ ಈಗಿನ ಜ್ಞಾನಿಗಳ ಮತ.

(೫) **ವ್ಯೂಹ ವಾದ** (The Structure Theory)—ಇದನ್ನು ಪ್ರತಿಪಾದಿಸುವವರಲ್ಲಿ ಮ್ಯಾಕ್‌ಡೂಗಲ್ಲನು ಅಗ್ರಗಣ್ಯನು. ಇದನ್ನೇ ನಾವು ಅಂಗೀಕರಿಸಿ ಮೊದಲೇ ವಿಶದವಾಗಿ ವಿವರಿಸಿದ್ದೇವೆ. ಆದುದರಿಂದ ಪ್ರತ್ಯೇಕವಾಗಿ ಪುನಃ ಇಲ್ಲಿ ಇದನ್ನು ಕುರಿತು ಹೇಳುವುದು ಅನವಶ್ಯಕವಾಗಿದೆ.

ಮನಸ್ಸಿನ ನಿಜಸ್ವರೂಪವನ್ನು ಅರಿಯದೆ ಹೋದರೆ ಶಿಕ್ಷಕನು ಅನೇಕ ತೊಂದರೆಗಳಿಗೆ ಬಲಿಯಾಗುವನು. ಮನಶ್ಶಾಸ್ತ್ರದ ತತ್ವಗಳನ್ನು ಗ್ರಹಿಸದ ಶಿಕ್ಷಣ ಸಮಸ್ಯೆಗಳೇ ಇರುವುದಿಲ್ಲ. ಅವು ಒಂದಿಲ್ಲೊಂದು ಮನೋವಿಜ್ಞಾನದ ತತ್ವದ ಆಧಾರವನ್ನೇ ಹಿಡಿದುಕೊಂಡಿವೆ. ಇಲ್ಲಿ ನಾವು ಸ್ವೀಕರಿಸಿದ ಮನಸ್ಸಿನ

ನಿಜಸ್ವರೂಪದ ವಾದವಂತೂ ನಮ್ಮ ಕಲಿಸುವ ಕ್ರಮದ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡುತ್ತದೆ. 'ವಿಚಾರ-ಸಂಬಂಧ' ವಾದವನ್ನು ಗ್ರಹಿಸಿದ ಶಿಕ್ಷಕನು ಓದುಬರೆಹದ ಶಿಕ್ಷಣದಾನವನ್ನು ಮೂಲಾಕ್ಷರಗಳಿಂದ ಪ್ರಾರಂಭಿಸುತ್ತಾನೆ; ಚಿತ್ರ ತೆಗೆಯುವ ಮೊದಲು ಗೆರೆ ಎಳೆಯುವುದಕ್ಕೆ ಕಲಿಸುತ್ತಾನೆ. ಇದು ತಪ್ಪಾದ ಹಾದಿಯು. ಓದು-ಬರೆಹವನ್ನು ಅರ್ಥಪೂರ್ಣ ವಾಕ್ಯಗಳಿಂದಲೂ ಚಿತ್ರಕಲೆಯನ್ನು ಅಖಂಡ ವಸ್ತುವಿನ ಆಕೃತಿಯಿಂದಲೂ ಪ್ರಾರಂಭಿಸಿ ಕಲಿಸಬೇಕು. ವ್ಯವಹಾರದ ಸಹಾಯವನ್ನು ಪೂರ್ಣವಾಗಿ ಪಡೆದುಕೊಂಡು ಗಣಿತವನ್ನು ಕಲಿಸಬೇಕು. ಮನಸ್ಸು ಒಂದು ಸ್ವಚ್ಛವಾದ ಹಲಗೆಯಂತೆ ಇರುವುದೆಂದು ತಿಳಿಯುವುದೂ ತಪ್ಪಾದುದು. **ಮನಸ್ಸಿನಲ್ಲಿ ಸಹಜಸಾಮರ್ಥ್ಯಗಳುಂಟು. ಅವುಗಳನ್ನು ವಿಕಾಸಗೊಳಿಸುವುದೇ ಶಿಕ್ಷಣದ ಕಾರ್ಯವು. ಕಾರ್ಯಕ್ಕೆ ಉದ್ದೇಶವೇ ಕಾರಣವು. ಬಾಲಕನು ಪ್ರಯತ್ನಶೀಲನಾಗುವಂತೆ ಅವನ ಮುಂದೆ ಪರಿಣಾಮ ಕಾರಿಯಾದ ಉದ್ದೇಶಗಳನ್ನು ಇಡುವುದೇ ಶಿಕ್ಷಕನ ಕರ್ತವ್ಯವು.** ಜ್ಞಾನತೃಷ್ಣೆ, ಪ್ರಶಂಸ, ಬಹುಮಾನ, ದಯೆ, ಪರೋಪಕಾರಗಳಿಂದ ಪ್ರೇರಿತವಾದ ಮಗುವು ತನ್ನಲ್ಲಿ ಹುದುಗಿದ ಸಾಮರ್ಥ್ಯಗಳನ್ನು ವ್ಯಕ್ತಗೊಳಿಸಲಿಕ್ಕೆ ಹವಣಿಸುತ್ತದೆ. ಒಬ್ಬ ವಿದ್ಯಾರ್ಥಿಯಲ್ಲಿ ಟೇನಿಸ್ ಆಟದಲ್ಲಿ ಕೈಚಳಕ ತೋರಿಸುವ, ಗಣಿತ ಬಿಡಿಸುವ ಅಥವಾ ಹಾಡುವ ಸಾಮರ್ಥ್ಯವಿರಬಹುದು. ಈ ಪ್ರತಿಯೊಂದು ಸಾಮರ್ಥ್ಯವನ್ನು ಚೇತರಿಸಲು ಒಂದು ಪ್ರೇರಣೆಯೋ ಉದ್ದೇಶವೋ ಅತ್ಯವಶ್ಯವಾಗಿ ಬೇಕು.

೩

# ಮನಸ್ಸಿನ ಮೂಲ ಲಕ್ಷಣಗಳು

**ಸಂಸ್ಕಾರ** (Mneme).— ಅನುಭವಗಳು ಮನಸ್ಸಿನ ಮೇಲೆ ಶಾಶ್ವತ ಪರಿಣಾಮವನ್ನುಂಟುಮಾಡುತ್ತವೆ. ಪೂರ್ವದ ಅನುಭವವನ್ನು ಕಾಯ್ದಿಡುವ ಶಕ್ತಿಯು ಮನಸ್ಸಿಗೆ ಇದೆ. ಆ ಶಕ್ತಿಗೆ ಸಂಸ್ಕಾರವೆಂದು ಎನ್ನುತ್ತಾರೆ. ಸಂಸ್ಕಾರವು ಮನಸ್ಸಿನ ಮೂಲ ಲಕ್ಷಣಗಳಲ್ಲಿ ಒಂದಾಗಿರುತ್ತದೆ. ಜೀವನ ಕ್ರಮದಲ್ಲಿ ಮನಸ್ಸನ್ನು ಮಾರ್ಪಡಿಸುವ ಕಾರ್ಯವು ನಡೆವೇ ಇರುವುದು. ವ್ಯಕ್ತಿಯ ಜೀವನದಲ್ಲಿಯ ಅನುಭವಗಳೂ ಜನ್ಮಜನ್ಮಾಂತರದ ಅನುಭವಗಳೂ ಮಾನವವಂಶದ ಅನುಭವಗಳೂ ಮನಸ್ಸಿನ ವ್ಯೂಹದಲ್ಲಿ ಶೇಖರಿಸಲ್ಪಡುವವು. ಆದುದರಿಂದಲೇ ನಾವು ಹಿಂದೆ ಅನುಭವಿಸಿದ ಘಟನೆಗಳನ್ನು ನೆನಪಿಗೆ ತರಬಲ್ಲೆವು. ಅದಕ್ಕೆ ನಾವು ಸ್ಮರಣೆಯೆಂದು ಎನ್ನುತ್ತೇವೆ. ಇದು ಎಲ್ಲರೂ ಬಲ್ಲ ಮಾತು. ಮೊನ್ನೆ ನಾನು ಕೈಕೊಂಡ ಪ್ರವಾಸದ ಅನುಭವಗಳನ್ನು ಈಗ ಜ್ಞಾಪಕ ಮಾಡಿಕೊಳ್ಳುತ್ತೇನೆ. ನನ್ನ ಪ್ರವಾಸದಲ್ಲಿ ಅನುಭವಕ್ಕೆ ಬಂದ ಸಂಗತಿಗಳು ನನ್ನ ಮನಸ್ಸಿನಲ್ಲಿ ಉಳಿದುದರಿಂದಲೇ ಅವು ಸ್ಮರಣೆಗೆ ಬರುತ್ತವೆ. ಈ 'ಸ್ಮರಣೆಗೆ' ಬದಲಾಗಿ ಇಲ್ಲಿ 'ಸಂಸ್ಕಾರ' ಎಂಬ ಪದವು ವಿಶಾಲವಾದ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. 'ಸಂಸ್ಕಾರ'ವು ಜಾಗ್ರತಾವಸ್ಥೆಯಲ್ಲಿ ಇದ್ದಾಗ 'ಸ್ಮರಣೆ' ಎಂದು ಎನ್ನಿಸಿಕೊಳ್ಳುತ್ತದೆ. ಪ್ರಬುದ್ಧ ಸಂಸ್ಕಾರವೇ ಸ್ಮರಣೆಯು. ಅಪ್ರಬುದ್ಧ ರೀತಿಯಲ್ಲಿಯೂ ಅದು ವ್ಯವಹರಿಸುತ್ತದೆ. ದಾರಿಯಲ್ಲಿ ಒಬ್ಬ ಮನುಷ್ಯನು ಭೆಟ್ಟಿಯಾದರೆ "ನಾನು ಇವನನ್ನು ಎಲ್ಲಿಯೊ ನೋಡಿದ ಹಾಗೆ ಕಾಣುತ್ತದೆ" ಎಂದು ಮನಸ್ಸಿನಲ್ಲಿ ಎಂದುಕೊಳ್ಳುತ್ತೇನೆ. ಓದುವಾಗ ನಾನು ವಾಕ್ಯದಲ್ಲಿಯ ಪ್ರತಿಯೊಂದು ಅಕ್ಷರವನ್ನೂ ಜ್ಞಾಪಕ ಮಾಡಿಕೊಳ್ಳುತ್ತೇನೆಂದು ಹೇಳಲಿಕ್ಕಾಗದು. ಹಾರ್ಮೋನಿಯಂನ್ನಾಗಲಿ ವೀಣೆಯನ್ನಾಗಲಿ ನುಡಿಸುವವನು ಯಾವ ಸ್ಥಲದಲ್ಲಿ ಬೆರಳುಗಳನ್ನು

ಇಡಬೇಕೆಂಬುದನ್ನು ನೆನಪು ಮಾಡಿಕೊಳ್ಳುವುದಿಲ್ಲ. ಇಂಥ ಪ್ರಸಂಗಗಳಲ್ಲಿ ಸಂಸ್ಕಾರವೇ ಸಹಾಯವಾಗುತ್ತದೆ.

ಈ ಸಂಸ್ಕಾರದ ಪರಿಣಾಮವು ಕೇವಲ ಮನುಷ್ಯನಲ್ಲಿಯೆ ಕಾಣುವುದೆಂಬುದಲ್ಲ; ಪಶುಪಕ್ಷಿಗಳ ಜೀವನದಲ್ಲಿಯೂ ಕಂಡುಬರುತ್ತದೆ. ಹಾರಾಡುತ್ತ ಹೋದ ಪಕ್ಷಿಗಳು ಮರಳಿ ತಮ್ಮ ಗೂಡಿಗೆ ಬರುತ್ತವೆ. ಈ ಸಂಸ್ಕಾರಗಳ ಪರಿಣಾಮವು ಇಲಿಗಳ ಜೀವನದಲ್ಲಿಯೂ ಆಗುತ್ತದೆಯೊ ಇಲ್ಲವೊ ಎಂಬುದನ್ನು ಮ್ಯಾಕ್‌ಡೂಗಲ್ಲ್‌ನು ಪ್ರಯೋಗಮಾಡಿ ನೋಡಿದನು. ಇಲಿಗಳ ಮೇಲಿನ ಅವನ ಪ್ರಯೋಗವು ಸಂಸ್ಕಾರದ ತತ್ವವನ್ನು ನಿರೂಪಿಸಲಿಕ್ಕೆ ಬಲವಾದ ದೃಷ್ಟಾಂತವಾಗಿದೆ. ನೀರಿನ ಒಂದು ಪಾತ್ರೆಯಲ್ಲಿ ಇಲಿಗಳನ್ನು ಇಟ್ಟು ಅವುಗಳಿಗೆ ಹೊರಗೆ ಹೋಗಲು ಎರಡು ಮಾರ್ಗಗಳನ್ನು ಮಾಡಿದನು. ಅದರಲ್ಲಿ ವಿದ್ಯುತ್ಪ್ರವಾಹದ ಒಂದು ಹಾದಿಯನ್ನು ಕಷ್ಟಮಯವನ್ನಾಗಿಯೂ ಇನ್ನೊಂದನ್ನು ಸುರಕ್ಷಿತವಾಗಿಯೂ ಮಾಡಿದನು. ಇಲಿಗಳು ವಿದ್ಯುತ್ಪ್ರವಾಹದ ದಾರಿಯಿಂದ ಹೋಗಲು ಅನೇಕ ಪ್ರಯತ್ನಗಳನ್ನು ಮಾಡಿದವು. ಅದು ಭಯೋತ್ಪಾದಕವಾದುದರಿಂದ ವಿದ್ಯುತ್ಪ್ರವಾಹದ ಮಾರ್ಗವನ್ನು ಬಿಟ್ಟು ಸುರಕ್ಷಿತವಾದ ಮಾರ್ಗದಿಂದಲೇ ಹೊರಗೆ ಹೋಗತೊಡಗಿದುವು. ಅವೇ ಇಲಿಗಳ ಪೀಳಿಗೆಗಳ ಮೇಲೂ ಯಥಾವತ್ತಾಗಿ ಪ್ರಯೋಗವನ್ನು ಮಾಡಿ ಒಂದು ಮಹತ್ವದ ಸಿದ್ಧಾಂತವನ್ನು ಮ್ಯಾಕ್‌ಡೂಗಲ್ಲ್‌ನು ಕಂಡುಹಿಡಿದಿರುವನು—ವಿದ್ಯುತ್‌ಭಯವನ್ನು ಅನುಭವಿಸಿದ ಇಲಿಗಳ ಮುಂದಿನ ಪೀಳಿಗೆಗಳು ತಪ್ಪುಮಾರ್ಗ ಅನುಸರಿಸುವುದನ್ನು ಕ್ರಮೇಣ ಕಡಮೆ ಮಾಡುತ್ತವೆ. ಈ ದೃಷ್ಟಾಂತದಿಂದ ಗೊತ್ತಾಗುವುದೇನೆಂದರೆ ಸಂಸ್ಕಾರವು ಆನುವಂಶಿಕವಾಗಿಯೂ ಪರಿಣಮಿಸುತ್ತದೆ. ಈ ತತ್ವವನ್ನು ಹಿಂದೂ ದಾರ್ಶನಿಕರು ಎಷ್ಟೋ ವರ್ಷಗಳ ಹಿಂದೆಯೆ ಸಾರಿಬಿಟ್ಟಿದ್ದಾರೆ. ಇದನ್ನು ಅವರು 'ಪೂರ್ವಜನ್ಮದ ವಾಸನಾ' ಅಥವಾ 'ಪೂರ್ವಜನ್ಮದ ಸಂಸ್ಕಾರ' ಎಂದು ಕರೆಯುತ್ತಾರೆ. ಪಶುಪಕ್ಷಿಗಳ ಸಹಜಪ್ರವೃತ್ತಿಗಳಲ್ಲಿ ಈ ಆನುವಂಶಿಕ ಸಂಸ್ಕಾರವು ಕಂಡುಬರುತ್ತದೆ. ಹಕ್ಕಿಗಳು ಗೂಡುಕಟ್ಟುವಲ್ಲಿಯೂ ತಾಯಿ ಮಗುವನ್ನು ಪ್ರೀತಿಸುವಲ್ಲಿಯೂ ಪ್ರಾಣಿಗಳ ದೇಹರಚನೆಯಲ್ಲಿಯೂ ಈ ಮಾತಿನ ನಿದರ್ಶನವು ಕಂಡುಬರುತ್ತದೆ.

ಅನುಭವಗಳೆಲ್ಲವೂ ಶುದ್ಧವಾಗಿ ಇದ್ದಕ್ಕೆ ಇದ್ದ ಹಾಗೆಯೆ ಮನಸ್ಸಿನಲ್ಲಿ ಇರುವುದಿಲ್ಲ. ಅವು ತಮ್ಮ ಪರಿಣಾಮಗಳನ್ನು ಮಾತ್ರ ಮನಸ್ಸಿನ ಮೇಲೆ ಬಿಡುವುವು. ಇಂಥ ಅನುಭವ ಪರಿಣಾಮಗಳಿಗೆ 'ಅನುಭವಮುದ್ರೆ' ಅಥವಾ 'ಅನುಭವಶೇಷ' (Engram) ಎಂದು ಎನ್ನುತ್ತಾರೆ. ಈ ಶೇಷಗಳು ಮನೋವ್ಯೂಹದ ಘಟಕಗಳಾಗಿರುತ್ತವೆ.

**ಚೇತನ** (Horme).—ನಿರ್ಜೀವ ಪದಾರ್ಥಗಳಿಂದ ಸಜೀವ ವಸ್ತುಗಳನ್ನು—ಪ್ರಾಣಿಗಳನ್ನು ವಿಂಗಡಿಸಿ ತೋರಿಸುವ ಓಘಕ್ಕೆ ಅಥವಾ ಶಕ್ತಿಗೆ 'ಚೇತನ' ಎಂದು ಕರೆಯುತ್ತಾರೆ. ಸಸ್ಯಗಳಲ್ಲಿಯೂ ಕ್ಷುದ್ರವಾದ ಜಂತುಗಳಲ್ಲಿಯೂ ಖಗಮೃಗಗಳಲ್ಲಿಯೂ ಮನುಷ್ಯರಲ್ಲಿಯೂ ಇದು ಕಂಡುಬರುತ್ತದೆ. ಈ ಚೇತನವು ಜೀವನದ ಜೀವಾಳವು. ಇದು ಮನಸ್ಸಿನ ಎರಡನೆಯ ಲಕ್ಷಣವು. ಇದನ್ನೇ ಬೇರೆ ಬೇರೆ ಜನರು 'ಜೀವೇಚ್ಛೆ', 'ಜೀವನಪ್ರವಾಹ', 'ಮೂಲತತ್ವ', 'ಆದಿಕಾಮ' ಎಂದು ಕರೆಯುತ್ತಾರೆ. ಇದು ಮನಸ್ಸಿನ ಅವ್ಯಕ್ತ ಚಟುವಟಿಕೆಯಾಗಿದೆ.

ಈ ಚೇತನಪ್ರವಾಹವು ನಮ್ಮ ಪ್ರತಿನಿತ್ಯದ ಅನುಭವದಲ್ಲಿ ಕಂಡುಬರುತ್ತದೆ. ಮಾನವನ ಪ್ರಯತ್ನ, ಬಯಕೆ, ಬೇಡಿಕೆ, ಸಂಕಲ್ಪ ಮೊದಲಾದ ಮನಸ್ಸಿನ ಎಲ್ಲ ಚಟುವಟಿಕೆಗಳು ಉದ್ಬೋಧಿತ ಚೇತನವೇ ಆಗಿವೆ. ಮೇಲೆ ಬರೆದ ಒಂದು ವಾಕ್ಯಾರ್ಥವನ್ನು ತಿಳಿದುಕೊಳ್ಳಬೇಕೆಂಬ ಓದುಗನ ಪ್ರಯತ್ನ, ಅಧ್ಯಾಯದ ವಿಚಾರಸರಣಿಯನ್ನು ಅರಿತುಕೊಳ್ಳಬೇಕೆಂಬ ಆಸೆ, ಇಡಿ ಪುಸ್ತಕವನ್ನೇ ಮನನಮಾಡಬೇಕೆಂಬ ಧ್ಯೇಯ, ಬಳಿಕ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕು ಮತ್ತು ಶಿಕ್ಷಣ ವ್ಯವಸಾಯವನ್ನು ಕೈಕೊಂಡು ಉತ್ತಮ ಉಪಜೀವನವನ್ನು ಸಾಗಿಸಬೇಕೆಂಬ ಅಂತಿಮ ಗುರಿ ಇವು ಉತ್ತರೋತ್ತರ ಸಂಬಂಧಪಟ್ಟ ಚೇತನಾತ್ಮಕ ಗತಿಗಳೇ ಆಗಿವೆ. 'ಸ್ಮರಣ'ಕ್ಕಿಂತ ವಿಶಾಲವಾದ ಅರ್ಥದ ಪದವು 'ಸಂಸ್ಕಾರ'ವಾದಂತೆ 'ಚೇತನ'ವು 'ಸಂಕಲ್ಪ'ಕ್ಕಿಂತ ವಿಶಾಲಾರ್ಥದ ಪದವು ಆಗಿದೆ.

ಸಸ್ಯಗಳ ಮತ್ತು ಪ್ರಾಣಿಗಳ ಕ್ರಿಯೆಗಳಲ್ಲಿಯೂ ನಾವು ಚೇತನವನ್ನು ಕಾಣಬಹುದು. ಗಿಡದ ಟೊಂಗೆಯನ್ನು ಕಡಿದರೂ ಅದು ಅಲ್ಲಿಯೇ

ಹೊಸದಾಗಿ ಚಿಗಿಯುತ್ತದೆ. ಹಲ್ಲಿಯ ಬಾಲವು ಕತ್ತರಿಸಿ ಹೋದರೂ ಮತ್ತೆ ಅದು ಬೆಳೆಯುತ್ತದೆ. ಪ್ರಾಣಿಗಳ ವಿಶಿಷ್ಟ ರಚನೆಯುಳ್ಳ ದೇಹದ ಬೆಳವಣಿಗೆ ಮತ್ತು ಅದರಲ್ಲಿ ನಡೆಯುವ ರಕ್ತಾಭಿಸರಣ, ಪಚನ, ಶ್ವಾಸೋಚ್ಛ್ವಾಸ ಮೊದಲಾದವುಗಳೂ ಚೇತನಾತ್ಮಕ ಕ್ರಿಯೆಗಳೇ ಆಗಿವೆ. ಗಾಯವು ಮಾಯುವಲ್ಲಿಯೂ ಕತ್ತರಿಸಿದ ಕೂದಲು ಬೆಳೆಯುವಲ್ಲಿಯೂ ಚೇತನಾಶಕ್ತಿಯೆ ಅವ್ಯಕ್ತ ರೀತಿಯಲ್ಲಿ ವ್ಯವಹರಿಸುತ್ತಿರುತ್ತದೆ. ಜೀವರಾಶಿಗಳಲ್ಲಿ ಅಡಗಿದ ಈ ಚೇತನವು ಯಾವಾಗಲೂ ತನ್ನ ಕಾರ್ಯವನ್ನೇ ಸಾಧಿಸುತ್ತಿರುತ್ತದೆಂದು ಸರ್ ಟಿ. ಪರ್ಸಿ ನನ್ನ್ ಅವರ ಅಭಿಪ್ರಾಯವು. ಈ ಚೇತನವು ಮನಸ್ಸಿನ ಉತ್ಪಾದನಶಕ್ತಿಯೂ ಆಗಿದೆ. ಅದು ಕಾರ್ಯವನ್ನು ನಡೆಸುತ್ತಲೆ ಇರುವು ದೆಂಬುದಕ್ಕೆ ಮನುಷ್ಯನು ನಿರ್ಮಿಸಿದ ಸಂಸ್ಕೃತಿ ಎಂಬ ಕಟ್ಟಡವೇ ಬಲವಾದ ಸಾಕ್ಷಿಯು. ಸಮಾಜರಚನೆ, ರಾಜನೀತಿ, ಕಲೆ, ಶಾಸ್ತ್ರ ಮೊದಲಾದವು ಮನುಷ್ಯನ ಮನಸ್ಸಿನ ಉತ್ಪಾದನಶಕ್ತಿಯಿಂದಲೇ ಉದ್ಭವಿಸಿರುವವು. ಇವು ಚೇತನದ ಕುರುಹುಗಳು.

ತಿಳಿದುಕೊಳ್ಳಲಿಕ್ಕೆ ಸುಲಭವಾಗಬೇಕೆಂಬ ಹೇತುವಿನಿಂದ ಚೇತನ ಮತ್ತು ಸಂಸ್ಕಾರ ಇವನ್ನು ಕುರಿತು ಇಲ್ಲಿ ಬೇರೆ ಬೇರೆಯಾಗಿ ವಿಂಗಡಿಸಿ ಹೇಳಲಾಗಿದೆ. ಆದರೆ ವಸ್ತುತಃ ಅವು ಪ್ರತ್ಯೇಕವಾಗಿ ಇರುವುದಿಲ್ಲ. ಅವು ಒಂದೇ ಮನಸ್ಸಿನ ಎರಡು ದೃಷ್ಟಿಗಳು. ಇವೆರಡೂ ತತ್ವಗಳನ್ನು ಕ್ರೋಡೀ-ಕರಿಸಿದ ' ಸಂಸಕ್ತಿ ' ಎಂಬ ಮನಸ್ಸಿನ ಮೂರನೆಯ ಲಕ್ಷಣವೂ ಒಂದಿದೆ.

**ಸಂಸಕ್ತಿ** (Cohesion).— ' ಸಂಸಕ್ತಿ 'ಯೆಂದರೆ ಅನೇಕ ಭಾಗಗಳ ಏಕೀಕರಣ. ಇದಕ್ಕೆ ಸಮೀಕರಣ, ಸಂಯೋಜನೆ ಅಥವಾ ದೃಢೀಕರಣ ಎಂದೂ ಅನ್ನಬಹುದು. ಅನುಭವಶೇಷಗಳು ಬಿಡಿಬಿಡಿಯಾಗಿರದೆ ಒಂದಕ್ಕೊಂದು ಅಂಟಿಕೊಂಡಿರುತ್ತವೆ. ಮನೋರಚನೆಯ ಘಟಕಗಳನ್ನು ಒಂದುಗೂಡಿಸುವ ಕಾರ್ಯವು ಮನಸ್ಸಿನಲ್ಲಿಯೇ ನಡೆಯುತ್ತದೆ. ಈ ಆಂತರಿಕ ಮಾನಸಿಕ ಕ್ರಿಯೆಯು ' ವಿಚಾರ–ಸಂಬಂಧ 'ವೆಂಬ ತತ್ತ್ವದ ನಿಯಮಗಳನ್ನು ಅನುಸರಿಸಿ ನಡೆಯುವುದೆಂದು ಕೆಲವರು ಹೇಳುತ್ತಾರೆ. ಆದರೆ ಇದು ತಪ್ಪು ತಿಳಿವಳಿಕೆ. ಮನಸ್ಸು ಎಂಬುದು ವಿಚಾರಗಳ, ಕಲ್ಪನೆಗಳ ಅಥವಾ

ಸಂವೇದನೆಗಳ ಸಂಗ್ರಹವಲ್ಲ; ಇಂತಹವೇ ಅನೇಕ ಬಿಡಿಬಿಡಿ ಕಣಗಳನ್ನು ಬೆರೆಯಿಸಿ ತಯಾರಿಸಿದ ಮಿಶ್ರಧಾತುವೂ ಅಲ್ಲ. ಅಂದಬಳಿಕ ಅನುಭವ ಪರಿಣಾಮಗಳು ಯಾವ ತತ್ತ್ವವನ್ನು ಅನುಸರಿಸಿ ಸಂಸಕ್ತಿ ಹೊಂದುತ್ತವೆಂಬು ದನ್ನು ಅರಿತುಕೊಳ್ಳುವುದು ಅವಶ್ಯವೆನಿಸುವುದು. ಯಾವ ಅನುಭವಶೇಷಗಳು ಸಂಸಕ್ತವಾಗುತ್ತವೆಂಬುದನ್ನು ಪರಿಶೀಲಿಸಿ ನೋಡೋಣ.

ದಾರಿಗುಂಟ ಹೋಗುವಾಗ ಕೆಲವು ಹುಡುಗರನ್ನು ಕಂಡು ಒಂದು ಕುನ್ನಿಯು ಬೊಗಳುತ್ತವೆ. ಆ ಕಿಡಿಗೇಡಿ ಹುಡುಗರು ಅದಕ್ಕೆ ಕಲ್ಲನ್ನು ಎಸೆ ಯುತ್ತಾರೆ. ಪೆಟ್ಟನ್ನು ತಿಂದ ಆ ಕುನ್ನಿಯು ಭಯಗೊಂಡು ಮನೆಗೆ ಓಡಿ ಹೋಗುತ್ತದೆ. ಅನೇಕ ದಿನಗಳ ವರೆಗೆ ಅಕಸ್ಮಾತ್ತಾಗಿ ಯಾರಾದರೂ ನೆಲಕ್ಕೆ ಬಗ್ಗಿದುದನ್ನು ಕಂಡರೆ ಆ ಕುನ್ನಿಯು ತನ್ನನ್ನು ಹೊಡೆಯುವರೆಂಬ ಹೆದರಿಕೆಯಿಂದ ಬಾಲ ಮುದುಡಿಕೊಂಡು ಓಡಿಹೋಗುತ್ತದೆ. ಅದು ಹೀಗೇಕೆ ಮಾಡಬೇಕು? ಹುಡುಗರು ಬಾಗಿದುದನ್ನೂ ಕಲ್ಲೆಸೆದುದನ್ನೂ ಪೆಟ್ಟಿನ ಸಂವೇದನೆಯನ್ನೂ ಭಯದಿಂದ ತಾನು ಓಡಿ ಹೋದುದನ್ನೂ ಅದು **ಏಕಕಾಲಕ್ಕೆ ಅನುಭವಿಸಿದುದೇ** ಇದಕ್ಕೆ ಕಾರಣ. ನೆಲಕ್ಕೆ ಬಾಗಿದ ಒಂದು ಸಂಗತಿಯು ಸಂಭವಿಸಿದೊಡನೆ ಅದಕ್ಕೆ ಸಂಬಂಧಪಟ್ಟ ಎಲ್ಲ ಸಂಗತಿಗಳು ಅದರ ಮನದಲ್ಲಿ ಉದ್ಭವಿಸುತ್ತವೆ. ಹೀಗೆ ಒಂದು ವಿಷಯಕ್ಕೆ ಸಂಬಂಧಿಸಿದ ಅನುಭವಶೇಷಗಳು ಒಟ್ಟುಗೂಡಿ ಒಂದು ಸಂಕೀರ್ಣ ಅಥವಾ ಮಾನಸಿಕ ಗ್ರಂಥಿ (Complex) ಆಗುತ್ತದೆ. ಆದರೆ ಈ ಅನುಭವಗಳಲ್ಲಿ ವ್ಯಕ್ತಿಗೆ "ಅಭಿರುಚಿ" ಅಥವಾ "ಆಸಕ್ತಿ" ಇದ್ದರೆ ಮಾತ್ರ ಮಾನಸಿಕ ಗ್ರಂಥಿಯು ಉಂಟಾಗುವುದು. ನೋವನ್ನು ತಪ್ಪಿಸಬೇಕು, ಭಯೋತ್ಪಾದಕ ವಸ್ತುವಿನಿಂದ ದೂರಾಗಬೇಕು ಎಂಬ "ಅಭಿರುಚಿ"ಯು ಪೆಟ್ಟು ತಿಂದ ನಾಯಿಯ ಅನುಭವ ಶೇಷಗಳನ್ನೆಲ್ಲ ಒಟ್ಟುಗೂಡಿಸಿತು. ಇಂತಹ ಅನುಭವ ಪರಿಣಾಮಗಳಿಂದ ಉಂಟಾದ ಸಂಯೋಜನೆಗೆ "ಅನುಭವಶೇಷಗಳ ಸಂಕೀರ್ಣ" ಅಥವಾ "ಭಾವಗ್ರಂಥಿ" (Engram Comlex) ಎಂದು ಎನ್ನುತ್ತಾರೆ.

ನಮ್ಮೆಲ್ಲರ ಅನುಭವಕ್ಕೆ ಬಂದ ಮನೋವ್ಯಾಪಾರದ ಕೆಲವು ಸಂಗತಿ ಗಳನ್ನು '**ಸಂಸಕ್ತಿ**' ತತ್ವವು ಸ್ಪಷ್ಟೀಕರಿಸುತ್ತದೆ. ಅನುಭವ-ಶೇಷಗಳು

ಒಂದಾಗಲು ಸ್ವಲ್ಪ ಅವಧಿಯು ಬೇಕಾಗುತ್ತದೆ. ಕಲಿತ ವಿದ್ಯೆಯು ನಮ್ಮಲ್ಲಿ ದೃಢವಾಗಿ ಉಳಿಯಬೇಕಾದರೆ ನಡುವೆ ಸ್ವಲ್ಪ ವಿರಾಮಕಾಲವು ಬೇಕಾಗುವುದು. ಆ ವಿರಾಮಕಾಲದಲ್ಲಿಯೆ ವಿಷಯಗಳು ಸಂಸಕ್ತಿ ಹೊಂದುತ್ತವೆ. ಇದಕ್ಕೆ "ಸಮಸ್ಯಾನಂತರ ನಿದ್ರೆ" ಎಂದು ಅನ್ನುತ್ತಾರೆ. "ನಾವು ಚಳಿಗಾಲದಲ್ಲಿ (ನೀರು ಹೆಪ್ಪುಗಟ್ಟಿದಾಗ) ಈಸುವುದನ್ನೂ ಬೇಸಗೆಯಲ್ಲಿ ಹಿಮದ ಮೇಲೆ ಜಾರುವುದನ್ನೂ ಕಲಿಯುತ್ತೇವೆ" ಎಂದು ವಿಲಿಯಮ್ ಜೇಮ್ಸನು ಹೇಳುವ ಮಾತಿನ ಅರ್ಥವೂ ಇದೇ. ಅಂದರೆ, ಕಲಿತ ವಿಷಯಗಳು ವಿರಾಮಕಾಲದಲ್ಲಿ ಮುಂದುವರಿದು ದೃಢಗೊಳ್ಳುತ್ತವೆ, ಸಂಸಕ್ತಿಹೊಂದುತ್ತವೆ. ಮಳೆಗಾಲದ ಮೊಳಕೆಯು ಚಳಿಗಾಲದಲ್ಲಿ ಮಾಗುವದು.

ನಮ್ಮ ಮನಸ್ಸು ಬೇರೆ ಬೇರೆ ವಿಷಯಗಳಲ್ಲಿ ತೊಡಗಿದಾಗ ನಾವು ಬಿಡಿಸಬೇಕೆಂಬ ಸಮಸ್ಯೆಗೆ ಸಂಬಂಧಿಸಿದ, ಅಥವಾ ಸಂಪಾದಿಸಬೇಕಾದ ಕೌಶಲ್ಯಕ್ಕೆ ಸಂಬಂಧಿಸಿದ ಅನುಭವಶೇಷಗಳು ಸಂಸಕ್ತಿಕಾರ್ಯವನ್ನು ಸಾಗಿಸಿಯೆ ಇರುತ್ತವೆ. ಕೈಕೊಂಡ ಕಾರ್ಯದಲ್ಲಿ ನಾವು ಎಷ್ಟೆಷ್ಟು ಅಭಿರುಚಿಯುಳ್ಳವರಾಗಿರುತ್ತೇವೊ ಅಷ್ಟಷ್ಟು ತೀವ್ರವಾಗಿ ಮತ್ತು ಸುಲಭವಾಗಿ ಸಂಸಕ್ತಿಕಾರ್ಯವು ನಡೆಯುತ್ತದೆ. ಯಶಸ್ವಿಯಾಗಬೇಕೆಂಬ ಉತ್ಕಟೇಚ್ಛೆಯು ಸಂಸಕ್ತಿಗೆ ಸದಾ ಬೆಂಬಲವನ್ನೀಯುತ್ತದೆ. ಒಬ್ಬ ವಿದ್ಯಾರ್ಥಿಯು ಒಂದು ಗಣಿತದ ಪ್ರಶ್ನೆಯನ್ನು ಬಿಡಿಸಬೇಕೆಂದು ಬಹಳ ವೇಳೆಯ ವರೆಗೆ ಪ್ರಯತ್ನಪಟ್ಟು ಹಾಗೆಯೆ ರಾತ್ರಿಯಲ್ಲಿ ಮಲಗಿಕೊಳ್ಳುತ್ತಾನೆ. ಆದರೆ ಮುಂಜಾವಿನಲ್ಲಿ ಎದ್ದಾಗ ಆ ಪ್ರಶ್ನೆಯ ಉತ್ತರವು ಅವನ ಕಣ್ಮುಂದೆಯೆ ಕಟ್ಟಿರುತ್ತದೆ. 'ಬಾಯಿಪಾಠ ಮಾಡಿದ ಒಂದು ಪದ್ಯವನ್ನು ಮಗುವು ಎರಡು ದಿನಗಳ ನಂತರ ಚೆನ್ನಾಗಿ ಹಾಡಬಲ್ಲದು' ಎಂದು ಡಾ|| ಬ್ಯಾಲಾರ್ಡ್‌ನು ಪ್ರಯೋಗ ಮಾಡಿ ಸಿದ್ಧಮಾಡಿದ್ದಾನೆ. ಒಂದು ಹೆಸರನ್ನು ಜ್ಞಾಪಿಸಿಕೊಳ್ಳಲು ಅನೇಕ ಬಾರಿ ಪ್ರಯತ್ನಿಸಿ ಬಿಟ್ಟುಬಿಡುತ್ತೇವೆ; ಆದರೆ ಬೇರೆ ವಿಷಯವನ್ನು ವಿಚಾರಿಸುತ್ತಿರುವಾಗ ಆ ಹೆಸರು ತಟ್ಟನೆ ನೆನಪಿಗೆ ಬರುತ್ತದೆ. ಪರೀಕ್ಷೆಯು ಸಮೀಪಿಸಿದಾಗ ಕಲಿತುದನ್ನು ಮರೆತಿರುವೆನೆಂದು ಧೈರ್ಯಗುಂದಿದ ವಿದ್ಯಾರ್ಥಿಯು ಪರೀಕ್ಷೆಯ ಕಾಲದಲ್ಲಿ ಪ್ರಶ್ನೆಗಳನ್ನು ಬಿಡಿಸಿದುದನ್ನು ನೋಡಿ ತಾನೆ ಸೋಜಿಗ

ಗೊಳ್ಳುತ್ತಾನೆ. ಹೇಳಿದ ನಿಬಂಧವನ್ನು ವಿದ್ಯಾರ್ಥಿಯು ಕೂಡಲೆ ಬರೆಯ ತೊಡಗಬಾರದು; ಅದು ಲಾಭದಾಯಕವಲ್ಲ. ಆದರೆ ಅದಕ್ಕೆ ಸಂಬಂಧಿಸಿದ ಸಂಗತಿಗಳನ್ನು ಓದಿ, ಆ ವಿಷಯವನ್ನು ಮನದಲ್ಲಿ ಮೇಲಿಂದ ಮೇಲೆ ಆಲೋಚಿಸಿ, ಬಳಿಕ ಅದಕ್ಕೆ ನಿಯಮಿಸಿದ ಸಮಯವು ಸಮೀಪಿಸಿದೊಡನೆ ಬರೆದರೆ ಉತ್ಕೃಷ್ಟ ನಿಬಂಧವಾಗುವುದು ಶಿಕ್ಷಕ ವಿದ್ಯಾರ್ಥಿಯು ಪಾಠದ ಟಿಪ್ಪಣಿಗಳನ್ನು ಸಿದ್ಧಪಡಿಸುವಾಗ, ವಾಗ್ಮಿಯು ಭಾಷಣವನ್ನು ಸಿದ್ಧಗೊಳಿಸುವಾಗ ಇದೇ ಉಪಾಯವನ್ನು ಕೈಕೊಳ್ಳಬೇಕು. ಏಕೆಂದರೆ ಪಾಠ ಕಲಿಸುವಾಗ, ಭಾಷಣಮಾಡುವಾಗ ಸಹಾಯವಾಗುವ ಭಾವಗ್ರಂಥಿಗಳು ಮಧ್ಯಕಾಲದಲ್ಲಿ ವಿಷಯವನ್ನು ಆಲೋಚಿಸುತ್ತಿರುವುದರಿಂದ ಒಟ್ಟುಗೂಡುತ್ತವೆ. ಕೈಕೆಲಸ, ಆಟ ಮುಂತಾದ ಪ್ರಸಂಗಗಳಲ್ಲಿ ಕುಶಲತೆಯನ್ನು ಸಂಪಾದಿಸುವಾಗ ನಾವು ಇಚ್ಛಿಸುವ ರೂಢಿಗಳು ಉಳಿದು, ಅನವಶ್ಯಕವಾದ ಮತ್ತು ಅಸಂಗತವಾದ ಚಲನಗಳು ತಾವಾಗಿಯೆ ಮಾಯವಾಗುತ್ತವೆ. ಈ ಕಾರ್ಯವು 'ಅಭಿರುಚಿ'ಯ ತತ್ವಕ್ಕೆ ಅನುಸರಿಸಿ ನಡೆಯುತ್ತದೆ. ಇದಲ್ಲದೆ ಯಶಸ್ವಿಯಾದ ಪ್ರತಿಯೊಂದು ಚಲನವೂ ಸಂಸಕ್ತಿಕಾರ್ಯವನ್ನು ಮುಂದರಿಸುತ್ತದೆ. "ಜಯದಂತೆ ಯಾವುದೂ ಜಯಶಾಲಿಯಾಗುವುದಿಲ್ಲ' ಎಂಬ ಪಾಶ್ಚಾತ್ಯ ಗಾದೆಯ ಮಾತಿನ ಅರ್ಥವಾದರೂ ಇದೇ ಆಗಿದೆ. ಅಂದರೆ ನಮಗೆ ಜಯವನ್ನು ತರುವ ಕ್ರಿಯೆಗಳು ನಮ್ಮ ಮನಸ್ಸಿನೊಳಗೆ ನಡೆಯುವ ಸಂಸಕ್ತಿ ಕಾರ್ಯಕ್ಕೆ ನೆರವಾಗುತ್ತವೆ. ಕೈಕೊಂಡ ಕಾರ್ಯದಲ್ಲಿ ಜಯವು ಸಿಕ್ಕಹಾಗೆಲ್ಲ ಉತ್ಸಾಹವು ಉಕ್ಕೇರುತ್ತದೆ, ಆನಂದವು ಇಮ್ಮಡಿಯಾಗುತ್ತದೆ; ಜಯಕ್ಕೆ ಕಾರಣವಾದ ಸಾಧನಗಳಲ್ಲಿ ಶ್ರದ್ಧೆಯೂ ಅಭಿರುಚಿಯೂ ಬಲಗೊಳ್ಳುತ್ತವೆ. ಮತ್ತೊಮ್ಮೆ ಅಂಥ ಕಾರ್ಯವನ್ನು ನೆರವೇರಿಸುವ ಪ್ರಸಂಗವು ಒದಗಿದಾಗ ಮೊದಲಿನ ಯಶಸ್ಸಿಗೆ ಕಾರಣವಾದ ಅನುಭವಗಳಿಂದುಂಟಾಗಿರುವ ಸಂಸಕ್ತಿಯು ಸಹಾಯವಾಗುತ್ತದೆ. ಮತ್ತು ಅಪಜಯವನ್ನು ತರಬಹುದಾದ ಕ್ರಿಯೆಗಳು ಅಭಿರುಚಿಯ ಅಭಾವದ ಮೂಲಕ ಪುನರಾವರ್ತನೆಯನ್ನು ಹೊಂದದೆ ತಾವೇ ಬಿಟ್ಟುಹೋಗುತ್ತವೆ.

ಈ ಸಂಗತಿಗಳ ಮಹತ್ವವು ಶಿಕ್ಷಣದಲ್ಲಿ ಅತ್ಯಧಿಕವಾಗಿರುತ್ತದೆ. ಕಲಿಸಿದುದು ಮಕ್ಕಳ ಮನಸ್ಸಿನಲ್ಲಿ ಸ್ಥಿರವಾಗಿ ಉಳಿಯಬೇಕಾದರೆ ನಾವು

ಅವಕಾಶವನ್ನು ಕೊಡಬೇಕಾಗುತ್ತದೆ. ಆದುದರಿಂದ ವಿರಾಮಕಾಲವು ಅಭ್ಯಾಸ ದಷ್ಟೆ ಮಹತ್ವವುಳ್ಳದಾಗಿದೆ. ತಾನು ಕಲಿಸುವ ವರ್ಗದಲ್ಲಿ ಪ್ರಗತಿಯೆ ಕಾಣುವುದಿಲ್ಲವೆಂದು ಶಿಕ್ಷಕನು ಒಮ್ಮೆಲೆ ನಿರಾಶನಾಗಕೂಡದು. ಅವನ ಪರಿಶ್ರಮದ ಫಲವು ಸ್ವಲ್ಪ ಸಮಯದ ನಂತರ ಗೋಚರವಾಗುವುದು. ಅವನು ಕಲಿಸಿದ ವಿಷಯದ ಸ್ಥಿರೀಕರಣವು ವಿದ್ಯಾರ್ಥಿಗಳಲ್ಲಿ ಕೆಲವು ಕಾಲ ನಡೆದಿರುತ್ತದೆ; ತಕ್ಕ ಸಮಯವು ಬಂದಾಗ ಅವನ ಪರಿಶ್ರಮದ ಫಲವು ವಿದ್ಯಾರ್ಥಿಗಳು ಇಡುವ ಮುಂದಡಿಯಲ್ಲಿ ಕಾಣುತ್ತದೆ. ಮನುಷ್ಯನ ಬೆಳವಣಿಗೆಯ ಕೆಲವು ಮಟ್ಟುಗಳು ಸೃಷ್ಟಿಯ ಸ್ಥಿರೀಕರಣದ ಅವಧಿಗಳಾಗಿರ ಬಹುದೆಂಬುದು ಮುಂದಿನ ಅಧ್ಯಾಯದಲ್ಲಿ ಗೊತ್ತಾಗುವುದು.

ಮೇಲೆ ವಿವರಿಸಿದ—ಮನಸ್ಸಿನ ಲಕ್ಷಣಗಳ ಮೇಲಿಂದ ಕೆಲವು ಶೈಕ್ಷಣಿಕ ಅನುಮಾನಗಳು ಹೊರಡುತ್ತವೆ. ಮನುಷ್ಯನಲ್ಲಿರುವ ಉತ್ಪಾದನಶಕ್ತಿಯು ಅಭಿವೃದ್ಧಿಯನ್ನೈದುವುದಕ್ಕೂ ಅದು ಕಾರ್ಯರೂಪದಲ್ಲಿ ಪ್ರಕಟವಾಗಲಿಕ್ಕೂ ಯೋಗ್ಯ ವಿರಾಮ ಕಾಲಗಳು ಅತ್ಯಾವಶ್ಯಕ. ಎರಡನೆಯದಾಗಿ **ಮಗುವಿಗೆ ಯೋಗ್ಯ ಸಂಸ್ಕಾರವನ್ನು ಕೊಡುವುದು ಮತ್ತು ಮಗುವು ಗೌರವಾನ್ವಿತ ಚಟುವಟಿಕೆಗಳಲ್ಲಿ ನಿರತನಾಗುವಂತೆ ಮಾಡುವುದು — ಇದುವೇ ಶಿಕ್ಷಣದ ಧ್ಯೇಯ.** ವಿಷಯಗಳ ಬಗ್ಗೆ ಮಕ್ಕಳಲ್ಲಿ "ಅಭಿರುಚಿ"ಯನ್ನು ಹುಟ್ಟಿಸಿ ಬೆಳೆಯಿಸುವುದು ಶಿಕ್ಷಣದ ಮುಖ್ಯ ಕಾರ್ಯವು. ಎಂದರೆ, ಶಾಲೆಯನ್ನು ವಿನೋದಗೃಹವನ್ನಾಗಿ ಮಾಡಬೇಕೆಂದಲ್ಲ, ಆದರೆ ಮಗುವು ಯೋಗ್ಯ ಚಟುವಟಿಕೆಯಲ್ಲಿ ತೊಡಗುವಂತೆ ಅದನ್ನು ಆಕರ್ಷಕ ಸ್ಥಾನವಾಗು ವಂತೆ ಮಾಡಬೇಕು; ಮತ್ತು ಆ ಯೋಗ್ಯ ಚಟುವಟಿಕೆಗಳಲ್ಲಿ ವ್ಯವಹರಿಸುವ ಚೇತನವು ಮಗುವಿನ ಸ್ವಭಾವದಲ್ಲಿಯೆ ಸ್ಥಿರವಾಗಿ ಉಳಿದು ಅವನ ಭಾವಿ ಜೀವನದಲ್ಲಿ ಪ್ರಸಂಗೋಚಿತವಾಗಿ ಉಪಯೋಗಿಸುವಂತಹದು ಆಗಬೇಕು.

೪

# ಮನುಷ್ಯನ ಪ್ರವೃತ್ತಿಗಳು ಮತ್ತು ಸಾಮರ್ಥ್ಯಗಳು

ಮನಸ್ಸಿನ ಮೂಲ ಲಕ್ಷಣಗಳನ್ನು ವಿವೇಚಿಸುವಾಗ ನಮಗೆ ಎರಡು ಮುಖ್ಯ ತತ್ವಗಳು ಕಂಡುಬರುವವು—**ಸಂಸ್ಕಾರ ಮತ್ತು ಚೇತನ.** ಸಂಸ್ಕಾರವೆಂದರೆ, ಆಗಿಹೋದ ಅನುಭವಶೇಷಗಳನ್ನು ಧಾರಣಮಾಡಿ ಅವುಗಳನ್ನು ವ್ಯವಸ್ಥಿತ ರೀತಿಯಿಂದ ಪೃಥ್ವೀಕರಿಸುವ ಮನಸ್ಸಿನ ಶಕ್ತಿ; ಚೇತನ ವೆಂದರೆ ಮನಸ್ಸಿನ ಉದ್ದೇಶಪೂರಿತ ಸಾಮಾನ್ಯ ಚಟುವಟಿಕೆ. ಈ ತತ್ವಗಳು ಮನಸ್ಸಿನ ಸರ್ವ ಚಟುವಟಿಕೆಗಳನ್ನಷ್ಟೆ ಅಲ್ಲ, ವಂಶಪರಂಪರೆಗೂ ದೇಹದ ಬೆಳವಣಿಗೆಗೂ ಸಂಬಂಧಿಸಿದ ಸರ್ವಸಂಗತಿಗಳನ್ನು ಸ್ಪಷ್ಟಗೊಳಿಸುತ್ತವೆ. ಶಿಶುವು ಪೂರ್ವದೇಹದ ಸಂಸ್ಕಾರಬಲದಿಂದಲೇ ಹುಟ್ಟುತ್ತದೆ. ಈ ಸಂಸ್ಕಾರ ಬಲದಿಂದ ಅದು ಸ್ವಾಭಾವಿಕವಾಗಿ ಅನೇಕ ನಿರ್ದಿಷ್ಟ ಕ್ರಿಯೆಗಳನ್ನೂ ಮಾಡುತ್ತದೆ ಮಗುವಿಗೆ ತಾಯ ಹಾಲನೀಂಟುವುದನ್ನೂ ಅಳುವುದನ್ನೂ ಯಾರು ಕಲಿಸಿದರು? ಇವು ಕಲಿಯದೆ ಬಂದ ಆನುವಂಶಿಕ, ನೈಸರ್ಗಿಕ ಗುಣಗಳು. ಇಂಥ ಗುಣಗಳಿಗೆ ಹುಟ್ಟುಗುಣಗಳು ಅಥವಾ ಪ್ರವೃತ್ತಿಗಳು ಎಂದೆನ್ನುತ್ತಾರೆ. ಪಶುಪಕ್ಷಿಗಳ ಆಚರಣೆಗಳನ್ನು ನಿರೀಕ್ಷಿಸುವುದರಿಂದ ಪ್ರವೃತ್ತಿಯ ಲಕ್ಷಣಗಳಾವುವೆಂಬುದು ನಮಗೆ ಸುಲಭವಾಗಿ ಗೊತ್ತಾಗುತ್ತದೆ.

**ಪ್ರಾಣಿಗಳ ವರ್ತನವು ನೈಸರ್ಗಿಕವೂ ಅಹುದು, ಬುದ್ಧಿಯುತವೂ ಅಹುದು.**— ಮ್ಯಾಕ್‌ಡೂಗಲ್ಲ್‌ನು ಇತ್ತಲಾಗಿ ಪ್ರಕಟಿಸಿದ "ಮನುಷ್ಯರ ಚೈತನ್ಯಗಳು" (*The Energies of Men*) ಮತ್ತು "ಜೀವನಸಮಸ್ಯೆ" (*The Riddle of Life*) ಎಂಬ ಪುಸ್ತಕಗಳಲ್ಲಿ ಪ್ರಾಣಿಗಳ ಜೀವನದ ಬಗ್ಗೆ ತನ್ನ ಹೊಸ ಸಿದ್ಧಾಂತಗಳನ್ನು ವಿವೇಚಿಸಿದ್ದಾನೆ. ಮೂಲತಃ ಪಶುಗಳ

ಆಚರಣೆಗೂ ಮನುಷ್ಯರ ಆಚರಣೆಗೂ ಅತ್ಯಂತ ಹೋಲಿಕೆಯು ಇದ್ದರೂ ಮನುಷ್ಯನ ವರ್ತನದಲ್ಲಿ ಒಂದು ವೈಶಿಷ್ಟ್ಯವಿದೆಯೆಂದು ಅವನು ಹೇಳುತ್ತಾನೆ. ಪ್ರಾಣಿಯ ವರ್ತನದ ಎರಡು ಲಕ್ಷಣಗಳನ್ನು ನಾವು ವಿಶೇಷವಾಗಿ ಗಮನಿಸಬೇಕಾಗಿದೆ. ಪ್ರಾಣಿಗಳ ವ್ಯವಹಾರಗಳನ್ನು ಮೊದಲು ಆಲೋಚಿಸುವಾ. ಪ್ರಾಣಿಗಳು ತಮಗೆ ಹಿತವನ್ನುಂಟುಮಾಡುವ ಕಾರ್ಯಗಳನ್ನು ದೂರದೃಷ್ಟಿಯಿಂದಲೂ ಇಚ್ಛಾಪೂರ್ವಕವಾಗಿಯೂ ಮಾಡುತ್ತವೆಂದು ಗ್ರಹಿಸಲಿಕ್ಕಾಗದು. ಚಳಿಗಾಲಕ್ಕೆಂದು ಇಣಚಿಗಳು ಮತ್ತು ಇರುವೆಗಳು ಆಹಾರವನ್ನು ಸಂಗ್ರಹಿಸುವುದು, ಹಕ್ಕಿಗಳು ಗೂಡನ್ನು ಕಟ್ಟುವುದು, ತತ್ತಿಗಳಿಗೆ ಕಾವು ಕೊಡುವುದು, ಹುಳಗಳು ಮತ್ತು ಮೀನಗಳು ಮುಂತಾದ ಪ್ರಾಣಿಗಳು ತಮ್ಮ ಮರಿಗಳನ್ನು ಪೋಷಿಸುವುದು ಮತ್ತು ರಕ್ಷಿಸುವುದು — ಇವು ಸ್ವಾಭಾವಿಕ ಕ್ರಿಯೆಗಳು. 'ಇವುಗಳನ್ನು ನಾನು ಮಾಡುತ್ತೇನೆ' ಎಂಬ ಸ್ಪಷ್ಟಜ್ಞಾನವು ಅವುಗಳಿಗೆ ಇರುವುದಿಲ್ಲ. ಇಣಚಿಗೆ ಮುಂದೆ ಬರುವ ಚಳಿಗಾಲದ ಮತ್ತು ಆ ಕಾಲದಲ್ಲಿ ಅವಶ್ಯವಾಗಿ ಬೇಕಾಗುವ ಆಹಾರದ ಪೂರ್ವಾಲೋಚನೆ ಉಂಟೆಂದು ತಿಳಿಯಲಿಕ್ಕಾಗದು. ಅದೇ ಮೊದಲನೆಯ ಸಲ ಗೂಡನ್ನು ಕಟ್ಟುವ ಪಕ್ಷಿಗಳಿಗೆ ಮುಂದೆ ಹುಟ್ಟಬಹುದಾದ ತಮ್ಮ ಮರಿಗಳಿಗೆ ನೆರಳೂ ಆಶ್ರಯವೂ ಬೇಕೆಂಬ ಕಲ್ಪನೆಯು ಇರುವುದೆಂದು ಭಾವಿಸಲಿಕ್ಕೂ ಆಗದು. ಪ್ರಾಣಿಗಳಿಗೆ ಅತಿ ದೂರದೃಷ್ಟಿ ಇಲ್ಲವೆಂದೇ ನಾವು ನಂಬಬೇಕಾಗುತ್ತದೆ. ಇದಲ್ಲದೆ ಅದೇ ಜಾತಿಯ ಎಲ್ಲ ಪ್ರಾಣಿಗಳು ಇಂತಹ ಚಟುವಟಿಕೆಗಳನ್ನು ಒಂದೇ ರೀತಿಯಾಗಿ ಮಾಡುತ್ತವೆ. ಇವು ಪ್ರಾಣಿಗಳ ಶರೀರ-ಸ್ವಭಾವಗಳಿಂದೇ ತೋರುತ್ತವೆ. (ಆದರೂ ಈ ತರದ ಅಲ್ಪ-ಸ್ವಲ್ಪ ದೂರದೃಷ್ಟಿಯು ಪ್ರಾಣಿಗಳಿಗೆ ನೈಸರ್ಗಿಕವಾಗಿದೆಯೆಂದು ಮ್ಯಾಕ್‌ಡೂಗಲ್‌ನು ಒಪ್ಪುತ್ತಾನೆ.) ಇಂಥ ಕ್ರಿಯೆಗಳಿಗೆ ಹುಟ್ಟುಗುಣ, ಪ್ರಾಕೃತಿಕ ಗುಣ, ನೈಸರ್ಗಿಕಶಕ್ತಿ ಅಥವಾ ಸಹಜಪ್ರವೃತ್ತಿ (Instinct) ಎಂದೆನ್ನುತ್ತಾರೆ

ಪ್ರಾಣಿವರ್ತನದ ಎರಡನೆಯ ಮುಖ್ಯ ಲಕ್ಷಣವೆಂದರೆ ಪ್ರಸಂಗಾನುಸಾರ ತನ್ನ ವರ್ತನವನ್ನು ಸರಿಪಡಿಸಿಕೊಳ್ಳುವುದು. ಈ ಮಹತ್ವದ ಲಕ್ಷಣವನ್ನು ಶಾಸ್ತ್ರಜ್ಞರು ಇತ್ತೀಚೆಗೆ ಕಂಡುಹಿಡಿದಿದ್ದಾರೆ. ಪ್ರಾಣಿಗಳು ಪ್ರಾಕೃತಿಕ ರೀತಿಯಿಂದಲೂ ಮನುಷ್ಯರು ಬುದ್ಧಿಯಿಂದಲೂ ವರ್ತಿಸುತ್ತಾರೆಂದು ಪೂರ್ವಿಕರು

ನಂಬಿದ್ದರು. ಆದರೆ ಅವರ ಈ ನಂಬುಗೆಯು ತಪ್ಪಾದುದಾಗಿದೆ. ಪ್ರಾಣಿಯ ವರ್ತನವು **ಪ್ರಾಕೃತಿಕವೂ** ಆಹುದು, **ಬುದ್ಧಿಯುತವೂ** ಆಹುದು. ಏಕೆಂದರೆ ಪ್ರಸಂಗಾನುಸಾರವಾದ ವರ್ತನವು ಬುದ್ಧಿಯ ಲಕ್ಷಣವೇ. ನೆಲದಲ್ಲಿ ದುಂಡಗಾದ ಹೋರು ತೆಗೆದು ತನ್ನ ಬೀಡನ್ನು ಕಟ್ಟುವುದು ಜೇಡಹುಳದ ಸ್ವಭಾವಸಿದ್ಧವಾದ ಗುಣವು. ಆದರೆ ಗೋಲಾಕಾರದ ಮುಚ್ಚಳವನ್ನು ತಯಾರಿಸುವಾಗ ಏನಾದರೂ ನ್ಯೂನತೆಗಳು ಕಂಡುಬಂದಲ್ಲಿ ಅವುಗಳನ್ನು ತನ್ನ ಸಮಯೋಚಿತ ಕ್ರಿಯೆಗಳಿಂದ ಸರಿಪಡಿಸಿಕೊಳ್ಳುತ್ತದೆ. ಈ ರೀತಿಯಾಗಿ ಪ್ರಾಣಿಯು ತನ್ನ ಪ್ರಾಕೃತಿಕ ವರ್ತನದಲ್ಲಿಯ ನೈಸರ್ಗಿಕ ನ್ಯೂನತೆಗಳನ್ನು ಬುದ್ಧಿಯುತ ಪ್ರತಿಕ್ರಿಯೆಯಿಂದ ತಿದ್ದಿಕೊಳ್ಳುತ್ತದೆ. ಜಿ. ಡಬ್ಲ್ಯೂ ಮತ್ತು ಇ. ಜಿ. ಪೆಕ್‌ಹ್ಯಾಮ್ಸ್ ಎಂಬವರು ಕಡಜಿಗ ಹುಳಗಳ ಮೇಲೆ ಪ್ರಯೋಗ ಮಾಡಿ ಇದೇ ಸಿದ್ಧಾಂತಕ್ಕೆ ಬಂದಿರುವರು. ಒಂದು ಕಡಜಿಗವು ತನ್ನ ಹುಟ್ಟನ್ನು ಕ್ರಮೇಣ ಕಟ್ಟುತ್ತ ಸಾಗಿತ್ತು. ಒಂದು ದಿವಸ ನಿರೀಕ್ಷಕನು ಅರ್ಧ ಮುಗಿದ ಹುಟ್ಟಿನ ತಳದಲ್ಲಿ ಒಂದು ರಂಧ್ರವನ್ನು ಮಾಡಿದನು. ಅದನ್ನು ನೋಡಿ ಕಳವಳಗೊಂಡ ಕಡಜಿಗವು ತಾನು ತಂದಿದ್ದ ಮಣ್ಣಿನ ಉಂಡೆಯಿಂದ ಆ ತೆಜ್ಜವನ್ನು ಮುಚ್ಚಿ, ಬಳಿಕ ಮನೆಕಟ್ಟುವ ತನ್ನ ಕೆಲಸವನ್ನು ಮುಂದರಿಸಿತು. ಮರುದಿನ ತೆಗೆದ ಮತ್ತೊಂದು ರಂಧ್ರವನ್ನೂ ಹಾಗೆಯೆ ಮುಚ್ಚಿತು. ಹೀಗೆ ಮಾಡುವಾಗ ಕಡಜಿಗವು ತನ್ನ ಹುಟ್ಟನ್ನು ಪರೀಕ್ಷಿಸಿ ಒಮ್ಮೆ **ಒಳಗಿನಿಂದಲೂ** ಒಮ್ಮೆ **ಹೊರಗಿನಿಂದಲೂ** ರಂಧ್ರಗಳನ್ನು ಮುಚ್ಚಿತು. ಬೇರೊಂದು ದಿವಸ ನಿರೀಕ್ಷಕನು ಅಪೂರ್ಣವಾದ ಹುಟ್ಟನ್ನು ಬುಡಮೇಲು ಮಾಡಿಟ್ಟಿದ್ದನು. ಮಣ್ಣಿನ ಉಂಡೆಯನ್ನು ತಕ್ಕೊಂಡು ಮರಳಿ ಬಂದ ಕಡಜಿಗವು ಸ್ವಲ್ಪ **ಅನುಮಾನಿಸಿದ ನಂತರ** ಅಪೂರ್ಣವಾದ ಭಾಗದಲ್ಲಿ ಅದನ್ನು ಇಟ್ಟಿತು. ಹುಟ್ಟಿನ ಗೋಡೆಯು ಮುಗಿಯುವ ವರೆಗೆ ಹೀಗೆಯೆ ತನ್ನ ಕೆಲಸ ಸಾಗಿಸಿತು.

ಇಂತಹ ಪ್ರಸಂಗವು ಆ ಕಡಜಿಗ ಹುಳದ ಹಿಂದಿನ ಅನುಭವದಲ್ಲಿಯಾಗಲಿ ಅಥವಾ ಅದರ ಪೂರ್ವಜರ ಅನುಭವದಲ್ಲಿಯಾಗಲಿ ಕ್ವಚಿತ್ತಾಗಿ ಸಂಭವಿಸಿರಬಹುದು. ಹುಟ್ಟುಗಳನ್ನು ಕಟ್ಟುವುದು ಪ್ರಾಕೃತಿಕ ಗುಣವು. ಆದರೆ ರಂಧ್ರವನ್ನು ಸರಿಪಡಿಸಿಕೊಳ್ಳುವುದು ಒಂದು ಅಭೂತಪೂರ್ವವಾದ

ಸಮಸ್ಯೆಯನ್ನು ಬಿಡಿಸಿದಂತೆಯೆ ಸರಿ. ಏಕೆಂದರೆ ಕಡಜೆಗವು ತನ್ನ ಸ್ವಭಾವಜನ್ಯವಾದ ಚಟುವಟಿಕೆಯನ್ನು ಮಾರ್ಪಡಿಸಿ ಸಮಯೋಚಿತವಾಗಿ ವರ್ತಿಸಿತು. ಇಲ್ಲಿ ಅದರ ಬುದ್ಧಿಯು (Intellect) ವ್ಯಕ್ತವಾಗುತ್ತದೆ.

ಮೇಲೆ ವಿವರಿಸಿದ ಉದಾಹರಣೆಗಳು ಪ್ರಾಣಿಜೀವನದ ಎರಡು ಅತ್ಯಂತ ಮಹತ್ವದ ಲಕ್ಷಣಗಳನ್ನು ಸ್ಪಷ್ಟಗೊಳಿಸುತ್ತವೆ—(೧) ಪ್ರಾಣಿಯ ಚಟುವಟಿಕೆಯು **ಉದ್ದೇಶ ಅಥವಾ ಗುರಿ–ಶೋಧನೆಯ** ಸ್ವರೂಪದುದು. ಎಂದರೆ ಯಾವುದಾದರೊಂದು ಗುರಿಯನ್ನು ಸಾಧಿಸಲಿಕ್ಕೆ ಅದು ಸತತ ಪ್ರಯತ್ನಮಾಡುವುದು. (೨) ಸಂದರ್ಭಗಳು ಬದಲಾಯಿಸಿದರೂ ಸ್ವಾಭಾವಿಕ ಗುರಿಯನ್ನು ಮುಟ್ಟಲಿಕ್ಕೆ ಬೇಕಾಗುವಂಥ ಕಾರ್ಯವನ್ನು ಅದು ಪ್ರಸಂಗಾನುಸಾರ **ಸರಿಪಡಿಸಿಕೊಳ್ಳುವುದು.** ವರ್ತನದ ಇವೆರಡು ಲಕ್ಷಣಗಳು ಮನಸ್ಸಿನ ಅಸ್ತಿತ್ವದ ಮೂಲ ಸಾಕ್ಷಿಗಳಾಗಿವೆ. ಗುರಿಯ ಕಲ್ಪನೆಯು ಎಷ್ಟೇ ಅಸ್ಪಷ್ಟವಿದ್ದರೂ ಅದರ ಕಡೆಗೆ ನಡೆದ ಪ್ರಾಣಿಗಳ ಇಂತಹ ಕ್ರಿಯೆಯನ್ನು **ಉದ್ದೇಶಯುತ ಕ್ರಿಯೆ** (Purposive action) ಎಂದು ಎನ್ನಬಹುದು.

**ಉದ್ದೇಶಯುತ ಮತ್ತು ಪರಾವರ್ತನ ಕ್ರಿಯೆಗಳ ಭೇದ.**— ಬುದ್ಧಿಗೂ ಮನಸ್ಸಿಗೂ ಸ್ಥಾನವನ್ನೀಯದ ಯಂತ್ರವಾದಿಗಳು ಪ್ರಾಣಿಯ ವರ್ತನಗಳೆಲ್ಲ ಪುನರಾವರ್ತನ ಕ್ರಿಯೆಗಳೆಂದೇ ಭಾವಿಸುತ್ತಾರೆ. ಮನುಷ್ಯನ ಶರೀರದಲ್ಲಿಯೂ ಉಚ್ಚಪ್ರಾಣಿಗಳಲ್ಲಿಯೂ ಪ್ರತಿಕ್ರಿಯೆಗಳು ತೋರುವುದು ಸಹಜವಾದುದು. ಕಾಲಿನ ಮೇಲೆ ಕಾಲಿಟ್ಟು ಕುಳಿತು, ಮೇಲಿನ ಮೊಣಕಾಲ ಚಿಪ್ಪೆಯ ಬುಡದ ನರವನ್ನು ಮೆಲ್ಲನೆ ತಟ್ಟಿದರೆ ಆ ಕಾಲು ಮುಂದಕ್ಕೆ ಸಿವುಚುವುದು. ಇದು ಪರಾವರ್ತನ ಕ್ರಿಯೆಯು. ತುರಿಸಿಕೊಳ್ಳುವುದು, ಎವೆಯಿಕ್ಕುವುದು, ಉಸರಾಡಿಸುವುದು, ಪಚನ ಮಾಡುವುದು, ಕಣ್ಣಲ್ಲಿ ನೀರು ಬರುವುದು, ಜೊಲ್ಲು ಸುರಿಯುವುದು, ಮುಂತಾದ ದೇಹದ ಕ್ರಿಯೆಗಳೆಲ್ಲವೂ ಪರಾವರ್ತನ ಕ್ರಿಯೆಗಳು. (ಆದರೆ ದೇಹದ ಇಂಥ ಕ್ರಿಯೆಗಳನ್ನು ಉದ್ದೇಶಪೂರ್ವಕವಾಗಿ ನಿಯಂತ್ರಿಸಿದರೆ ಅವು ಪರಾವರ್ತನದ ಮಟ್ಟವನ್ನು ಮೀರುವವು.) ಜ್ಞಾನತಂತುಗಳು ಪ್ರೇರಿಸಿದರೆ ಕ್ರಿಯಾತಂತುಗಳು ಕಾರ್ಯ ನಡೆಯಿಸುವುವು. ಇದೇ ಪರಾವರ್ತನ ಕ್ರಿಯೆಯ ಲಕ್ಷಣ. ಮಿದುಳಿನ ಸಹಾಯವಿಲ್ಲದೆ ಕಶೇರುಕಾರಜ್ಜುವಿನಿಂದಲೇ ಈ ಕ್ರಿಯೆಗಳು

ಜರುಗುತ್ತವೆ. ಮಿದುಳನ್ನು ತೆಗೆದ ನಾಯಿಯ ಅಂಗಾಲುಗಳನ್ನು ಉದ್ದೀಪನ ಗೊಳಿಸುವುದರಿಂದ ಅದು ಇತರ ನಾಯಿಗಳು ಅಡ್ಡಾಡುವಂತೆ ಚಲಿಸುತ್ತದೆ. ಆದರೂ ಪರಾವರ್ತನ ಕ್ರಿಯೆಯಲ್ಲಿ ವರ್ತನದ ವಿಶೇಷ ಲಕ್ಷಣವಾದ ಉದ್ದೇಶವು ತೋರಿಬರುವುದಿಲ್ಲ. ಕೆಳಗಿನ ಸಂಗತಿಗಳಿಂದ ಅವೆರಡರಲ್ಲಿಯ ಭೇದವು ಕಂಡುಬರುವುದು — (೧) ಪರಾವರ್ತನೆಯಲ್ಲಿ ಸ್ವಯಂಪ್ರೇರಣೆಯಿಲ್ಲ. ವಿಶಿಷ್ಟ ರೀತಿಯಿಂದ ಪ್ರೇರಿಸಿದಲ್ಲಿ ಮಾತ್ರ ಮಿದುಳಿಲ್ಲದ ನಾಯಿಯು ಚಲಿಸುತ್ತದೆ. ಆದರೆ ಸಜೀವ ನಾಯಿಯು ನಿರ್ದಿಷ್ಟ ಪ್ರೇರಣೆಯಿಂದ ನಿದ್ರಾಭಂಗವಾಗಿ ಎದ್ದು ಹೋಗುವುದು. ಅದರ ಮೇಲೆ ಮಳೆ ಬೀಳಹತ್ತಿದರೆ, ಇಲ್ಲವೆ ಹುಡುಗರು ಅದನ್ನು ಪೀಡಿಸಹತ್ತಿದರೆ ಮಲಗಿದ ನಾಯಿಯು ಎದ್ದು ಬೇರೆ ಕಡೆ ತೆರಳುತ್ತದೆ. (೨) ಪರಾವರ್ತನೆಯಲ್ಲಿ ಸ್ಥಿರಪ್ರಯತ್ನವಿಲ್ಲ. ಪ್ರೇರಕವಸ್ತುವು ಇಂದ್ರಿಯಕ್ಕೆ ಸಂಬಂಧಿಸಿ ಇರುವ ವರೆಗೆ ಮಾತ್ರ ಪ್ರತಿಕ್ರಿಯೆಯು ನಡೆಯುತ್ತದೆ. ಆದರೆ ವರ್ತನವು ಗುರಿಯನ್ನು ಮುಟ್ಟುವ ವರೆಗೆ ಸಾಗುತ್ತದೆ. (೩) ಪರಾವರ್ತನೆಯಲ್ಲಿ ಚಲನಗಳ ವೈವಿಧ್ಯವು ಇಲ್ಲ. ಎಲ್ಲ ಸಂದರ್ಭಗಳಲ್ಲಿ ಅದೇ ಪ್ರೇರಕವು ಒಂದೇ ತೆರನಾದ ಕ್ರಿಯೆಗಳನ್ನು ಆಹ್ವಾನಿಸುತ್ತದೆ. ಆದರೆ ಉದ್ದೇಶಯುತ ವರ್ತನದಲ್ಲಿ ವೈವಿಧ್ಯವು ಉಂಟು. ತನ್ನ ಯಜಮಾನನ ಸೀಟಿಯ ಧ್ವನಿಯನ್ನು ಕೇಳಿದ ನಾಯಿಯು ಅವನನ್ನು ಹುಡುಕಲಿಕ್ಕೆ ಅತ್ತಿಂದ ಇತ್ತ ಇತ್ತಿಂದ ಅತ್ತ ಹರಿದಾಡುವುದು (೪) ಪರಾವರ್ತನೆಯಲ್ಲಿ ಗುರಿ–ಶೋಧನೆ ಇಲ್ಲ. ಬಿಸಿಲಲ್ಲಿ ಮಲಗಿದ್ದ ನಾಯಿಯು ಎದ್ದು ಅತ್ತಿತ್ತ ಅಡ್ಡಾಡಿದರೆ ಅದು ಪರಾವರ್ತನ ಕ್ರಿಯೆಯೆಂದು ನಾವು ಗ್ರಹಿಸಬಹುದು. ಆದರೆ ಅದು ನೆರಳಿದ್ದ ಕಡೆಗೆ ಹೋಗಿ ಪುನಃ ನಿದ್ರಿಸಲಾರಂಭಿಸಿದರೆ ಅದು ಉದ್ದೇಶಾತ್ಮಕ ವರ್ತನವೆಂದು ನಿರ್ಧಾರವಾಗಿ ಊಹಿಸಬಹುದು.

ಇದಲ್ಲದೆ ಮನಸ್ಸಿನ ಮೂಲಧರ್ಮದ ದೃಷ್ಟಿಯಿಂದ ನೋಡಿದರೂ ವರ್ತನವಾದವು ಸದೋಷವೆಂದೇ ತೋರುತ್ತದೆ.—(೧) ಕಡಜಿಗವು ತನ್ನ ಹುಟ್ಟನ್ನು ಕಟ್ಟುವಾಗ ಕೇವಲ ಇಂದ್ರಿಯ ಪ್ರೇರಕಗಳಿಂದ ವರ್ತಿಸದೆ ಹುಟ್ಟಿನ ಸಂಪೂರ್ಣಜ್ಞಾನವನ್ನು ಇಟ್ಟುಕೊಂಡು ಕಾರ್ಯವನ್ನು ನಿರ್ವಹಿಸುತ್ತದೆ. ಅದರ ಈ ಪರಿಜ್ಞಾನಶಕ್ತಿಯು ನಮಗೆ ಪ್ರತ್ಯಕ್ಷವಾಗಿ ಕಾಣುವುದಿಲ್ಲ.

ಆದರೆ ಅನುಮಾನದಿಂದ ಗೊತ್ತಾಗುತ್ತದೆ. ಮೊದಲು ಸಣ್ಣದಾಗಿಯೂ ಕ್ರಮೇಣ ಮಧ್ಯದ ವರೆಗೆ ವಿಸ್ತೃತವಾಗಿಯೂ ಕೊನೆಗೆ ಮತ್ತೆ ಸಣ್ಣ ದಾಗಿಯೂ ಕಡಜಿಗವು ತನ್ನ ಹುಟ್ಟನ್ನು ರಚಿಸುತ್ತದೆ; ರಂಧ್ರಗಳನ್ನು ಮುಚ್ಚುತ್ತದೆ ಕಡಜಿಗವು ಮನೆಕಟ್ಟುವಾಗ ಪರಿಜ್ಞಾನಶಕ್ತಿ ಮತ್ತು ಕಾರ್ಯ ನಿರ್ವಾಹಕ ಶಕ್ತಿ ಎಂಬ ಎರಡು **ಸಹಜ ಶಕ್ತಿಗಳು** (Innate Abilities) ವ್ಯಕ್ತವಾಗುತ್ತವೆ. (೨) ವರ್ತನವಾದವು ಅನುಲಕ್ಷಿಸದ ಎರಡನೆಯ ಸಂಗತಿ ಯೇನಂದರೆ- ಇಂತಹ ಚಟುವಟಿಕೆಯು ಜನ್ಮಜಾತ ಶಕ್ತಿಗಳನ್ನು ಸೂಚಿಸುವು ದಲ್ಲದೆ, ಆ ಶಕ್ತಿಗಳಿಗೆ ಆಧಾರವಾದ **ಸಹಜಪ್ರವೃತ್ತಿ**ಗಳನ್ನೂ ಸೂಚಿಸುತ್ತದೆ. ಕಡಜಿಗದ ಮನೆಕಟ್ಟುವ ಸಾಮರ್ಥ್ಯವು ತಕ್ಕ ಕಾಲವು ಬರುವ ವರೆಗೆ ಗುಪ್ತವಾಗಿಯೆ ಇರುತ್ತದೆ. ಅದಕ್ಕೆ ಪೂರ್ವದಲ್ಲಿ ಚಿಕ್ಕ ಕಡಜಿಗವು ಯೋಗ್ಯ ವಾದ ಆಹಾರ ಹುಡುಕುವುದರಲ್ಲಿಯೂ ಗರ್ಭಧಾರಣ ಮಾಡುವದರಲ್ಲಿಯೂ ಇತರ ಶಕ್ತಿಗಳನ್ನು ಉಪಯೋಗಿಸುತ್ತದೆ.

ತಾತ್ಪರ್ಯವೇನೆಂದರೆ— ಪ್ರತಿಯೊಂದು ಪ್ರಾಣಿಯಲ್ಲಿ ಸಹಜ ಶಕ್ತಿಗಳೂ ಪ್ರವೃತ್ತಿಗೂ ಹುಟ್ಟುಗುಣಗಳಾಗಿರುತ್ತವೆ. ಕಡಜಿಗ ಹುಳ ವನ್ನು (ಪ್ರಾಣಿಯನ್ನು) ಒಂದು ಕಾರ್ಖಾನೆಗೆ ಹೋಲಿಸಬಹುದು. ಕಾರ್ಖಾನೆಯಲ್ಲಿರುವ ರಾಟೆಗಳು ಕಡಜಿಗದ ಶಕ್ತಿಗಳಂತೆ (Abilities); ವಿದ್ಯುತ್ತು ಅಥವಾ ಉಗಿಯನ್ನು ಉತ್ಪನ್ನಮಾಡುವಂಥ ಯಂತ್ರವು (ಜನ- ರೇಟರ್) ಕಡಜಿಗವು ಮನೆಕಟ್ಟುವ ಪ್ರವೃತ್ತಿಯಂತೆ (Propensity); ಚಲಿಸುವ ವಿದ್ಯುತ್ತಿನ ಅಥವಾ ಉಗಿಯ ಪ್ರವಾಹವು ಕಡಜಿಗದ ಶಕ್ತಿಗಳನ್ನು ಕಾರ್ಯದಲ್ಲಿ ತೊಡಗಿಸುವ ಉತ್ಸಾಹವೃತ್ತಿ, ಒತ್ತು, ಪ್ರೇರಣೆ, ಪ್ರಚೋದನೆ, ಅಥವಾ **ಸ್ಫೂರ್ತಿ**ಯಂತೆ (Tendency). ಪ್ರೇರಣೆಯಿಲ್ಲದೆ ಶಕ್ತಿಗಳು ಸ್ತಬ್ಧವಾಗಿರುತ್ತವೆ.

ಹೀಗೆ ಮನೆಕಟ್ಟುವುದು, ಪೋಷಿಸುವುದು ಅಥವಾ ಗರ್ಭಧರಿಸುವುದು, ಮೊದಲಾದ ಒಂದು ವಿಶಿಷ್ಟ ಗುರಿಯ ಕಡೆಗೆ ಸಾಗಿರುವ **ಚಟುವಟಿಕೆಗಳಿಗೆ** ಶಕ್ತಿಗಳಿಂದೊಡಗೂಡಿದ ಪ್ರವೃತ್ತಿಯೆ ಮೂಲಾಧಾರವು. **ಆನುವಂಶಿಕ ಬಲ** ದಿಂದ ಪಕ್ವವಾಗುವ ಮತ್ತು ಮೊದಲನೆಯ ಸಾರೆಯೆ **ಕಾರ್ಯನಡಿಸುವ** ಮನೋರಚನೆಯ ಸಂಪೂರ್ಣ **ಘಟಕಕ್ಕೆ** ಹುಟ್ಟುಗುಣ, **ಪ್ರಾಕೃತಿಕಗುಣ**

ಅಥವಾ ಅಭಿವೃದ್ಧಿಗೊಳಿಸಬೇಕಾದರೆ ಅದನ್ನು ಉಪಯೋಗಿಸುವಂತೆ ಅವನಿಗೆ ಉತ್ತೇಜನವೀಯಬೇಕು.

ಒಬ್ಬ ಮನುಷ್ಯನಲ್ಲಿ ಟೇನಿಸ್, ಗೋಲ್ಫ್, ಚದುರಂಗ ಮೊದಲಾದ ಆಟಗಳನ್ನು ಒಳ್ಳೇ ಚಾತುರ್ಯದಿಂದ ಆಡುವ, ಲೆಕ್ಕಗಳನ್ನು ಬಿಡಿಸುವ, ರಸವತ್ತಾದ ಕವನಗಳನ್ನು ರಚಿಸುವ ಶಕ್ತಿಗಳಿರಬಹುದು. ಆದರೆ ಅವುಗಳನ್ನು ಅವನು ಯಾವಾಗಲೂ ಉಪಯೋಗಿಸುತ್ತಿರುವುದಿಲ್ಲ. ಪ್ರತಿಯೊಂದು ಶಕ್ತಿಯನ್ನು ಕಾರ್ಯರೂಪದಲ್ಲಿ ತರಲು ಒಂದು ಉದ್ದೇಶ, ಒಂದು ಗುರಿ ಅವಶ್ಯವಿದೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಮಾತೇನೆಂದರೆ— ಅದೇ ಉದ್ದೇಶವು ಈ ವಿವಿಧ ಶಕ್ತಿಗಳನ್ನು ಪ್ರಚೋದನಗೊಳಿಸಬಲ್ಲುದು; ಮತ್ತು ಅವುಗಳಲ್ಲಿ ಯಾವುದಾದರೊಂದು ಶಕ್ತಿಯು ಬೇರೆ ಬೇರೆ ಪ್ರಸಂಗಗಳಲ್ಲಿ ಬೇರೆ ಬೇರೆ ಉದ್ದೇಶಗಳಿಂದ ಕಾರ್ಯಸಾಗಿಸಬಹುದು. ಎರಡ ನೆಸುವರ ಮೇಲೆ ತನ್ನ ಪ್ರಭಾವವನ್ನು ಬೀರಬೇಕೆಂಬ ಇಚ್ಛೆಯು ಅನುಕ್ರಮವಾಗಿ ಈ ಎಲ್ಲ ಶಕ್ತಿಗಳನ್ನು ಪ್ರೇರಿಸಬಹುದು. ತನ್ನ ಸಾಲೆಯ ಅಥವಾ ಕಾಲೇಜಿನ ಕೀರ್ತಿಯನ್ನು ಹೆಚ್ಚಿಸುವ ಇಚ್ಛೆಯಾಗಲಿ ಹೊಟ್ಟೆ ಹೊರಕೊಳ್ಳುವ ಇಚ್ಛೆಯಾಗಲಿ ಪ್ರತ್ಯೇಕವಾಗಿ ಅದೇ ಶಕ್ತಿಯನ್ನು ಪ್ರೇರಿಸಬಹುದು; ಮತ್ತು ಇಂತಹ ಎರಡು ಮೂರು ಉದ್ದೇಶಗಳು ಕೂಡಿ ಯಾವುದಾದರೊಂದು ಶಕ್ತಿಯನ್ನು ಕಾರ್ಯದಲ್ಲಿ ತೊಡಕಿಸಬಹುದು.

ಈ ದೃಷ್ಟಿಯಿಂದ ವಿಚಾರಿಸಿ ನೋಡಿದರೆ ಮನುಷ್ಯನ ವರ್ತನವು ಕ್ಲಿಷ್ಟವಾದುದು ಎಂದು ತೋರುತ್ತದೆ. ಪಶುವಿನಲ್ಲಿ ಪ್ರತಿಯೊಂದು ಪ್ರವೃತ್ತಿಗೂ ನಿರ್ದಿಷ್ಟಶಕ್ತಿಗೂ ನಿಕಟಸಂಬಂಧವಿರುತ್ತದೆ. ಆದರೆ ಮನುಷ್ಯನ ಶ್ರೇಷ್ಠತೆಯು ಅವನಲ್ಲಿ ವ್ಯಕ್ತವಾಗುವ ಅನೇಕ ಶಕ್ತಿಗಳಿಂದಲೂ ಮತ್ತು ನಾನಾವಿಧವಾದ ಶಕ್ತಿಗಳನ್ನು ಯಾವುದಾದರೊಂದು ಪ್ರವೃತ್ತಿಯ ಸೇವೆಯಲ್ಲಿ ತೊಡಗಿಸುವ ಅವನ ಅಪಾರ ಸ್ವಾತಂತ್ರ್ಯದಿಂದಲೂ ಕಂಡು ಬರುತ್ತದೆ. ಆಹಾರಕ್ಕೋಸ್ಕರ ಪೆಟ್ಟಿಗೆಯನ್ನು ತೆರೆಯಲು ಕಲಿತ ಇಲಿಯು ಒಂದು ವೇಳೆ ಭಯದ ಪ್ರಸಂಗದಲ್ಲಿ ತನ್ನ ರಕ್ಷಣಾರ್ಥವಾಗಿ ಅದನ್ನು ತೆರೆಯುವುದೆಂಬುದು ಸಂಶಯಾತ್ಮಕವಾಗಿದೆ. ಆದರೆ ಆಹಾರವನ್ನು

ದೊರಕಿಸಲಿಕ್ಕೆ ಇಂಥ ಪೆಟ್ಟಿಗೆಯನ್ನು ತೆರೆಯಲು ಕಲಿತಿರುವ ಮಗುವು ಭಯಗ್ರಸ್ತನಾದಾಗ ಅಡಗಿಕೊಳ್ಳಲು ಅದನ್ನು ತೆರೆಯುವುದೆಂಬುದನ್ನು ನಂಬಲು ಸಾಧ್ಯವಿದೆ.

ಇಲ್ಲಿ ಉದ್ದೇಶಪೂರಿತ (Purposeful) ಮತ್ತು ಉದ್ದೇಶಯುತ (Purposive) ಎಂಬ ಪದಗಳ ಅಥ ವಿವರಣೆಯನ್ನು ಮಾಡುವುದು ಉಚಿತವೆನಿಸುತ್ತದೆ. ಉದ್ದೇಶಪೂರಿತ ಕ್ರಿಯೆಯಲ್ಲಿ ಗುರಿಯ ಕಲ್ಪನೆಯು ಸ್ಪಷ್ಟವಾಗಿರುತ್ತದೆ. ಸಾರಾಸಾರ ವಿಚಾರಮಾಡಿ ಗುರಿಯನ್ನು ಸಾಧಿಸ ಬೇಕೆಂಬ ಇಚ್ಛೆಯಿಂದ ನಡೆಯಿಸಿದ ಕ್ರಿಯೆಗೆ **ಉದ್ದೇಶಪೂರಿತ ಕ್ರಿಯೆ** ಎಂದು ಅನ್ನುತ್ತಾರೆ. ಉದಾಹರಣಾರ್ಥವಾಗಿ—ಸ್ಪರ್ಧೆಯಲ್ಲಿ ಸಂಭಾವನೆಯನ್ನು ಪಡೆಯಬೇಕೆಂಬ ಇಚ್ಛೆಯಿಂದ ಮಗುವು ಬುದ್ಧಿಪೂರ್ವಕವಾಗಿ ನಡೆಯಿಸಿದ ಪರಿಶ್ರಮಗಳು 'ಉದ್ದೇಶಪೂರಿತ'ವಾದವುಗಳು. ಇವು ಮೇಲು ತರಗತಿಯ ಕ್ರಿಯೆಗಳು. ಆದರೆ ಗುರಿಯ ಕಲ್ಪನೆಯು ಅಸ್ಪಷ್ಟವಿದ್ದು ಅದರ ಕಡೆಗೆ ಸಾಗಿರುವ ಕ್ರಿಯೆಗೆ **ಉದ್ದೇಶಯುತ ಕ್ರಿಯೆ** ಎಂದು ಅನ್ನುತ್ತಾರೆ ಸಾಮಾನ್ಯವಾಗಿ ಒಂದೇ ತೆರನಾಗಿ ತೋರುವ ಪ್ರಾಣಿಗಳ ವರ್ತನಗಳು 'ಉದ್ದೇಶಯುತ'ವಾದವುಗಳು. ಇವು ಕಡಿಮೆ ತರಗತಿಯ ಕ್ರಿಯೆಗಳು.

ಸಾರಾಂಶವಿಷ್ಟೆ— (೧) ಕ್ರಿಮಿಕೀಟಕಗಳಲ್ಲಿ (ಪತಂಗ, ನೊಣ, ಕಡಜಿಗ, ಇರುವೆ ಇತ್ಯಾದಿ) ಪ್ರತಿಯೊಂದು ಪ್ರವೃತ್ತಿಗೆ ವಿಶಿಷ್ಟವಾದ ಪ್ರಜ್ಞಾಶಕ್ತಿಗಳು ಮತ್ತು ಕ್ರಿಯಾಶಕ್ತಿಗಳು ಸಂಬಂಧಿಸಿವೆ. ವಿಶಿಷ್ಟವಾದ ಸನ್ನಿವೇಶಗಳಲ್ಲಿ ವಿಶಿಷ್ಟ ರೀತಿಯಿಂದ ಹುಳಗಳು ವರ್ತಿಸುತ್ತವೆ. ಇಂತಹ ವರ್ತನದ ಮೂಲಾಧಾರವು (ಪ್ರವೃತ್ತಿಯು ಮತ್ತು ಅದರ ಸಂಯೋಜಿತ ಶಕ್ತಿಗಳು) ಜೀವಿಯ ರಚನೆಯ ಒಂದು ಕಾರ್ಯಘಟಕವಾಗಿರುತ್ತದೆ. ಇದಕ್ಕೆ ನಿಜವಾದ **ಪ್ರಾಕೃತಿಕ ಗುಣ** (Instinct) ಎಂದು ಕರೆಯ ಬಹುದು. (ಉದಾ: ಒಂದೇ ತೆರನಾಗಿ ಬೇಟೆಯಾಡುವುದು, ತತ್ತಿಯನ್ನಿಡುವುದು, ಅಥವಾ ಬೀಡು ಕಟ್ಟುವುದು). (೨) ಪಕ್ಷಿಗಳಲ್ಲಿರುವ ಪ್ರತಿಯೊಂದು ಪ್ರವೃತ್ತಿಯು ಅನೇಕ ಶಕ್ತಿಗಳಲ್ಲಿ ವ್ಯಕ್ತವಾಗಬಹುದು; ಮತ್ತು ಕೆಲವು ಶಕ್ತಿಗಳು ಮಾತ್ರ ವಿವಿಧ ಪ್ರವೃತ್ತಿಗಳ ಸೇವೆಯಲ್ಲಿ ಉಪಯೋಗಿಸಲ್ಪಡ

ಬಹುದು. (೩) ಆದರೆ ಸಸ್ತನ ಪ್ರಾಣಿಗಳಲ್ಲಿಯ ಪ್ರವೃತ್ತಿಗಳಿಗೂ ಶಕ್ತಿಗಳಿಗೂ ವಿಶಿಷ್ಟ ಜೋಡಣೆಯಿರುವುದಿಲ್ಲ. ಮನುಷ್ಯನಲ್ಲಂತೂ ಈ ಸಂಯೋಜನೆಯ ಸ್ವಾತಂತ್ರ್ಯವು ಹೆಚ್ಚು ಪ್ರಮಾಣದಲ್ಲಿರುತ್ತದೆ. ಉಚ್ಚ ಪ್ರಾಣಿಗಳಲ್ಲಿಯ ಪ್ರವೃತ್ತಿಗಳನ್ನು ಅವು ಅನುಸರಿಸುವ ಗುರಿಯ ಲಕ್ಷಣಗಳ ಆಧಾರದಿಂದ ಕಂಡುಹಿಡಿಯಬಹುದು. ಮನುಷ್ಯನಲ್ಲಿಯ ಪ್ರಜ್ಞಾಶಕ್ತಿಗಳೂ ಕಾರ್ಯಶಕ್ತಿಗಳೂ ವಿಪುಲವಾಗಿವೆ. ಅವು ಯಾವುದಾದರೊಂದು ಪ್ರವೃತ್ತಿಯ ಸೇವೆಯಲ್ಲಿ ನಿರತವಾಗಿರುವವು. ಆದಕಾರಣ ಈ ಶಕ್ತಿಗಳ ಸಂಖ್ಯೆಯನ್ನೂ ಲಕ್ಷಣಗಳನ್ನೂ ಮತ್ತು ಇತರ ಕ್ಷುದ್ರ ಪ್ರಾಣಿಗಳಂತೆ ಮಾನವನಲ್ಲಿಯೂ ಸಹ ಪ್ರಾಕೃತಿಕ ಗುಣಗಳುಂಟು ಎಂಬುದನ್ನೂ ಹೇಳುವುದು ಅಸಾಧ್ಯವಾದುದು. ಒಂದೇ ರೀತಿಯಲ್ಲಿ ಚಲಿಸುವುದು ಪ್ರಾಕೃತಿಕ ಗುಣದ ಲಕ್ಷಣವೆಂದು ವಾದಿಸುವ ಅನೇಕ ಮನಶ್ಶಾಸ್ತ್ರಜ್ಞರು ಮನುಷ್ಯಜಾತಿಯಲ್ಲಿ ಪ್ರಾಕೃತಿಕ ಗುಣಗಳೇ ಇಲ್ಲವೆಂದು ವಾದಿಸುತ್ತಾರೆ. ಆದರೆ ಒಂದೊಂದು ಪ್ರಾಣಿಜಾತಿಗೆ ಸಾಮಾನ್ಯವೆನಿಸಿದ ಗುರಿಯ ಕಡೆಗೆ ಹರಿಯುವ ಪ್ರವೃತ್ತಿಗಳು ನೈಸರ್ಗಿಕ ಗುಣದ ಮುಖ್ಯ ಲಕ್ಷಣವೆಂದು ತಿಳಿಯುವವರು ಮನುಷ್ಯಜೀವನವು ಪ್ರಾಣಿಗಳ ಜೀವನದಷ್ಟೇ ಪ್ರಾಕೃತಿಕ ಗುಣಗಳಲ್ಲಿ ಬೇರೂರಿರುವುದೆಂದು ಪ್ರತಿಪಾದಿಸುತ್ತಾರೆ. ಈ ತತ್ತ್ವವನ್ನು* ಎಷ್ಟೋ ವರ್ಷಗಳ ಪೂರ್ವದಲ್ಲಿಯೇ ನಮ್ಮ ದೇಶದ ಜ್ಞಾನಿಗಳು ಕಂಡುಹಿಡಿದಿದ್ದರು— ಇಂಥವರ ವರ್ಗಕ್ಕೆ ತಾನೂ ಸೇರಿದವನೆಂದು ಮ್ಯಾಕ್‌ಡೂಗಲ್ಲನು ಹೇಳುತ್ತಾನೆ. ಕ್ಷುದ್ರ ಪ್ರಾಣಿಗಳ ಹುಟ್ಟುಗುಣಗಳನ್ನು ಕುರಿತು ಮಾತಾಡುವಾಗ **ಪ್ರಾಕೃತಿಕ ಗುಣ** (Instinct) ಪದವನ್ನೂ ಮನುಷ್ಯನ ಹುಟ್ಟುಗುಣಗಳನ್ನು ಕುರಿತು ವಿಚಾರಿಸುವಾಗ **ಪ್ರವೃತ್ತಿ** (Propensity) ಪದವನ್ನೂ ಉಪಯೋಗಿಸುವುದು ಒಳಿತೆಂದು ಇತ್ತೀಚೆಗೆ ಪ್ರಕಟಿಸಿದ "ಮನುಷ್ಯರ ಚೈತನ್ಯಗಳು" (*The Energies of Msn*) ಎಂಬ ಪುಸ್ತಕದಲ್ಲಿ ಅವನು ಉಲ್ಲೇಖಿಸಿದ್ದಾನೆ.

---

* आहारनिद्राभयमैथुनं च सामान्यमेतत्पशुभिर्नराणाम् ।
धर्मो हि तेषामधिको विशेषो धर्मेण हीनाः पशुभिः समानाः ॥

**ಮನುಷ್ಯನಲ್ಲಿಯ ಪ್ರವೃತ್ತಿಗಳೂ ಸಾಮರ್ಥ್ಯಗಳೂ.**—ಸಂಸ್ಕಾರ ಮತ್ತು ಚೇತನಗಳು ಮನಸ್ಸಿನ ಮೂಲ ಗುಣಧರ್ಮಗಳೆಂದು ಹಿಂದೆಯೆ ಹೇಳಿದ್ದೇವೆ. ಮನುಷ್ಯನಲ್ಲಿಯ ಚೇತನವು ವಿಶಿಷ್ಟ ರೂಪಗಳನ್ನು ತಾಳುತ್ತದೆ. ಸಂಸ್ಕಾರದಲ್ಲಿ ಬೇರೂರಿದ ಚೇತನವೃಕ್ಷವು ಶಾಖೋಪಶಾಖೆಗಳಾಗಿ ಬೆಳೆಯುತ್ತದೆ. ಆದರ ಶಾಖೆಗಳೇ ಪ್ರವೃತ್ತಿಗಳು. ಮನುಷ್ಯ ಮತ್ತು ಪ್ರಾಣಿ ವರ್ತನಗಳ ತುಲನಾತ್ಮಕ ನಿರೀಕ್ಷಣದಿಂದ ಮ್ಯಾಕ್‌ಡೂಗಲ್ಲನು ಕೆಳಗಿನ ಮಾರ್ಗದರ್ಶಕ ತತ್ತ್ವವನ್ನು ಕಂಡುಹಿಡಿದಿರುವನು: 'ಕೆಲವು ಪ್ರವೃತ್ತಿಗಳು ಮನುಷ್ಯನಲ್ಲಿಯೂ ಎಲ್ಲ ಉಚ್ಚ ಪ್ರಾಣಿಗಳಲ್ಲಿಯೂ ಸಾಮಾನ್ಯವಾಗಿರುತ್ತವೆ. ಆದರೆ ಕೆಲವು ವಿಶಿಷ್ಟ ಪ್ರವೃತ್ತಿಗಳು ಮನುಷ್ಯನಲ್ಲಿ ಮಾತ್ರ ಕಂಡುಬರುತ್ತವೆ. ಇತರ ಪ್ರಾಣಿಗಳಲ್ಲಿ ಅವು ನಿಶ್ಚಿತವಾಗಿ ಒಡೆದುಕಾಣುವುದಿಲ್ಲ.' ಮೂವತ್ತು ವರ್ಷದ ಪ್ರತ್ಯಕ್ಷ ಅನುಭವದಿಂದ ಈ ಸಿದ್ಧಾಂತಕ್ಕೆ ಮುಟ್ಟಿರುವನೆಂದು ಆತನು ಹೇಳುತ್ತಾನೆ.

ಮ್ಯಾಕ್‌ಡೂಗಲ್ಲನ ಮತದ ಪ್ರಕಾರ ಮಾನವಜಾತಿಯಲ್ಲಿ ಕಂಡುಬರುವ ಪ್ರವೃತ್ತಿಗಳು.—

(೧) **ಆಹಾರ-ಶೋಧನ ಪ್ರವೃತ್ತಿ.**— ಆಹಾರವನ್ನು ಹುಡುಕುವುದು. (ಮತ್ತು ಒಮ್ಮೊಮ್ಮೆ ಅದನ್ನು ಕೂಡುಹಾಕುವುದು.)

(೨) **ಜುಗುಪ್ಸಾ ಪ್ರವೃತ್ತಿ.**—ಕೆಲವು ಅಪಾಯಕಾರಕ ಪದಾರ್ಥಗಳನ್ನು ನಿರಾಕರಿಸುವುದು ಮತ್ತು ತೊರೆಯುವುದು.

(೩) **ಕಾಮ ಪ್ರವೃತ್ತಿ.**— ಪ್ರಣಯ ತೋರುವುದು ಮತ್ತು ಆಲಿಂಗಿಸುವುದು.

(೪) **ಭಯ ಪ್ರವೃತ್ತಿ.**— ಹಾನಿಯನ್ನು ಅಥವಾ ನೋವನ್ನು ಉಂಟುಮಾಡುವ ಅನುಭವದಿಂದ ತನ್ನ ರಕ್ಷಣೆ ಮಾಡಿಕೊಳ್ಳಲು ಓಡಿಹೋಗುವುದು.

(೫) **ಕುತೂಹಲ ಪ್ರವೃತ್ತಿ.**— ಆಶ್ಚರ್ಯಕಾರಕ ವಸ್ತುಗಳನ್ನು ಮತ್ತು ಪ್ರದೇಶಗಳನ್ನು ಪರೀಕ್ಷಿಸುವುದು ಅಥವಾ ಶೋಧಿಸುವುದು.

(೬) **ಪಾಲನ ಪ್ರವೃತ್ತಿ.**— ಮರಿಗಳನ್ನು ಪೋಷಿಸುವುದು, ರಕ್ಷಿಸುವುದು ಮತ್ತು ಅವುಗಳಿಗೆ ಆಶ್ರಯಕೊಡುವುದು.

(೭) **ಸಂಘ ಪ್ರವೃತ್ತಿ.**— ಗೆಳೆಯರ ಸಂಘದಲ್ಲಿ ವಾಸಿಸುವುದು ಮತ್ತು ಏಕಾಕಿಯಾಗಿದ್ದಾಗ ಆ ಸಂಘವನ್ನು ಹುಡುಕುವುದು.

(೮) **ಆತ್ಮಪ್ರತಿಷ್ಠಾ ಪ್ರವೃತ್ತಿ.**— ಸಂಗಡಿಗರ ಮೇಲೆ ದರ್ಪ ನಡೆಯಿಸುವುದು, ಅವರ ನಾಯಕನಾಗುವುದು, ಅವರ ಮುಂದೆ ಮೆರೆಯುವುದು ಅಥವಾ ತನ್ನದನ್ನೇ ಸಾಧಿಸುವುದು.

(೯) **ವಿಧೇಯ ಪ್ರವೃತ್ತಿ.**— ಹೆಚ್ಚಿನ ಶಕ್ತಿಗಳನ್ನು ತೋರಿಸುವವರ ಎದುರಿನಲ್ಲಿ ಆಧೀನನಾಗಿ ವರ್ತಿಸುವುದು ಗೌರವ ತೋರಿಸುವುದು, ಅವರ ಆಜ್ಞೆಪಾಲಿಸುವುದು ಅಥವಾ ಅವರ ಅನುಯಾಯಿಯಾಗುವುದು.

(೧೦) **ಕ್ರೋಧ ಪ್ರವೃತ್ತಿ.**— ಯಾವುದಾದರೊಂದು ಬೇರೆ ಪ್ರವೃತ್ತಿಯ ಸಾಧನೆಗೆ ಅಡ್ಡಬಂದ ವಿಘ್ನ ಅಥವಾ ಪ್ರತೀಕಾರಕ್ಕೆ ಮುನಿಯುವುದು ಮತ್ತು ಅದನ್ನು ನಾಶಮಾಡುವುದು.

(೧೧) **ಪ್ರಾರ್ಥನಾ ಪ್ರವೃತ್ತಿ.**—ನಮ್ಮ ಪ್ರಯತ್ನಗಳು ಸಂಪೂರ್ಣವಾಗಿ ವ್ಯರ್ಥವಾದಲ್ಲಿ ಸಹಾಯಕ್ಕಾಗಿ ಮೊರೆಯಿಡುವುದು ಅಥವಾ ರೋದಿಸುವುದು.

(೧೨) **ರಚನಾ ಪ್ರವೃತ್ತಿ.**—ಆಶ್ರಯಗಳನ್ನು ಮತ್ತು ಉಪಕರಣಗಳನ್ನು ರಚಿಸುವುದು.

(೧೩) **ಸಂಗ್ರಹ ಪ್ರವೃತ್ತಿ.**— ಉಪಯೋಗವಾದುದನ್ನು ಅಥವಾ ಚಿತ್ತಕ್ಕೆ ಆಕರ್ಷಕವಾದುದನ್ನು ಸಂಪಾದಿಸುವುದು, ವಶಪಡಿಸಿಕೊಳ್ಳುವುದು ಮತ್ತು ರಕ್ಷಿಸುವುದು.

(೧೪) **ಹಾಸ್ಯ ಪ್ರವೃತ್ತಿ**—ಒಡನಾಡಿಗಳ ಕುಂದುಕೊರತೆಗಳನ್ನು ಮತ್ತು ಅಪಜಯಗಳನ್ನು ಕಂಡು ನಗುವುದು.

(೧೫) **ಶಮಾ ಪ್ರವೃತ್ತಿ.**—ಸ್ಥಲಾಂತರದಿಂದ ಮತ್ತು ಚಲನೆಯಿಂದ ಅಥವಾ ತುರಿಸಿಕೊಂಡು ವ್ಯಥೆಯನ್ನುಂಟುಮಾಡುವ ವಸ್ತುವನ್ನು ತಪ್ಪಿಸುವುದು; ಅಥವಾ ಅದರಿಂದ ದೂರಾಗುವುದು.

(೧೬) **ವಿರಾಮ ಅಥವಾ ನಿದ್ರಾ ಪ್ರವೃತ್ತಿ.**— ಶ್ರಮವಾದಾಗ ನೆಲದ ಮೇಲಾಗಲಿ ಚಾಪೆಯ ಮೇಲಾಗಲಿ ಅಡ್ಡಾಗುವುದು ಮತ್ತು ನಿದ್ರೆ ಮಾಡುವುದು.

(೧೭) **ಸಂಚಾರ ಪ್ರವೃತ್ತಿ.**—ಹೊಸ ಕ್ಷೇತ್ರಗಳಿಗೆ ಹೋಗುವುದು.

(೧೮) **ಶಾರೀರಿಕ ಬೇಡಿಕೆಗಳನ್ನು ಪೂರೈಸುವ ಪ್ರವೃತ್ತಿಗಳು.**— ಕೆಮ್ಮುವುದು, ಸೀನುವುದು, ಉಸಿರಾಡಿಸುವುದು, ಭೇದಿಯಾಗುವುದು.

ಮೇಲೆ ಕೊಟ್ಟಿರುವ ಪ್ರವೃತ್ತಿಗಳ ಪಟ್ಟಿಯು ಅತ್ಯಂತ ಪರಿಶುದ್ಧವೆಂದೂ ಪರಿಪೂರ್ಣವೆಂದೂ ಹೇಳಲಿಕ್ಕಾಗುವುದಿಲ್ಲ. ಆದರೂ ನಮ್ಮ ಎಲ್ಲ ಚಟುವಟಿಕೆಗಳಿಗೂ ಈ ಸಹಜಪ್ರವೃತ್ತಿಗಳೇ ತಳಹದಿಯಾಗಿರುತ್ತವೆಯೆಂದು ಹೇಳಲು ಅಡ್ಡಿಯಿಲ್ಲ. ಪ್ರವೃತ್ತಿಗಳ ಸಂಖ್ಯೆಯ ಬಗ್ಗೆ ಮನೋವೈಜ್ಞಾನಿಕರಲ್ಲಿ ಒಮ್ಮತವಿಲ್ಲ ವಿಶಿಷ್ಟ ಸನ್ನಿವೇಶದಲ್ಲಿ ವಿಶಿಷ್ಟ ರೀತಿಯಿಂದ ವರ್ತಿಸುವುದನ್ನು ನಿರ್ಧರಿಸುವ ಸ್ವಾಭಾವಿಕ ಒಲವೇ ಪ್ರವೃತ್ತಿಯು. ಪ್ರವೃತ್ತಿಯ ಈ ಲಕ್ಷಣದ ಮೇಲಿಂದ ಮನುಷ್ಯನಲ್ಲಿ ಒಡೆದು ಕಾಣುವ ಹದಿನೆಂಟು ವಿಶಿಷ್ಟ ಒಲವುಗಳು ಉಂಟೆಂದು ಮ್ಯಾಕ್‌ಡೂಗಲ್ಲ್‌ನು ಇತ್ತೀಚಿಗೆ ಪ್ರತಿಪಾದಿಸುತ್ತಿದ್ದಾನೆ

ಕೆಳಗೆ ನಿರೂಪಿಸಿದ ಪ್ರಕಾರ ಕೆಲವರು ಪ್ರವೃತ್ತಿಗಳಲ್ಲಿ ಸಾಮಾನ್ಯವಾಗಿ ಮೂರು ಗುಂಪುಗಳನ್ನು ಮಾಡುತ್ತಾರೆ:

(೧) **ಆತ್ಮರಕ್ಷಣೆಗೆ ಸಂಬಂಧಪಟ್ಟವು.**— ಆಹಾರಶೋಧನೆ, ಕುತೂಹಲ, ಯುದ್ಧ, ಭಯ, ಜುಗುಪ್ಸಾ, ರಚನಾ, ಸಂಗ್ರಹ ಮತ್ತು ಶಮಾ ಪ್ರವೃತ್ತಿಗಳು.

(೨) **ವಂಶರಕ್ಷಣೆಗೆ ಸಂಬಂಧಪಟ್ಟವು.**—ಕಾಮ ಮತ್ತು ಪಾಲನ ಪ್ರವೃತ್ತಿಗಳು.

(೩) **ಸಮಾಜಕ್ಕೆ ಸಂಬಂಧಪಟ್ಟವು.**— ಸಂಘ, ಆತ್ಮಪ್ರತಿಷ್ಠಾ, ವಿಧೇಯ, ಪ್ರಾರ್ಥನಾ ಮತ್ತು ಹಾಸ್ಯ ಪ್ರವೃತ್ತಿಗಳು.

ಮೇಲಿನ ಮೂರು ಗುಂಪುಗಳು ಒಂದಕ್ಕೊಂದು ಸಂಬಂಧವಿಲ್ಲದೆ ಪ್ರತ್ಯೇಕವಾಗಿರುವುವೆಂದು ತಿಳಿಯಕೂಡದು. ಅದೇ ಪ್ರವೃತ್ತಿಯು ವ್ಯಕ್ತಿಯ ಅಥವಾ ವಂಶದ ಅಥವಾ ಸಮಾಜದ ಸೇವೆಯಲ್ಲಿ ಪ್ರಕಟವಾಗಬಹುದು. ಉದಾ—ರಚನಾ ಪ್ರವೃತ್ತಿಯು ವಂಶದ ಅಥವಾ ಸಮಾಜದ ಹಿತಕ್ಕಾಗಿಯೂ ವ್ಯವಹರಿಸಬಹುದು. ಪಾಲನ ಪ್ರವೃತ್ತಿಯು ಆತ್ಮರಕ್ಷಣೆಯಲ್ಲಿಯೂ ಸಮಾಜದ ಹಿತದಲ್ಲಿಯೂ ವ್ಯವಹರಿಸಬಹುದು.

**ಸಹಜ ಶಕ್ತಿಗಳು** (The Innate Abilities).— ಮನುಷ್ಯನಲ್ಲಿಯ ಶಕ್ತಿಗಳ ಅಥವಾ ಸಾಮರ್ಥ್ಯಗಳ ಸಂಖ್ಯೆಯನ್ನು ಗೊತ್ತುಪಡಿಸುವುದು ಅತ್ಯಂತ ಕಠಿನವಾದ ಕೆಲಸವು; ಅಸಾಧ್ಯವೆಂದರೂ ಸಲ್ಲುವುದು. ಮನುಷ್ಯನಲ್ಲಿಯ ಪ್ರವೃತ್ತಿ ಮತ್ತು ಶಕ್ತಿಗಳ ಸಂಬಂಧವು ಅಸ್ಥಿರವಾಗಿದೆ. ಮೇಲಾಗಿ ಅವನ ಬುದ್ಧಿಯು ವಿಕಾಸವಾದ ಹಾಗೆಲ್ಲ ಹೊಸ ಹೊಸ ಶಕ್ತಿಗಳೂ ಉದ್ಭವಿಸುತ್ತವೆ. ಆದರೂ ಸ್ಥೂಲವಾಗಿ ಶಕ್ತಿಗಳಲ್ಲಿ ಎರಡು ಭಾಗಗಳನ್ನು ಮಾಡಬಹುದು—*(೧) ಕ್ರಿಯಾ ಅಥವಾ ಕರ್ಮ ಶಕ್ತಿಗಳು; (೨) ಪ್ರಜ್ಞಾ ಅಥವಾ ಚಿಚ್ಛಕ್ತಿಗಳು. ಸಂಚರಿಸುವುದು, ಎದ್ದು ನಿಲ್ಲುವುದು, ಆಡ್ಯಾಡುವುದು, ಓಡಾಡುವುದು, ಕೈಯಿಂದ ಕೆಲಸಮಾಡುವುದು, ಹಿಡಿಯುವುದು, ಒಯ್ಯುವುದು ಮೊದಲಾದವುಗಳು ಮುಖ್ಯ ಕ್ರಿಯಾಶಕ್ತಿಗಳು. ಇಂದ್ರಿಯಗಳ ಜ್ಞಾನಕ್ಕೆ ಸಂಬಂಧಪಟ್ಟ ಶಕ್ತಿಗಳು ಪ್ರಜ್ಞಾಶಕ್ತಿಗಳು. ಪ್ರಜ್ಞಾಶಕ್ತಿಗಳಲ್ಲಿ ಮೂರು ಸಣ್ಣ ಗುಂಪುಗಳನ್ನು ಮಾಡಬಹುದು—(೧) ಶ್ರೋತ್ರ, (೨) ತ್ವಚ, (೩) ನೇತ್ರ, ಇವುಗಳಿಗೆ ಸಂಬಂಧಪಟ್ಟ ಶಕ್ತಿಗಳು.

ಶಕ್ತಿಗಳು ಹುಟ್ಟುತಲೆ ಬಂದವೆಂಬುದು ಜಟ್ಟಿಗಳ ಉದಾಹರಣೆಯಿಂದ ತಿಳಿದುಬರುತ್ತದೆ. ಒಬ್ಬ ಮನುಷ್ಯನು ಮೇಲ್ತರಗತಿಯ ಟೇನಿಸ್ ಅಥವಾ

* ಹಿಂದು ತತ್ವಜ್ಞಾನಿಗಳು ‘ ಜ್ಞಾನೇಂದ್ರಿಯ ’ ಮತ್ತು ‘ ಕರ್ಮೇಂದ್ರಿಯ ’ ಎಂದು ಎರಡು ವಿಭಾಗಗಳನ್ನು ಮಾಡುತ್ತಾರೆ. ಈ ವಿಭಾಗಗಳಿಗೂ ಮ್ಯಾಕ್‌ಡೂಗಲ್ಲನು ಸಹಜಶಕ್ತಿಗಳಲ್ಲಿ ‘ಕ್ರಿಯಾಶಕ್ತಿಗಳು’ ಮತ್ತು ‘ ಪ್ರಜ್ಞಾಶಕ್ತಿಗಳು ’ ಎಂದು ಮಾಡುವ ವಿಭಾಗಗಳಿಗೂ ಹೆಚ್ಚು ಹೋಲಿಕೆಯದೆ.

ಗೋಲ್ಫ್ ಆಡುವವನಾಗಬೇಕಾದರೆ ಅವನು ಸ್ವಭಾವತಃ ಕೆಲಮಟ್ಟಿಗೆ ಚಾಪಲ್ಯವುಳ್ಳವನಾಗಿರಬೇಕು ಒಂದು ಮಂಗಕ್ಕೆ ಎಷ್ಟೋ ಶಿಕ್ಷಣವನ್ನು ಕೊಟ್ಟರೂ ಅದು ಉಚ್ಚತರದ ಆಟವನ್ನು ಆಡಲಾರದು. ಅದರಂತೆಯೆ ಒಬ್ಬ ಸಾಮಾನ್ಯ ಮನುಷ್ಯನು ಬೇರೆ ವಿಷಯದಲ್ಲಿ ಶ್ರೇಷ್ಠನಿದ್ದರೂ ಎಷ್ಟೇ ಪ್ರಯತ್ನಪಟ್ಟರೂ ಎಷ್ಟೇ ಶಿಕ್ಷಣವನ್ನು ಹೊಂದಿದರೂ ಮೇಲ್ತರ-ಗತಿಯ ಆಟಗಾರನಾಗಲಾರನು. ಉದ್ದಾಮ ಜಟ್ಟಿಯು ಹುಟ್ಟುವಾಗಲೆ ಸಂಚಲನ ಮತ್ತು ಹಸ್ತಕೌಶಲ್ಯದ ಶಕ್ತಿಗಳನ್ನು ಪಡೆದಿರುತ್ತಾನೆ. ದೇಹ-ಶಕ್ತಿಗಳ ವಿಷಯವೇ ಹೀಗಿರುವಾಗ ಮನುಷ್ಯನಲ್ಲಿಯ ಶ್ರೇಷ್ಠತಮ ಮಹಾಕಾರ್ಯಗಳಿಗೆ ಅವನ ಹುಟ್ಟುಗುಣವೇ ಮೂಲಕಾರಣವೆಂಬುದು ಆಶ್ಚರ್ಯದ ಮಾತಲ್ಲ

ಮನುಷ್ಯೇತರ ಎಲ್ಲ ಪ್ರಾಣಿಗಳ ಸಾಮರ್ಥ್ಯಗಳು ಇಂದ್ರಿಯ ಕ್ಷೇತ್ರದಲ್ಲಿಯೆ ಉಳಿಯುವಂತೆ ತೋರುತ್ತವೆ. ಎಂದರೆ ಇಂದ್ರಿಯಗಳು ಪ್ರಚೋದನೆಗೊಂಡಾಗ ಮಾತ್ರ ಪ್ರಾಣಿಗಳ ವಿವಿಧ ಶಕ್ತಿಗಳು ಕಾರ್ಯ ನಡಿಸುತ್ತವೆ. ಆದರೆ ಮನುಷ್ಯನಲ್ಲಿ ಇಂದ್ರಿಯ ಪ್ರೇರಣೆಯಿಲ್ಲದಲೆ ನಡೆಯುವ ಕೆಲವು ಸಾಮರ್ಥ್ಯಗಳಿಂದ ಅವನು ಶ್ರೇಷ್ಠನೆನಿಸುತ್ತಾನೆ. ಮನುಷ್ಯನಲ್ಲಿ ವಿಚಾರ, ಕಲ್ಪನೆ, ತುಲನೆ, ನಿರ್ಣಯ ಮತ್ತು ತರ್ಕ ಎಂಬ ಶಕ್ತಿಗಳು ಅಥವಾ ಸಾಮರ್ಥ್ಯಗಳು (Abilities) ಉಂಟು. ಆದರೆ **ಇವು** ಸ್ವತಂತ್ರ 'ಶಕ್ತಿಗಳು' (Faculties) ಎಂದು ಹೇಳಿದರೆ ಮನಸ್ಸಿನ ನಿಜಸ್ವರೂಪದ ಬಗ್ಗೆ ಇರುವ ನಮ್ಮ ಅಜ್ಞಾನವನ್ನು ವ್ಯಕ್ತಗೊಳಿಸಿ ದಂತಾಗುವುದು.

೨೭

# ಪ್ರವೃತ್ತಿಗಳು ಮತ್ತು ಶಿಕ್ಷಣವು

ಶಿಕ್ಷಣ ಸಮಸ್ಯೆಗಳಿಗೆ ಪ್ರವೃತ್ತಿಗಳೇ ಮೂಲ ಆಧಾರಗಳಾದ್ದರಿಂದ ಶಿಕ್ಷಕನಿಗೆ ಪ್ರವೃತ್ತಿಗಳ ಆಳವಾದ ಜ್ಞಾನವು ಅತ್ಯಂತ ಆವಶ್ಯಕವು. ಆದುದರಿಂದ ಈ ಪ್ರಕರಣದಲ್ಲಿ ಕೆಲವು ಮುಖ್ಯ ಪ್ರವೃತ್ತಿಗಳ ಲಕ್ಷಣಗಳನ್ನೂ ಶಿಕ್ಷಣ ವ್ಯವಸಾಯದಲ್ಲಿ ಅವುಗಳ ಉಪಯೋಗವನ್ನೂ ಕುರಿತು ವಿಚಾರಿಸುವ.

(೧) **ಹೇಯ ಪ್ರವೃತ್ತಿ.**— ನಮ್ಮ ಬಾಯಲ್ಲಿ ಹೊಲಸು ಪದಾರ್ಥವು ಬಂದರೆ ನಾವು ಜುಗುಪ್ಸೆಪಟ್ಟು ಉಗುಳುತ್ತೇವೆ.

ಈ ಪ್ರವೃತ್ತಿಯ ಮೂಲಕ ನಾವು ಬಾಲಕರಲ್ಲಿ ನೈತಿಕ ಬಲವನ್ನು ಹೆಚ್ಚಿಸಬಹುದು. "ಕಳಬೇಡ, ಕೊಲಬೇಕ, ಹುಸಿಯ ನುಡಿಯಲು ಬೇಡ" ಎಂದು ಧಾರ್ಮಿಕ ಪುರುಷರು ಉಪದೇಶಿಸುವಲ್ಲಿ ಕೆಟ್ಟ ನಡತೆಗಳಿಗೆ ಮನುಷ್ಯನು ಜುಗುಪ್ಸೆಪಡಬೇಕೆಂಬುದೇ ಅವರ ಉದ್ದೇಶವಿರುತ್ತದೆ.

(೨) **ಭಯ ಪ್ರವೃತ್ತಿ.**— ಅಪಾಯಕಾರಕ ವಸ್ತುವು ಭಯವನ್ನು ಉಂಟುಮಾಡುತ್ತದೆ. ಆಕಸ್ಮಿಕವಾಗಿ ಆದ ದೊಡ್ಡ ಸಪ್ಪಳ, ಒಂದು ಪ್ರಾಣಿಯ ಭಯಸೂಚಕ ಧ್ವನಿ, ವಿಲಕ್ಷಣ ವಸ್ತು, ನಿರ್ಜನ ಪ್ರದೇಶ, ಕತ್ತಲೆ, ಹಾವು ಇತ್ಯಾದಿಗಳು ಭಯವನ್ನುಂಟುಮಾಡುತ್ತವೆ. ಇಲ್ಲಿ ಬಾಹ್ಯ ಪ್ರತಿಕ್ರಿಯೆಯು ಅಂಜಿಕೆಯಿಂದ ಓಡಿ ಹೋಗುವುದೂ ಅಡಗಿಕೊಳ್ಳುವುದೂ ಆತ್ಮರಕ್ಷಣೆಗಾಗಿ ಆಶ್ರಯವನ್ನು ಹುಡುಕುವುದೂ ಆಗಿರುತ್ತದೆ.

ಬಾಲಕರು ನಿಷ್ಕಾರಣವಾಗಿ ಭಯಪಡುವುದು ಒಳಿತಲ್ಲ. ಶಿಕ್ಷಕರಾಗಲಿ ಪಾಲಕರಾಗಲಿ ಈ ಪ್ರವೃತ್ತಿಯನ್ನು ಪ್ರೇರಿಸುವಾಗ ಬಹಳ ಜಾಗರೂಕರಾಗಿ ರತಕ್ಕದ್ದು. ಮಗುವು ಹೆದರಿದರೆ ಅವನಲ್ಲಿ ಉದ್ಭವಿಸಬಹುದಾದ ವಿಚಾರ ಗಳು ಮಾಯವಾಗುತ್ತವೆ. ಅವನು ತನ್ನ ನಿಜ ಸ್ವರೂಪವನ್ನು ಮರೆ

ಮಾಡುತ್ತಾನೆ. ಸಾಲೆಯಲ್ಲಿಯೂ ಮನೆಯಲ್ಲಿಯೂ ಪ್ರೇಮಮಯವಾದ ವಾತಾವರಣವು ಇರಬೇಕು. ದೇಹದಂಡನೆಯ ಭಯಕ್ಕಿಂತಲೂ ಮಾನ ಹಾನಿಯ ಭಯವು ಹೆಚ್ಚು ಒಳ್ಳೆಯದು. ಬಾಲಕರಲ್ಲಿ ಸಮಾಜದ ಭಯ ವನ್ನೂ ದೇವರ ಭಯವನ್ನೂ ಉಂಟುಮಾಡುವುದು ಶ್ರೇಯಸ್ಕರವು.

(೩) **ಕುತೂಹಲ ಪ್ರವೃತ.**— ಒಂದು ವಸ್ತುವಿನ ಬಗ್ಗೆ ಸಾಕಷ್ಟು ಜ್ಞಾನವಾಗದೇ ಇದ್ದಲ್ಲಿ ಕುತೂಹಲವು ಜಾಗ್ರತವಾಗುತ್ತದೆ. ಆ ವಸ್ತುವಿನ ಪೂರ್ಣ ಜ್ಞಾನಮಾಡಿಕೊಳ್ಳುವ ಇಚ್ಛೆಯು ಹುಟ್ಟಿ ಅದರ ಸಮೀಪಕ್ಕೆ ಹೋಗುವುದು ಅಥವಾ ಅದನ್ನು ಪರೀಕ್ಷಿಸುವುದು ಕುತೂಹಲ ಪ್ರವೃತ್ತಿಯ ಬಾಹ್ಯ ಚಿಹ್ನವು ಇಲಿಯಂತಹ ಹರಿದಾಡುವ ವಸ್ತುವು ಕಣ್ಣಿಗೆ ಬಿದ್ದ ಕೂಡಲೆ ಬೆಕ್ಕು ಅದರ ಬಳಿಗೆ ಹೋಗಿ ಅದನ್ನು ಪರೀಕ್ಷಿಸುತ್ತದೆ.

ಮಕ್ಕಳು ಅಪರಿಚಿತ ವಸ್ತುವನ್ನು ಕಂಡು "ಇದು ಏನು? ಇದು ಹೇಗೆ?" ಮುಂತಾಗಿ ಪ್ರಶ್ನೆಮಾಡುವುದು ಎಲ್ಲರಿಗೂ ಗೊತ್ತಿದ್ದ ಮಾತೇ ಆಗಿದೆ ಒಂದು ದಿವಸ ಗ್ರಾಮೋಫೋನ ಕೇಳುತ್ತ ಕುಳಿತಾಗ ಹೊರ ಗಿದ್ದ ನನ್ನ ಚಿಕ್ಕ ಮಗುವು ನಾನು ಇದ್ದಲ್ಲಿಗೆ ಬಂದು ಆಶ್ಚರ್ಯದಿಂದ ಅತ್ತಿತ್ತ ನೋಡಹತ್ತಿದನು. ತುಸು ಹೊತ್ತು ನಿರೀಕ್ಷಿಸಿ "ಹಾಡುವವರು ಎಲ್ಲಿ ಇದ್ದಾರೆ?" ಎಂದು ಕೇಳಿದನು. "ಫೋನೊ ಹಾಡುತ್ತದೆ" ಎಂದು ನಾನು ಹೇಳಿದೆನು. ಆ ಮೇಲೆ ಆ ಮಗುವು ತುತೂರಿಯಲ್ಲಿ ಇಣಕಿ ನೋಡಿದನು, ಫೋನೊ ಪೆಟ್ಟಿಗೆಯನ್ನು ಎಲ್ಲ ಕಡೆಯಿಂದಲೂ ಪರೀಕ್ಷಿಸ ಹತ್ತಿದನು. ಅಷ್ಟಕ್ಕೆ ಸಮಾಧಾನವಡದೆ "ಹಾಡುವವನು ಪೆಟ್ಟಿಯೊಳಗೆ ಕೂತಿರುವನೇ?" ಎಂದು ಮತ್ತೆ ಪ್ರಶ್ನೆಮಾಡಿದನು. ಅದಕ್ಕೆ ನಾನು "ಪಾಟಿಯ ಮೇಲೆ ಪೆನ್ಸಿಲ್‌ನಿಂದ ಗೆರೆ ಎಳೆದರೆ ಸಪ್ಪಳವಾಗುವಂತೆ, ಪ್ಲೇಟಿನ ಮೇಲೆ ಮುಳ್ಳಿನಿಂದ ಗೆರೆ ಎಳೆದರೆ ಹಾಡಿನಂತೆ ಸಪ್ಪಳವಾಗುತ್ತದೆ" ಎಂದು ಹೇಳಿದೆನು. ಆಮೇಲೆ ಅವನಿಗೆ ತುಸುಮಟ್ಟಿಗಾದರೂ ಸಮಾಧಾನವಾಗಿರ ಬಹುದೆಂದು ತೋರುತ್ತದೆ. ಇಲ್ಲಿ ಮಗುವು ಕುತೂಹಲದಿಂದ ಪ್ರೇರಿತನಾಗಿ ದ್ದನು. ಜ್ಞಾನಕ್ಕೆ ಈ ಬಗೆಯ ಕುತೂಹಲವೇ ತಳಗಲ್ಲು; ಪ್ರಶ್ನೆಯೆ ಅದರ ಬಾಹ್ಯ ಪ್ರತಿಕ್ರಿಯೆ. ಬಗೆಬಗೆಯ ಶಾಸ್ತ್ರಗಳ ಅಭಿವೃದ್ಧಿಯಾಗಲಿಕ್ಕೆ ಮನು ಷ್ಯನಲ್ಲಿ ಸ್ವಾಭಾವಿಕವಾಗಿ ಇರುವ ಈ ಕುತೂಹಲವೇ ಕಾರಣವಾಗಿದೆ

ಮತ್ತು ಈ ಪ್ರವೃತ್ತಿಯೇ ಮುಂದೆ ಸಂಶೋಧನ ಶಕ್ತಿಯಾಗಿ ಪರಿಣಮಿಸುತ್ತದೆ. ಆದ್ದರಿಂದ ಮಕ್ಕಳನ್ನು ಗದರಿಸಿ ಅವರ ಪ್ರಶ್ನೆಗಳಿಗೆ ತಡೆ ಹಾಕುವುದು ಒಳ್ಳೆಯದಲ್ಲ. ಜ್ಞಾನಾಭಿವೃದ್ಧಿಗೆ ಪೋಷಕವಾದ ಅವರ ಹಂಬಲವನ್ನು ಕುಂಠಿತಗೊಳಿಸದೆ ಅವರ ಯೋಗ್ಯತೆಗೆ ಸರಿಯಾದ ಉತ್ತರಗಳನ್ನು ಕೊಟ್ಟು ಅವರ ಜಿಜ್ಞಾಸೆಯನ್ನು ತೃಪ್ತಿಪಡಿಸಬೇಕು.

(೪) **ಪಾಲನ ಪ್ರವೃತ್ತಿ.**— ಮಕ್ಕಳನ್ನು ಪ್ರೀತಿಸುವುದೂ ಜೋಪಾನ ಮಾಡುವುದೂ ತಾಯಿಗೆ ಸಹಜವಾದುದು. ಮಕ್ಕಳ ನೋಟ, ವಾಸನೆ, ಸಪ್ಪಳ, ಮತ್ತು ಮುಖ್ಯವಾಗಿ ಅವರ ಆರ್ತಧ್ವನಿ ಇವು ಅವಳ ವಾತ್ಸಲ್ಯವನ್ನು ಜಾಗ್ರತಗೊಳಿಸುತ್ತವೆ. ಆಗ ತಾಯಿಯು ತನ್ನ ಮಗುವನ್ನು ರಕ್ಷಿಸುವ ಅಥವಾ ಅದಕ್ಕೆ ಆಹಾರವನ್ನು ಕೊಡುವ ಕೆಲಸವನ್ನು ಮಾಡುತ್ತಾಳೆ. ಮನುಷ್ಯನಲ್ಲಿ ಈ ಪ್ರವೃತ್ತಿಯು ಅನೇಕ ರೂಪಗಳನ್ನು ತಾಳುತ್ತದೆ. ಪರರ ಅಸ್ವಸ್ಥತೆ ಅಥವಾ ಸಂಕಟವನ್ನು ನೋಡಿದಾಗ ಈ ಪ್ರವೃತ್ತಿಯು ಪ್ರಕಟವಾಗುತ್ತದೆ.

ಪಾಲನ ಪ್ರವೃತ್ತಿಯು ನೀತಿಯ ಉಗಮಸ್ಥಾನವು. ಮಗುವಿಗೆ ಜನದಟ್ಟಣೆಯಲ್ಲಿ ದಾರಿತೋರಿಸುವುದಾಗಲಿ, ಕೂಲಿಕಾರರನ್ನು ನಿರ್ದಯೆಯಿಂದ ನಡಿಸಿಕೊಳ್ಳುವದನ್ನು ಪ್ರತಿಬಂಧಿಸುವುದಕ್ಕೆ ಕಾಯಿದೆ ಮಾಡುವುದಾಗಲಿ ಪಾಲನಪ್ರವೃತ್ತಿಯೆ ಆಗಿರುತ್ತದೆ. ಪರೋಪಕಾರವು ಪಾಲನ ಪ್ರವೃತ್ತಿಯ ಇನ್ನೊಂದು ರೂಪವು. ಸಮಾಜಹಿತಕ್ಕೆ ಸಹಕಾರಿಯಾದ ಈ ಪ್ರವೃತ್ತಿಯನ್ನು ಮಕ್ಕಳಲ್ಲಿ ಅಭಿವೃದ್ಧಿಗೊಳಿಸಲು ಯತ್ನಿಸಬೇಕು. ಶಿಕ್ಷಕರು ವಿದ್ಯಾರ್ಥಿಗಳನ್ನು ಮಕ್ಕಳೋಪಾದಿಯಲ್ಲಿ ಕಾಣಬೇಕು.

(೫) **ಸಂಘ ಪ್ರವೃತ್ತಿ.**— ಸ್ವಜಾತೀಯರ ಸಹವಾಸ ಬಯಸುವುದನ್ನು ಪಶುಪಕ್ಷಿಗಳಲ್ಲಿ ಸಹ ನೋಡುತ್ತೇವೆ. ಏಕಾಕಿಯಾಗಿರುವುದು ಅವುಗಳಿಗೆ ಸೇರುವುದಿಲ್ಲ. ಇರುವೆಗಳು ಸಾಲು ಕಟ್ಟಿಕೊಂಡು ಹೋಗುವವು. " ಕಾಗೆ ಒಂದಗುಳ ಕಂಡರೆ, ಕರೆಯದೆ ತನ್ನ ಬಳಗವನೆಲ್ಲವನು ? ಕೋಳಿ ಒಂದು ಗುಟುಕವ ಕಂಡರೆ, ಕರೆಯದೆ ತನ್ನ ಕುಲವನೆಲ್ಲವನು ? ಜೇನುನೊಣಗಳು ಗುಂಪಾಗಿ ವಾಸಿಸುವುವು. ಜಿಂಕೆಗಳು, ಆನೆಗಳು

ಗುಂಪುಕಟ್ಟಿಕೊಂಡು ಅಲೆಯುವವು. ಇವೆಲ್ಲವೂ ಸಂಘಪ್ರವೃತ್ತಿಯ ದೃಷ್ಟಾಂತಗಳು. ಮನುಷ್ಯನು ಸಹ ಸಂಘಜೀವಿಯು. ಮನೆ–ಮಠ, ಊರು-ಸಮಾಜ, ಪ್ರಾಂತ–ದೇಶ ಮಾಡಿಕೊಂಡಿರುವುದಕ್ಕೆ ಈ ಪ್ರವೃತ್ತಿಯ ಪ್ರೇರಣೆಯೆ ಕಾರಣವು.

ಓರಗೆಯ ಗೆಳೆಯರ ಕೂಡ ಇರುವುದು ಮಕ್ಕಳಿಗೆ ಇಷ್ಟವಾದದ್ದು. ಸಂಘಜೀವನವು ಮಕ್ಕಳ ಸ್ವಭಾವವನ್ನು ತಿದ್ದಲು ತುಂಬಾ ಸಹಾಯ ವಾಗುವುದು "ಗುಂಪಿನಲ್ಲಿ ಸೇರಿ ಕಲಸಮಾಡುವುದರಿಂದ ಬೇಸರವೂ ಶ್ರಮವೂ ತೋರಿಬರುವುದಿಲ್ಲ. ಏಕಂದರೆ ಸ್ಪರ್ಧೆ, ಸ್ವಪ್ರತಿಷ್ಠೆ, ಇತ್ಯಾದಿಗಳ ವ್ಯಾಪಾರಕ್ಕೆ ಇವರಲ್ಲಿ ಅವಕಾಶವಿರುತ್ತದೆ. ಶಾಲೆಯ ಆಟಪಾಟಗಳಲ್ಲಿ ಈ ಹುಟ್ಟುಗುಣವು ವ್ಯಕ್ತವಾಗುವಂತೆ ಅವಕಾಶವನ್ನು ಕಲ್ಪಿಸಬೇಕು." ಆದರೆ ಸಹವಾಸದಿಂದ ಮಕ್ಕಳಲ್ಲಿ ದುಷ್ಟಗುಣಗಳು ಸೇರಿಕೊಳ್ಳದಂತೆ ಎಚ್ಚರಾಗಿರಬೇಕು. ಜತೆಯಂತೆ ಮತಿಯಲ್ಲವೆ ?

(೬) **ಆತ್ಮಪ್ರತಿಷ್ಠಾ ಪ್ರವೃತ್ತಿ.**— ತನಗಿಂತ ಕಡಿಮೆಯಾಗಿರುವ ವರ ಎದುರಿನಲ್ಲಿ ತನ್ನ ಪ್ರತಿಷ್ಠೆಯನ್ನು ಬೆಳಗಬೇಕೆಂದು ಪ್ರತಿಯೊಬ್ಬ ವ್ಯಕ್ತಿಯು ಬಯಸುತ್ತಾನೆ. ಅನ್ಯರ ಎದುರಿನಲ್ಲಿ ಸಾಮರ್ಥ್ಯವನ್ನು ತೋರಿಸು ವುದು, ಕೌಶಲ್ಯವನ್ನು ತೋರಿಸುವುದು, ಹೆಮ್ಮೆಪಡುವುದು, ಜಂಬಕೊಚ್ಚು ವುದು, ಯಾವುದಾದರೂ ಒಂದು ರೀತಿಯಲ್ಲಿ ತಾನು ಹೆಚ್ಚಿನವನೆಂದು ತೋರಿಸುವುದು ಮುಂತಾದುವು ಈ ಪ್ರವೃತ್ತಿಯ ಲಕ್ಷಣಗಳು. ಆತ್ಮ ಪ್ರತಿಷ್ಠೆಯು ಎಲ್ಲ ಜೀವಿಗಳಲ್ಲಿ ಪ್ರಬಲವಾಗಿರುತ್ತದೆ.

ಮಕ್ಕಳಲ್ಲಿ "ನಾನು, ನನ್ನದು" ಎಂಬ ಸೊಲ್ಲು ಪದೇ ಪದೇ ಕೇಳ ಬರುತ್ತದೆ. ಅಭ್ಯಾಸದಲ್ಲಿಯೂ ಆಟದಲ್ಲಿಯೂ ಸ್ಪರ್ಧೆಯು ಇದ್ದೇ ಇರುವು ದರಿಂದ ಈ ಪ್ರವೃತ್ತಿಯನ್ನು ಚೆನ್ನಾಗಿ ಪೋಷಿಸಿ ಬೆಳೆಯಿಸಲು ಬರುವುದು. "ಈ ಸಮಸ್ಯೆಯನ್ನು ಯಾರು ಬಿಡಿಸುವಿರಿ, ನೋಡುವಾ ?" ಎಂದು ಹೇಳಿ ಬಾಲಕರನ್ನು ಪ್ರೋತ್ಸಾಹಿಸಬೇಕು. ಮಕ್ಕಳಲ್ಲಿ ಹೊಗಳಿಸಿಕೊಳ್ಳಬೇಕೆಂಬ ಉತ್ಕಟ ಇಚ್ಛೆಯೂ ಇರುತ್ತದೆ. ಶಿಕ್ಷಕನ, ಪಾಲಕನ, ಹಾಗೂ ಮಿತ್ರರ ಮೆಚ್ಚುಗೆಯನ್ನು ಪಡೆಯಬೇಕೆಂದು ಮಕ್ಕಳು ಅಪೇಕ್ಷಿಸುತ್ತಾರೆ. ನಾವು

ಪ್ರಯತ್ನಶೀಲನಾದ ಮಗುವನ್ನು ಸದಾ ಪ್ರೋತ್ಸಾಹಿಸಬೇಕು. ಈ ಪ್ರವೃತ್ತಿಯ ಸದುಪಯೋಗ ಮಾಡಿಕೊಂಡರೆ ಮಕ್ಕಳು ಕಾರ್ಯತತ್ಪರರಾಗುತ್ತಾರೆ, ಅವರ ಶಕ್ತಿಗಳು ಬಲಪಡುತ್ತವೆ. ಬಹುಮಾನ, ಪ್ರಶಂಸಾಪತ್ರ, ಸ್ತುತಿ ಮುಂತಾದುವುಗಳಿಂದ ಈ ಪ್ರವೃತ್ತಿಗೆ ಪ್ರೇರಣೆಯು ದೊರೆಯುತ್ತದೆ. ಆದರೆ ಗರ್ವ ಮತ್ತು ದುರಭಿಮಾನಕ್ಕೆ ಎಡೆಕೊಟ್ಟಲ್ಲಿ ಆತ್ಮಪ್ರತಿಷ್ಠೆಯು ದುರ್ಮಾರ್ಗವನ್ನು ಹಿಡಿದಂತಾಗುವುದು. ಇದಾಗದಂತೆ ನಾವು ಎಚ್ಚರ ಪಡಬೇಕಾದುದು ಆವಶ್ಯಕ.

(೭) **ವಿಧೇಯ ಪ್ರವೃತ್ತಿ.**— ಆತ್ಮಪ್ರತಿಷ್ಠೆ ಮತ್ತು ವಿಧೇಯತೆ ಇವು ಒಂದಕ್ಕೊಂದು ವಿರೋಧವಾದ ಪ್ರವೃತ್ತಿಗಳು. ತನಗಿಂತ ಶ್ರೇಷ್ಠ ರಾದವರ ಬಳಿಯಲ್ಲಿ ಮನುಷ್ಯನು ಅಧೀನನಾಗಿ ನಡೆಯುತ್ತಾನೆ. ದೀನತೆ ಯಿಂದ ಬಾಗಿ ನಿಲ್ಲುವುದು, ಗುಲಾಮನಂತೆ ವರ್ತಿಸುವುದು, ಮರ್ಯಾದೆ ತೋರಿಸುವುದು ಇವು ಅಧೀನಭಾವದ ವರ್ತನೆಗಳು. ನಾಯಿಯು ಇನ್ನೊಂದು ಬಲಿಷ್ಠವಾದ ನಾಯಿಯ ಎದುರಿನಲ್ಲಿ ಬಾಲವನ್ನು ಮುದುಡಿಸಿ ಕೊಂಡು ಮೆಲ್ಲಗೆ ನಡೆಯುವುದು.

ಶಕ್ತಿ, ಅಧಿಕಾರ, ವಿದ್ಯೆ, ಗುಣ, ಐಶ್ವರ್ಯ, ಮೊದಲಾದುವು ಯಾರಲ್ಲಿ ನಮಗಿಂತಲೂ ಮಿಗಿಲಾಗಿ ಇರುವವೊ ಅವರ ಎದುರಿನಲ್ಲಿ ನಾವು ಅಧೀನತೆ ಯಿಂದ ವರ್ತಿಸುವೆವು. ಮಕ್ಕಳು ವಿನಯಶೀಲರಾಗಿ ನಡೆಯುವುದು ಭೂಷಣವೆ! ಆದರೆ ಭಯಪ್ರವೃತ್ತಿಯಂತೆ ವಿಧೇಯಪ್ರವೃತ್ತಿಯನ್ನು ಉಪ ಯೋಗಿಸಿಕೊಳ್ಳುವಾಗ ಶಿಕ್ಷಕರು ಅತಿ ಜಾಗರೂಕರಾಗಿರಬೇಕು. ತಾನು ಕೀಳನೆಂಬ ಭಾವವು ವಿದ್ಯಾರ್ಥಿಯಲ್ಲಿ ತಲೆದೋರದಂತೆ ನೋಡಿಕೊಳ್ಳುವುದು ಶಿಕ್ಷಕರ ಧರ್ಮವಾಗಿದೆ. ಏಕೆಂದರೆ ಕೀಳುಭಾವನೆಯು ಮಾನವನ ಏಳ್ಗೆ ಯನ್ನು ಎಳೆದುಹಿಡಿಯುತ್ತದೆ. ನಮ್ಮ ನಾಡಿನಲ್ಲಿ ಎಷ್ಟೋ ಜನರು 'ತಾವು ಕೀಳು' ಎಂಬ ಭಾವನೆಯನ್ನು ಇಟ್ಟುಕೊಂಡಿರುವುದರಿಂದಲೆ ಹಿಂದುಳಿದಿರು ವರು. ಈ ಪ್ರವೃತ್ತಿಯ ದುಷ್ಟವಾಶಕ್ಕೆ ಒಳಗಾದವರ ನೈತಿಕ ಧೈರ್ಯವೂ ಇಲ್ಲದಾಗುವುದು. ವಿಧೇಯತೆಯೂ ನಮ್ರತೆಯೂ ಬೇಕು; ಆದರೆ ಆತ್ಮ-ನಿಕೃಷ್ಟತೆ, ಕೀಳುಭಾವನೆಗಳು ಬೇಡ. ಮಕ್ಕಳು ಆತ್ಮಗೌರವವನ್ನು ಪಾಲಿಸಲು

ಕಲಿಯಬೇಕು. ವಿದ್ಯೆಯು ವಿನಯದಿಂದ ಶೋಭಿಸುವುದು (विद्या विनयेन शोभते) ಎಂಬುದನ್ನೂ ಅರಿತಿರಬೇಕು.

(೮) **ಕ್ರೋಧ ಪ್ರವೃತ್ತಿ.**— ಮನಸ್ಸಿನ ಅನ್ಯ ಪ್ರವೃತ್ತಿಗಳಿಗೆ ತಡೆಯುಂಟಾದಲ್ಲಿ ಈ ಪ್ರವೃತ್ತಿಯು ಪುಟಿಯುತ್ತದೆ. ಆದರೆ ಮುಖ್ಯವಾಗಿ ಆತ್ಮರಕ್ಷಣೆ ಮತ್ತು ಮಾನರಕ್ಷಣೆಯ ಪಾಲನೆಗಾಗಿ ಇದು ಉದ್ಭವಿಸುತ್ತದೆ. ನಮಗೆ ವಿರೋಧವಾದುದನ್ನು ಪ್ರತಿಭಟಿಸಬೇಕೆಂದು ನಾವು ಹೂಡುವ ಯುದ್ಧದಲ್ಲಿ ಈ ಪ್ರವೃತ್ತಿಯು ಚೆನ್ನಾಗಿ ಕಾಣಿಸಿಕೊಳ್ಳುತ್ತದೆ. ಬೆಕ್ಕಿನ ಮರಿಯನ್ನು ತಡವಿದರೆ ತಾಯಿ-ಬೆಕ್ಕಿಗೆ ಕೋಪ ಬರುತ್ತದೆ. ನಾಯಿಯ ಬಾಯೊಳಗಿನ ಎಲುಬನ್ನು ಮತ್ತೊಂದು ನಾಯಿಯು ಕಸಿಯಹೋದರೆ ಅದು ಸಿಟ್ಟಿಗೆದ್ದು ಗುರುಗುಟ್ಟುತ್ತದೆ. ಮಗುವಿನ ಕೈಯಲ್ಲಿಯ ಗೊಂಬೆಯನ್ನು ಕಸಿದರೆ ಅದಕ್ಕೆ ಕೋಪ ಬರುತ್ತದೆ.

ಕ್ರೋಧವು ಒಂದು ಬಲವಾದ ಹುಟ್ಟುಗುಣವು. ಅದನ್ನು ತಗ್ಗಿಸುವುದು ಸಾಧ್ಯವಲ್ಲ. ನಾವು ಅದನ್ನು ತಕ್ಕ ಮಾರ್ಗದಲ್ಲಿ ಮಾತ್ರ ತಿರುಗಿಸಬೇಕಾದುದೇ ಅವಶ್ಯವಾಗಿರುತ್ತದೆ. ಸದುದ್ದೇಶ ಸಾಧನೆಗೆ ಮಾತ್ರ ಇದನ್ನು ಉಪಯೋಗಿಸುವುದು ಉತ್ತಮ. ಪ್ರಪಂಚದಲ್ಲಿಯ ಕೊಳೆಯನ್ನು ಕಿತ್ತೊಗೆಯಲಿಕ್ಕೆ ಸಾತ್ವಿಕ ಯುದ್ಧವನ್ನು ಹೂಡುವುದರಲ್ಲಿ ಕ್ರೋಧವು ಸದುದ್ದೇಶದ ಸಾಧನೆಯಲ್ಲಿರುವುದೆಂದು ಅರಿಯಬೇಕು. ಮಕ್ಕಳು ದೊಡ್ಡವರಾದಾಗ ಸುಳ್ಳು, ಕ್ರೂರನಡತೆ, ನಿರಕ್ಷರತೆ, ಬಡತನ, ದಾಸ್ಯ ಮುಂತಾದ ಸಾಮಾಜಿಕ ಕೊಳಚೆಗಳನ್ನು ನಿವಾರಿಸುವುದರಲ್ಲಿ ಈ ಪ್ರವೃತ್ತಿಯನ್ನು ತೊಡಗಿಸಿದರೆ ಶಿಕ್ಷಣದ ಉದ್ದೇಶವು ಸಫಲವಾಯಿತೆಂದು ಭಾವಿಸಬೇಕು.

(೯) **ರಚನಾ ಪ್ರವೃತ್ತಿ.**— ಹಕ್ಕಿಯು ಗೂಡನ್ನು ಕಟ್ಟುವುದೂ ಜೇಡವು ಬೀಡನ್ನು ನೇಯುವುದೂ ಜೇನುಹುಳಗಳು ಹುಟ್ಟನ್ನು ನಿರ್ಮಿಸುವುದೂ ರಚನಾಪ್ರವೃತ್ತಿಯ ಕಾರ್ಯಗಳು. ಮಕ್ಕಳು ಕಿಡಿಗೇಡಿಯಾಗಿರುವುದು ನಾವು ಅರಿಯದ ಮಾತಲ್ಲ. ಈ 'ಕಿಡಿಗೇಡಿ'ತನಕ್ಕೆ ರಚನಾ ಪ್ರವೃತ್ತಿಯೇ ಮೂಲವು. ಇದಕ್ಕೆ [illegible] ಅನ್ನಬಹುದು.

ಚಟುವಟಿಕೆಯು ಬದುಕಿನ ಕುರುಹು. ಆಡುವುದೂ ಕೆಡಿಸುವುದೂ ಮಕ್ಕಳ ಸ್ವಭಾವಕ್ಕೆ ಹೊರತಾದುದಲ್ಲ. ಏನನ್ನಾದರೂ ಮಾಡಬೇಕೆಂಬ ಪ್ರಬಲವಾದ ಇಚ್ಛೆಯು ಮನುಷ್ಯನನ್ನು ಕಾರ್ಯದಲ್ಲಿ ತೊಡಗಿಸುತ್ತದೆ. ಮಕ್ಕಳ ಕಾರ್ಯಪ್ರವೃತ್ತಿಗೆ ಅಡ್ಡಬಂದರೆ ಅವರ ಬೆಳವಣಿಗೆಯು ಯೋಗ್ಯ ರೀತಿಯಿಂದ ಸಾಗದು. ಸಾಲೆಯಲ್ಲಿಯೂ ಮನೆಯಲ್ಲಿಯೂ ಮಕ್ಕಳ ಈ ವೃತ್ತಿಯನ್ನು ಯೋಗ್ಯ ಮಾರ್ಗದಲ್ಲಿ ಉಪಯೋಗಿಸಿಕೊಳ್ಳಬೇಕು. ಯಾವುದಾದರೊಂದು ಕಾರ್ಯಮಾಡುವುದರಲ್ಲಿ ಅವರಿಗೆ ಆಸಕ್ತಿಯು ಬಹಳವಾಗಿ ಇರುವುದು. ಯುರೋಪ ಮತ್ತು ಅಮೇರಿಕಾ ಖಂಡಗಳಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಕೈಕೆಲಸಕ್ಕೆ ಪ್ರಾಧಾನ್ಯವಿರುವುದು ಇದಕ್ಕಾಗಿಯೆ. ವರ್ಧಾ ಶಿಕ್ಷಣಯೋಜನೆಯಲ್ಲಿಯೂ ಎಲ್ಲ ಪಾಠಗಳ ಕೇಂದ್ರವೆಂದರೆ ಚಟುವಟಿಕೆ. ಮಾಂಟೀಸರಿ, ಫ್ರೊಬೆಲ್ ಇವರ ಶಿಶು-ಶಾಲೆಗಳಲ್ಲಿ ರಚನಾಪ್ರವೃತ್ತಿಯು ಸೂರೆಗೊಂಡಿದೆ.

(೧೦) **ಸಂಗ್ರಹ ಪ್ರವೃತ್ತಿ** — ಸಂಗ್ರಹಿಸಲಿಕ್ಕೆ ಯೋಗ್ಯವಾದ ವಸ್ತುವನ್ನು ಕಂಡೊಡನೆ ಅದನ್ನು ಸಂಪಾದಿಸಬೇಕೆಂಬ ಆಶೆಯು ಹುಟ್ಟುತ್ತದೆ. ಇರಿವೆ, ಇಣಚಿಗಳು ಆಹಾರವನ್ನು ಕೂಡಿಹಾಕುತ್ತವೆ; ಕೃಪಣನು ಹಣವನ್ನು ಕೂಡಿಡುತ್ತಾನೆ; ಬಾಲಕರು ಗಜಗ, ಗೋಲಿ, ಗುಂಡು, ತಿಕೀಟು, ಬಳೆಚೂರು, ಚಿತ್ರಗಳು ಮೊದಲಾದುವನ್ನು ಕೂಡಿ ಹಾಕುತ್ತಾರೆ. ಹಿರಿಯರೂ ಮನೋರಂಜಕ ವಸ್ತುಗಳನ್ನು ಸಂಗ್ರಹಿಸುವರೆಂಬುದು ಗಣೇಶೋತ್ಸವಾದಿಗಳ ಕಾಲದಲ್ಲಿ ನಿದರ್ಶನಕ್ಕೆ ಬರುತ್ತದೆ.

ಬಾಲಕರಲ್ಲಿರುವ ಈ ಸಂಗ್ರಹವೃತ್ತಿಯನ್ನು ಶಿಕ್ಷಕರು ಪ್ರೋತ್ಸಾಹಿಸಬೇಕು. ಇತಿಹಾಸ, ಭೂಗೋಲ, ವಿಜ್ಞಾನ, ಇಂಥ ವಿಷಯಗಳ ಪಾಠಗಳಲ್ಲಿ ಉಪಯೋಗವಾಗುವ ಚಿತ್ರಗಳನ್ನೂ ಪ್ರತಿಮೆಗಳನ್ನೂ ಹಳೆಯ ನಾಣ್ಯಗಳನ್ನೂ ಆಶ್ಚರ್ಯಕಾರಕ ವಸ್ತುಗಳನ್ನೂ ಸಂಗ್ರಹಿಸಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಬೇಕು. ಬಾಲಕರ ಈ ಪ್ರವೃತ್ತಿಯ ಸದುಪಯೋಗದಿಂದ ಪ್ರತಿಯೊಂದು ಸಾಲೆಯಲ್ಲಿ ವಸ್ತುಸಂಗ್ರಹಾಲಯವನ್ನು ನಿರ್ಮಿಸಬಹುದು.

ಮೇಲೆ ವಿವರಿಸಿದ ಪ್ರವೃತ್ತಿಗಳು ಮನಸ್ಸಿನ ಬೇರೆ ಬೇರೆ ಶಕ್ತಿಗಳಲ್ಲ. ವಿಶಿಷ್ಟ ಸನ್ನಿವೇಶದಲ್ಲಿ ಮನಸ್ಸು ವಿಶಿಷ್ಟ ರೀತಿಯಿಂದ ವರ್ತಿಸುವುದನ್ನು ಕಂಡು ನಾವು ಅದಕ್ಕೊಂದು ಹೆಸರನ್ನು ಕೊಡುತ್ತೇವೆ. ಮನಸ್ಸು ಸಂದರ್ಭಕ್ಕೆ ತಕ್ಕಂತೆ ವೇಷವನ್ನು ಧರಿಸುತ್ತದೆಂದು ಹೇಳಬಹುದು. ಈ ವೇಷಗಳೇ ಪ್ರವೃತ್ತಿಗಳೆಂದು ಎನ್ನಲಾಗುತ್ತದೆ. ಮೇಲಾಗಿ ಈ ಪ್ರವೃತ್ತಿಗಳಲ್ಲಿ ಅನ್ಯೋನ್ಯ ಸಂಬಂಧವೂ ಉಂಟು. ಉದಾಹರಣಾರ್ಥವಾಗಿ— ಆತ್ಮಪ್ರತಿಷ್ಠೆ, ವಿಧೇಯತೆ ಇವು ಸಂಘಪ್ರವೃತ್ತಿಗೆ ಸಂಬಂಧಿಸಿರುತ್ತವೆ.

**ಪ್ರವೃತ್ತಿಗಳ ಉದಾತ್ತೀಕರಣ** (Sublimation).—ಪ್ರವೃತ್ತಿಗಳ ವಿಷಯವು ಅತ್ಯಂತ ಮಹತ್ವವಾದುದರಿಂದ ಇಷ್ಟು ದೀರ್ಘವಾಗಿ ಅದನ್ನು ಕುರಿತು ವಿಚಾರಿಸಬೇಕಾಯಿತು ಮನುಷ್ಯನ ನಡತೆಯ ಬಗೆಗೆ ಅಭ್ಯಾಸವನ್ನು ಮಾಡಬೇಕೆಂಬುವವರಿಗೆ ಪ್ರವೃತ್ತಿಗಳೇ ಆರಂಭದ ಪಾಠಗಳು. ಶಿಕ್ಷಣದಲ್ಲಿ ಅವುಗಳಿಗೆ ಮಹತ್ತ್ವವಾದ ಸ್ಥಾನವಿದೆ. ಪ್ರವೃತ್ತಿಗಳು ನಡತೆಯನ್ನು ತಯಾರಿಸುವ ಮೂಲದ್ರವ್ಯಗಳು. ನಡತೆಯನ್ನು ತಿದ್ದುವುದೇ ಶಿಕ್ಷಣವು. ಮನುಷ್ಯನು ಶಿಷ್ಟನಾಗಲಿ ದುಷ್ಟನಾಗಲಿ ಆಗುವುದು ಪ್ರವತ್ತಿಗಳಿಂದಲೆ. ಆದುದರಿಂದ ಶಿಕ್ಷಕನು ತನ್ನ ಕೆಲಸವು ಮುಗಿಯುವವರೆಗೆ ಪ್ರವೃತ್ತಿಗಳೊಡನೆ ವ್ಯವಹರಿಸಬೇಕಾಗುವುದು.

ಶಿಕ್ಷಕನು ಪ್ರವೃತ್ತಿಗಳ ಪ್ರವಾಹದಗುಂಟ ಕೆಲಸ ಮಾಡಬೇಕಾಗುವುದು. ಅವುಗಳ ವಿರುದ್ಧವಾಗಿ ನಡೆಯುವುದು ತಪ್ಪು; ಅವುಗಳನ್ನು ನಾಶಮಾಡುವುದಂತೂ ಅಶಕ್ಯ. ಆದರೂ ಪ್ರವೃತ್ತಿಗಳನ್ನು ಅವು ಹರಿದತ್ತ ಬಿಟ್ಟರೆ ಸಂಸ್ಕೃತಿಗೆ ಶರಣುಹೊಡೆಯಬೇಕಾಗುವುದು. ಇತ್ತ ಸಣ್ಣ ಮಕ್ಕಳನ್ನು ಉಪದೇಶದ ಮುಖಾಂತರ ತಿದ್ದುವ ಹವ್ಯಾಸವು ವ್ಯರ್ಥವಾಗುತ್ತದೆ. ಏಕೆಂದರೆ ಮಕ್ಕಳಲ್ಲಿ ನೀತಿಯ ವಿಚಾರಗಳು ಇನ್ನೂ ಮೂಡಿರುವುದಿಲ್ಲ. ಮಗುವನ್ನು ತಿದ್ದುವಾಗ ಈ ಪ್ರವೃತ್ತಿಗಳ ಸಹಾಯವನ್ನು ಪಡೆದುಕೊಳ್ಳಬೇಕು. ಹೇಯ, ಭಯ, ಆತ್ಮಪ್ರತಿಷ್ಠೆ, ವಿಧೇಯತೆ ಇವು ಬಾಲಕರ ಶೀಲವನ್ನು ತಿದ್ದಲು ಅನುಕೂಲವಾಗುವುವು. ಭಯ ಮತ್ತು ವಿಧೇಯ ಪ್ರವೃತ್ತಿಗಳನ್ನು ಆಗಾಗ್ಗೆ ಪ್ರೇರಿಸುವುದು ಅಪಾಯಕಾರವಾದರೂ

ಪ್ರಾಥಮಿಕ ಶಿಕ್ಷಣದಲ್ಲಿ ಅವುಗಳನ್ನು ತಕ್ಕಮಟ್ಟಿಗೆ ಎಚ್ಚರಿಕೆಯಿಂದ ಉಪಯೋಗಿಸಬೇಕಾಗುವುದು. ಪ್ರವೃತ್ತಿಪರ ಕ್ರಿಯೆಯನ್ನು ಅಡ್ಡಗಟ್ಟು ವುದರಿಂದ ಕೋಪಕ್ಕೆ ಅವಕಾಶವಿತ್ತಂತೆ ಆಗುವುದು ಆದುದರಿಂದ ಬಾಲಕ ರನ್ನು ಒಂದು ಪ್ರವೃತ್ತಿಯಿಂದ ತೊಲಗಿಸಬೇಕಾದರೆ ಅದರ ಸ್ಥಳದಲ್ಲಿ ಮತ್ತೊಂದು ಪ್ರವೃತ್ತಿಯನ್ನು ನೇರಿಸಬೇಕು.

ನೈತಿಕ ಶಿಕ್ಷಣದಂತೆ ಬೌದ್ಧಿಕ ಶಿಕ್ಷಣವಾದರೂ ಪ್ರವೃತ್ತಿಗಳ ಆಧಾರ ದಿಂದಲೇ ಸಾಗಬೇಕು. ಕುತೂಹಲ ಪ್ರವೃತ್ತಿಯು ಶಿಕ್ಷಕನಿಗೆ ಅತ್ಯಂತ ಸಹಕಾರಿಯಾಗಿರುತ್ತದೆ. ಕುತೂಹಲದಿಂದ ಲಕ್ಷ್ಯವು ತಾನಾಗಿಯೆ ವಿಷಯದತ್ತ ಹೊರಳುವುದು ಅದರಂತೆಯೆ ರಚನಾಪ್ರವೃತ್ತಿಯನ್ನೂ ಶಿಕ್ಷಕನು ತನ್ನ ಕಾರ್ಯದಲ್ಲಿ ಚೆನ್ನಾಗಿ ಉಪಯೋಗಿಸಬಹುದು. ಬಾಲಕ ರಿಂದ ಅನೇಕ ತರದ ಸಾಮಾನುಗಳನ್ನು ಮಾಡಿಸುವುದು ಪ್ರಯೋಜನಕಾರಿ ಯಾಮದು. ಶಾರೀರಿಕ ಶಿಕ್ಷಣದಲ್ಲಿ ಸಂಘ, ಆತ್ಮಪ್ರತಿಷ್ಠಾ, ವಿಧೇಯ, ಪಾಲನ ಮೊದಲಾದ ಸಾಮಾಜಿಕ ಪ್ರವೃತ್ತಿಗಳನ್ನು ಉದಾತ್ತಗೊಳಿಸುವುದು ಸಾಧ್ಯವದೆ ಮಕ್ಕಳಲ್ಲಿ ಸ್ವಾರ್ಥತ್ಯಾಗ, ಸಂಘಾಭಿಮಾನ, ಆತ್ಮಗೌರವ, ನಾಯಕತ್ವ, ಅನುಯಾಯಿತನ, ಸಹಕಾರ, ಸಹಾನುಭೂತಿ, ಧೈರ್ಯ, ಸಾಹಸ, ಶಿಸ್ತು, ಸಂಘಟನೆ ಮೊದಲಾದ ಸದ್ಗುಣಗಳನ್ನು ನೆಲೆಗೊಳಿಸ ಲಿಕ್ಕೆ ಈ ಪ್ರವೃತ್ತಿಗಳು ತುಂಬ ಸಹಾಯವಾಗುವವು. ಶಿಕ್ಷಕನು ಸ್ವತಃ ವಿಚಾರಿಸಿ ಪ್ರತಿಯೊಂದು ಪ್ರವೃತ್ತಿಯನ್ನು ಬಾಲಕನ ನೈತಿಕ, ಬೌದ್ಧಿಕ ಮತ್ತು ಶಾರೀರಿಕ ಶಿಕ್ಷಣಕ್ರಮದಲ್ಲಿ ಯೋಗ್ಯ ರೀತಿಯಿಂದ ಉಪಯೋಗಿಬೇಕು.

ಪ್ರವೃತ್ತಿಗಳು ಹುಟ್ಟುಗುಣಗಳಾಗಿದ್ದರೂ ಅವು ಆದೇ ಹುಟ್ಟಿದ ಶಿಶುವಿನಲ್ಲಿ ಪರಿಪಕ್ವ ಸ್ಥಿತಿಯಲ್ಲಿ ಇರುವುದಿಲ್ಲ. ಮಗುವಿನ ಬೇರೆ ಬೇರೆ ಅವಸ್ಥೆಗಳಲ್ಲಿ ಬೇರೆ ಬೇರೆ ಪ್ರವೃತ್ತಿಗಳು ಪ್ರಬಲವಾಗಿರುತ್ತವೆ. ಉದಾ ಹರಣಾರ್ಥವಾಗಿ, ಬಾಲ್ಯಾವಸ್ಥೆಯಲ್ಲಿ ಅನುಕರಣವೃತ್ತಿಯೂ ಕೌಮಾರಾ ವಸ್ಥೆಯಲ್ಲಿ ಸಂಗ್ರಹ ಮತ್ತು ಸಂಘ ಪ್ರವೃತ್ತಿಗಳೂ ಪ್ರಬಲವಾಗಿರುತ್ತವೆ. ಶಿಕ್ಷಕನು ಪ್ರವೃತ್ತಿಗಳನ್ನು ಪ್ರಸಂಗಾನುಸಾರವಾಗಿ ಉಪಯೋಗಿಸಬೇಕು. "ಗಾಳಿ ಬಿಟ್ಟಾಗಲೇ ತೂರಿಕೊಳ್ಳಬೇಕು."

‘ ಪ್ರತಿಯೊಂದು ಪ್ರವೃತ್ತಿಯು ಕೆಲಕಾಲದ ವರೆಗೆ ಮಾತ್ರ ಇರುವುದು, ಮತ್ತು ಆಗ ಕೆಲಸ ಮಾಡುವ ಕೆಲವು “ ಚಟ ”ಗಳನ್ನು ಅದು ನಿರ್ಧರಿಸ ಬಹುದು; ಪ್ರವೃತ್ತಿಯು ಅಳಿದ ನಂತರ ಈ ಚಟಗಳು ಅದರ ಸ್ಥಾನವನ್ನು ಹೊಂದುವವು ಮತ್ತು ಸಕಾಲದಲ್ಲಿ ಪ್ರವೃತ್ತಿಯ ಲಾಭವನ್ನು ಪಡೆಯ ದಿದ್ದರೆ ಅದರ ಲವಲೇಶವೂ ಇಲ್ಲದಂತಾಗುವುದು. ’ — ಹೀಗೆಂದು ವಿಲಿಯಮ್ ಜೇಮ್ಸ್‌ನು ಪ್ರತಿಪಾದಿಸುತ್ತಾನೆ. ಈ ಸಿದ್ಧಾಂತದ ಮೇಲಿಂದ ಅವನು ಶಿಕ್ಷಣಕ್ಕೆ ಸಂಬಂಧಿಸಿದ ಅನೇಕ ಹಿತೋಕ್ತಿಗಳನ್ನೂ ಬೋಧಿಸುತ್ತಾನೆ. “ ಅನೇಕ ಪ್ರವೃತ್ತಿಗಳು ಕೆಲವೊಂದು ಕಾಲಕ್ಕೆ ಪೂರ್ಣತೆ ಯನ್ನು ಹೊಂದುತ್ತವೆ ” ಎಂದು ಜೇಮ್ಸ್‌ನು ಹೇಳುವ ಮಾತನ್ನು ಆಧುನಿಕ ಮನಶ್ಶಾಸ್ತ್ರಜ್ಞರು ಒಪ್ಪುತ್ತಾರೆ. ಆದರೆ ಆ ಪ್ರವೃತ್ತಿಗಳು “ ಮುಂದೆ ಅಳಿದುಹೋಗುತ್ತವೆ ” ಎಂಬುದನ್ನು ಅವರು ಒಪ್ಪುವುದಿಲ್ಲ. ಸಾಕಿದ ಕಾಡುಪಶುಗಳನ್ನು ಕೈಬಿಟ್ಟರೆ ಅವು ಅಡವಿಯಲ್ಲಿಯ ತಮ್ಮ ಬಾಂಧವರಂತೆ ಉಗ್ರ ನಡತೆಯನ್ನೇ ಪ್ರಾರಂಭಿಸುವವು. ಯಾವುದಾದ ರೊಂದು ಪ್ರವೃತ್ತಿಯನ್ನು ಉಪಯೋಗಿಸದೆ ಬಿಟ್ಟರೆ ಅದು ಕೃಶವಾಗ ಬಹುದು; ಆದರೆ ಎಂದೂ ಅಳಿದುಹೋಗುವುದಿಲ್ಲ.

ಪ್ರವೃತ್ತಿಗಳು ಮೂಲತಃ ಕೆಟ್ಟವುಗಳಾಗಲಿ ಅಥವಾ ಒಳ್ಳೆಯವು ಗಳಾಗಲಿ ಇರುವುದಿಲ್ಲ ಇವು ಸ್ವಾಭಾವಿಕ ಒಲವುಗಳು. ಆದರೆ ಈ ಒಲವುಗಳು ಪರಿಸ್ಥಿತಿಯ ಪರಿಣಾಮದಿಂದ ದುರ್ಮಾರ್ಗವನ್ನು ಹಿಡಿದರೆ ಹೀನ ಪ್ರವೃತ್ತಿಗಳಾಗುವವು; ಇವೇ ಸನ್ಮಾರ್ಗವನ್ನು ಹಿಡಿದರೆ ಉಚ್ಚ ಪ್ರವೃತ್ತಿಗಳೆನಿಸಿಕೊಳ್ಳುವವು. ಹೀನದೆಸೆಯನ್ನು ಹಿಡಿದರೆ ಭಯಪ್ರವೃತ್ತಿಯು ಹೇಡಿತನದಲ್ಲಿಯೂ ಅಂಜುಬುರುಕತನದಲ್ಲಿಯೂ ತೋರುವುದು; ಕೋಪವು ತಾಮಸ ಪ್ರವೃತ್ತಿಯಲ್ಲಿಯೂ, ದ್ವೇಷ-ಅಸೂಯೆಗಳಲ್ಲಿಯೂ ತೋರುವುದು; ಆತ್ಮಪ್ರತಿಷ್ಠೆಯು ಗರ್ವ-ದುರಹಂಕಾರಗಳಿಗೆ ಎಡೆಗೊಡುವುದು. ಕಾಮವು ವ್ಯಭಿಚಾರದಲ್ಲಿಯೂ, ಕುತೂಹಲವು ಅನ್ಯರ ಮಾತುಗಳಿಗೆ ಕಿವಿಗೊಡು ವುದರಲ್ಲಿಯೂ, ಸಂಗ್ರಹ ಪ್ರವೃತ್ತಿಯು ಸ್ವಾರ್ಥದಲ್ಲಿಯೂ, ರಚನಾ ಪ್ರವೃತ್ತಿಯು ಅನ್ಯರಿಗೆ ಅಹಿತವನ್ನುಂಟುಮಾಡುವ ಕಾರ್ಯಗಳಲ್ಲಿಯೂ (ನಿರಾಶ್ರಿತರನ್ನೂ ನಿರುಪದ್ರವಿಗಳನ್ನೂ ಹಿಂಸಿಸಲಿಕ್ಕೆ ಯುದ್ಧಸಾಮಗ್ರಿ

ಗಳನ್ನು ತಯಾರಿಸುವುದರಲ್ಲಿಯೂ) ತೋರುವವು. ಮಕ್ಕಳಲ್ಲಿ ಇರಬಹುದಾದ ಇಂತಹ ಹೀನ ಪ್ರವೃತ್ತಿಗಳನ್ನು ಅವರ ನಡೆನುಡಿಗಳಿಂದ ಕಂಡು ಹಿಡಿದು ಪಾಲಕರೂ ಶಿಕ್ಷಕರೂ ಅವುಗಳನ್ನು ಯೋಗ್ಯ ಚಟುವಟಿಕೆಗಳಲ್ಲಿ ಪರಿವರ್ತಿಸಬೇಕು.

ಕೇವಲ ಪ್ರವೃತ್ತಿಗಳನ್ನು ಹಿಂಬಾಲಿಸಿ ನಡೆಯುವುದು ತನ್ನ ಕೆಲಸವೆಂದು ಶಿಕ್ಷಕನು ಊಹಿಸಬಾರದು. ಪ್ರವೃತ್ತಿಗಳು ವ್ಯಕ್ತಿಯ ಶೀಲ ಸ್ವಭಾವದ ಕಟ್ಟಡವನ್ನು ಕಟ್ಟಲು ಉಪಯುಕ್ತವಾದ ಇಟ್ಟಿಗೆಗಳು. ಆದರೆ ಅವು ಅಸಿದ್ಧವಾದ ರೀತಿಯಲ್ಲಿರುತ್ತವೆ. ಅವುಗಳನ್ನು ಕಾಯಿಸಿ ಪರಿಶುದ್ಧ ಮಾಡಿ ರೂಪಾಂತರಗೊಳಿಸುವುದೇ ಶಿಕ್ಷಕನ ಹಿರಿದಾದ ಕೆಲಸ. ಎಂದರೆ ದುರ್ಮಾರ್ಗವನ್ನು ಹಿಡಿಯಬಹುದಾದ ಪ್ರವೃತ್ತಿಗಳನ್ನು ಸನ್ಮಾರ್ಗಕ್ಕೆ ಹಚ್ಚಬೇಕು. **ಪ್ರವೃತ್ತಿಗಳನ್ನು ಸುವೃತ್ತಿಗಳನ್ನಾಗಿ ಮಾಡುವುದೇ ಶಿಕ್ಷಣ.** ಪ್ರವೃತ್ತಿಗಳ ಪಾಶವು ಪಶುಗಳನ್ನು ಬಿಗಿದಿರುತ್ತದೆ. ಆದರೆ ಮನುಷ್ಯನಲ್ಲಿ ಬುದ್ಧಿಯ ಪ್ರಭಾವವು ಹೆಚ್ಚಿರುವುದರಿಂದ ವಿವೇಕವೆಂಬ ಅಂಕುಶದಿಂದ ಪ್ರವೃತ್ತಿಗಳನ್ನು ಅವನು ಸನ್ಮಾರ್ಗಕ್ಕೆ ಹಚ್ಚಬಲ್ಲನು. ಪಶು ಮತ್ತು ಪ್ರಾಣಿಗಳಲ್ಲಿರುವ ವ್ಯತ್ಯಾಸವು ಇದೇ. ಪ್ರಾಣಿಗಳ ಪ್ರವೃತ್ತಿಪರ ಕ್ರಿಯೆಯು ಬಹುಮಟ್ಟಿಗೆ ಒಂದೇ ರೀತಿಯಾಗಿ ಇರುತ್ತದೆ. ಆದರೆ ಮನುಷ್ಯನ ಪ್ರವೃತ್ತಿಗಳು ಪ್ರಸಂಗಾನುಸಾರವಾಗಿ ಸ್ಥಿತ್ಯಂತರವನ್ನು ಹೊಂದುತ್ತವೆ. ಅಂತೆಯೆ ಮನುಷ್ಯನು ಶಿಕ್ಷಣವನ್ನು ಪಡೆಯಬಲ್ಲನು.

ಪ್ರವೃತ್ತಿಗಳನ್ನು ಹರಿದತ್ತ ಹೋಗಗೊಡದೆ ಅವುಗಳನ್ನು ವ್ಯಕ್ತಿಯ ಮತ್ತು ಸಮಾಜದ ಕಲ್ಯಾಣಕ್ಕಾಗಿ ಉದಾತ್ತ ಧ್ಯೇಯದ ಕಡೆಗೆ ತಿರುಗಿಸುವುದಕ್ಕೆಯೆ **ಉದಾತ್ತೀಕರಣ** (Sublimation) ಎನ್ನುತ್ತಾರೆ. ಹೀಗೆ ಪ್ರವೃತ್ತಿಗಳನ್ನು ಸುಮಾರ್ಗಕ್ಕೆ ಹಚ್ಚುವುದು ಶಿಕ್ಷಕನ ಆದ್ಯ ಕರ್ತವ್ಯ. ಮಕ್ಕಳಲ್ಲಿರುವ ಭಯಪ್ರವೃತ್ತಿಯನ್ನು ಆಟಗಳ ಮೂಲಕ ಉದಾತ್ತಗೊಳಿಸಬೇಕು. ಆಟಗಳಲ್ಲಿ ಸಂಭವಿಸಬಹುದಾದ ಆಪತ್ತುಗಳಿಗೆ ಅಂಜದೆ ಎಚ್ಚರಿಕೆಯಿಂದಲೂ ಧೈರ್ಯದಿಂದಲೂ ಆಡುವಂತೆ ಪ್ರೋತ್ಸಾಹಿಸಬೇಕು. ಒಬ್ಬ ಮಗುವು ಅಪಾಯಗಳಿಗೆ ಹಿಂಜರಿದು ಅವುಗಳನ್ನು ತಪ್ಪಿಸತೊಡಗಿದರೆ

ಭಯಪ್ರವೃತ್ತಿಯನ್ನು ಅವನು ವಿರೋಧಿಸದೆ ಹಾಗೆಯೆ ಬಿಟ್ಟಂತಾಗುವುದು ಮತ್ತು ಅದನ್ನು ಉದಾತ್ತಗೊಳಿಸಲಿಕ್ಕೆ ಅಸಮರ್ಥನೂ ಆಗುವನು. ಅಲ್ಲದೆ ಅವನು ಆಜೀವಪರ್ಯಂತ ಅಂಜುಬುರಕನಾಗಿಯೆ ಉಳಿಯುವನು. ಇದೇ ತತ್ತ್ವವು ಎಲ್ಲ ಪ್ರವೃತ್ತಿಗಳಿಗೂ ಅನ್ವಯಿಸುವುದು.

ಎಚ್ಚರಿಕೆ, ವಿವೇಕ, ಭಕ್ತಿ ಮತ್ತು ಪೂಜ್ಯಭಾವಗಳಲ್ಲಿ ಭಯವು ಉದಾತ್ತತೆಯನ್ನು ಹೊಂದುವುದು; ಕಾಮಪ್ರವೃತ್ತಿಯು ಪ್ರೇಮದಲ್ಲಿಯೂ ಕಲೆಯಲ್ಲಿಯೂ ಉದಾತ್ತತೆಯನ್ನು ಪಡೆಯುವುದು; ಆತ್ಮಪ್ರತಿಷ್ಠೆಯು ಸಮಾಜಸೇವೆ, ಆತ್ಮಗೌರವ, ಆತ್ಮವಿಶ್ವಾಸ, ಆತ್ಮಸಂಯಮನದ ಮಹತ್ವಾಕಾಂಕ್ಷೆ ಮತ್ತು ಪ್ರಯತ್ನಗಳಲ್ಲಿ ಮಾರ್ಪಾಟು ಹೊಂದುವುದು. ಅಧೀನತೆಯು ಸನ್ಮಾನ ಮತ್ತು ಶ್ಲಾಘನೆಯಲ್ಲಿ, ಕುತೂಹಲವು ವಿಸ್ಮಯ ಮತ್ತು ವೈಜ್ಞಾನಿಕ ಸಾಹಸದಲ್ಲಿ, ಜುಗುಪ್ಸೆಯು ಹೀನ ನಡತೆಯನ್ನು ಮತ್ತು ದುಷ್ಕರ್ಮವನ್ನು ಮೆಚ್ಚದಿರುವುದರಲ್ಲಿ, ಸಂಘ ಪ್ರವೃತ್ತಿಯು ಸಹಕಾರ ಮತ್ತು ಮೈತ್ರೀಭಾವದಲ್ಲಿ, ಕ್ರೋಧವು ಅಧರ್ಮವನ್ನು ಪ್ರತಿಭಟಿಸುವ ನಿರಂತರ ಪ್ರಯತ್ನಗಳಲ್ಲಿ ಉದಾತ್ತತೆಯನ್ನು ಹೊಂದುವವು. ಪ್ರವೃತ್ತಿಗಳನ್ನು ಉದಾತ್ತಗೊಳಿಸುವುದೇ ಶಿಕ್ಷಣದ ಕಾರ್ಯ.

ಪ್ರವೃತ್ತಿಗಳ ಉದಾತ್ತೀಕರಣವನ್ನು ಕುರಿತು ಒಬ್ಬ ಕವಿಯು ಹೀಗೆಂದಿದ್ದಾನೆ—

**ಕಾಮ ನಿಜದಾರದೊಳು, ಕ್ರೋಧ ।**
**ಸ್ತೋಮ ದುರ್ಮಾರ್ಗರೊಳು, ಲೋಭದ ।**
**ಸೀಮೆ ಪುಣ್ಯಂಗಳೊಳು, ಮೋಹವು ಸಾಧುಜನರೊಡನೆ, ॥**
**ಆ ಮಹಾಮದ ಗರ್ವಿತರೊಳು- ।**
**ದ್ದಾಮ ಮತ್ಸರ ತಾನು ದುಷ್ಕೃತಿ ।**
**ಕಾಮನವ ಮಾಳ್ಪರೊಳು, ತೋರಲುಬೇಕು ಸಜ್ಜನರ ॥**

೬

# ಸಾಮಾನ್ಯ ವೃತ್ತಿಗಳು

ಹಿಂದಿನ ಪ್ರಕರಣದಲ್ಲಿ ವಿವರಿಸಿದ ಪ್ರವೃತ್ತಿಗಳಲ್ಲದೆ ಮನುಷ್ಯರಲ್ಲಿ ಅನುಕರಣ, ಸಹಾನುಭೂತಿ, ಸೂಚನೆ ಪುನರುಕ್ತಿ ಮತ್ತು ಆಟ ಎಂಬ ಇನ್ನೂ ಕೆಲವು ವೃತ್ತಿಗಳು ಕಂಡುಬರುತ್ತವೆ. ಪ್ರವೃತ್ತಿಗಳಂತೆಯೆ ಇವೂ ಸಹಜವಾಗಿಯೆ ಇರುತ್ತವೆ. ಆದರೆ ಇವು ಅನೇಕ ಸಂದರ್ಭಗಳಲ್ಲಿ ಅನೇಕ ವಿಧದಿಂದ ಪ್ರಕಟವಾಗುತ್ತವೆ ಮತ್ತು ಪ್ರತಿಯೊಂದು ವೃತ್ತಿಯಲ್ಲಿ ಆ ಅನೇಕ ಪ್ರವೃತ್ತಿಗಳು ಸಮಾವೇಶವಾಗಿರುತ್ತವೆ.

ಈ ವೃತ್ತಿಗಳು ಸಂಘ ಪ್ರವೃತ್ತಿಗೂ ವಿಧೇಯ ಪ್ರವೃತ್ತಿಗೂ ತೀರ ಸಂಬಂಧಪಟ್ಟಿರುತ್ತವೆ. ಅನ್ಯರ ಆಚಾರ, ವಿಚಾರ, ಮತ್ತು ಮನೋಭಾವಗಳನ್ನು ಅನುಕರಿಸುವುದು ಇವುಗಳ ಲಕ್ಷಣವಾಗಿದೆ. ನಾವು ಶ್ರೇಷ್ಠರೆಂದು ಒಪ್ಪಿಕೊಂಡವರನ್ನು ಅನುಕರಿಸುವುದು ನಮ್ಮ ಸಹಜ ಸ್ವಭಾವ (यद्यदाचरति श्रेष्ठस्तत्तदेवेतरो जनः । — ಭಗವದ್ಗೀತೆ)

(೧) **ಅನುಕರಣ—** ಅನ್ಯರು ಮಾಡಿದಂತೆ ಮಾಡುವುದು ಅನುಕರಣವು. ಕೋಳಿಯ ಮರಿಯು ದೊಡ್ಡ ಕೋಳಿಯನ್ನು ನೋಡಿ ತಾನೂ ತಿಪ್ಪೆಯನ್ನು ಕೆದರುತ್ತದೆ. ಸಿಂಪಿಗನೊಬ್ಬನು ಟೊಪ್ಪಿಗೆಯನ್ನು ಒಗೆದುದನ್ನು ಕಂಡು ಮಂಗಗಳೂ ಒಗೆದುವು ಎಂಬ ಕತೆಯನ್ನು ನಾವು ಕೇಳಿಯೆ ಇದ್ದೇವೆ ಪಾಠವು ಮುಗಿದ ನಂತರ ಓರಿಗೆಯ ಗೆಳೆಯರು ಓಡಿದ ಕೂಡಲೆ ಬಾಲಕನು ತಾನೂ ಓಡುತ್ತಾನೆ. ಭಾಷೆಯನ್ನೂ ಸಾಮಾಜಿಕ ಪದ್ಧತಿಗಳನ್ನೂ ಉಡುಗೆತೊಡುಗೆಗಳ ಶೈಲಿಯನ್ನೂ ಮನುಷ್ಯರು ಅನುಕರಣದಿಂದಲೇ ಕಲಿಯುತ್ತಾರೆ. ಅನುಕರಣದಲ್ಲಿ ಎರಡು ಪ್ರಕಾರಗಳಿವೆ: (೧) ಸವಿಕಲ್ಪಕ (ಅರಿತು ಮಾಡುವುದು); (೨) ನಿರ್ವಿಕಲ್ಪಕ (ಅರಿಯದೆ ಮಾಡುವುದು).

ಅರಿಯದೆ ಸಹಜವಾಗಿ ಅನುಕರಿಸುವುದು ನಿರ್ವಿಕಲ್ಪಕ ಅನುಕರಣವೆನಿಸುವುದು. ಇದು ವಿಶೇಷವಾಗಿ ಪ್ರಾಣಿಗಳಲ್ಲಿ ಕಂಡುಬರುತ್ತದೆ. ಆಲೋಚನಾತ್ಮಕ ಅನುಕರಣವು ಸವಿಕಲ್ಪಕ ,ಅನುಕರಣವು. ಎರಡನೆಯವರು ನರ್ತನ ಮಾಡುವುದನ್ನು ಬಾಲಿಕೆಯು ತಾನು ಕಲಿಯುವಾಗ ಲಕ್ಷ್ಯಗೊಟ್ಟು ನೋಡುತ್ತಾಳೆ ಮತ್ತು ಅದನ್ನು ಅನುಕರಿಸುತ್ತಾಳೆ. ಪಾಶ್ಚಾತ್ಯರ ಅನುಕರಣವನ್ನು ಪೌರ್ವಾತ್ಯರು ಮಾಡುತ್ತಿರುವರು. ಇಲ್ಲಿ ಅನುಕರಣವು ಬುದ್ಧಿಪೂರ್ವಕವಾಗಿ ಆಗುತ್ತಿರುವುದರಿಂದ ಸವಿಕಲ್ಪಕ ಅನುಕರುಣವೆನಿಸುವದು. ಸವಿಕಲ್ಪಕ ಅನುಕರಣವು ಪ್ರಯತ್ನ-ಪ್ರಮಾದದಿಂದ—ಪರೀಕ್ಷಿಸಿ ತಿದ್ದಿಕೊಳ್ಳುವ ರೀತಿಯಿಂದ ಕಲಿಯಲು ಬರುವುದು.

ಶಿಕ್ಷಣದಲ್ಲಿ ಅನುಕರಣಕ್ಕೆ ಒಂದು ಸ್ಥಾನವುಂಟು. ಜಾಣರೂ ಧೈರ್ಯಶಾಲಿಗಳೂ ಆದ ಹುಡುಗರಿಂದ ಮಂದಮತಿಗಳಿಗೂ ಪುಕ್ಕರಿಗೂ ಸಹಾಯವಾಗುತ್ತದೆ; ಸ್ಪರ್ಧೆಯು ಜಾಗ್ರತವಾಗುತ್ತದೆ. ಮಗುವು ತಂದೆ ತಾಯಿಗಳ ಮತ್ತು ಉಪಾಧ್ಯಾಯರ ಅನುಕರಣವನ್ನು ಮಾಡುವುದರಿಂದ ಮೊದಲು ಅವರು ಆದರ್ಶ ಪುರುಷರಾಗಿರಬೇಕು. ಇದಲ್ಲದೆ ಸಾಲೆಯಲ್ಲಿಯ ಶ್ರೇಷ್ಠ ಜನರನ್ನೂ ಪ್ರಮುಖರನ್ನೂ ವರ್ಗದ ಮುಂದಾಳುಗಳನ್ನೂ ಬಾಲಕರು ಸಾಮಾನ್ಯವಾಗಿ ಅನುಕರಣ ಮಾಡುತ್ತಾರೆ. ಶಿಕ್ಷಕನು ಅಂತಹರನ್ನು ಶೋಧಿಸಿ, ಅವರನ್ನು ಸನ್ಮಾರ್ಗಕ್ಕೆ ಹಚ್ಚಬೇಕು. ಏಕಂದರೆ ಇತರರನ್ನು ಅನುಕರಿಸಹಚ್ಚುವವರು ಇವರೇ. ಅನುಕರಣವು ಶೀಲವನ್ನೂ ಮಾರ್ಪಡಿಸುತ್ತದೆ. ಒಳ್ಳೆಯ ಶೀಲವುಳ್ಳವರ ಸಹವಾಸ ಮತ್ತು ಅನುಕರಣಗಳಿಂದ ಮನುಷ್ಯನ ಶೀಲವು ಚೆನ್ನಾಗಿ ಮಾರ್ಪಡುವುದು. ಸಜ್ಜನರ ಸಂಗದಲ್ಲಿದ್ದ ಗಿಳಿಯು ಸಹ ಸಾಧುನುಡಿಗಳನಾಡುವುದು.

ಅನುಕರಣವು ಸ್ವಾತಂತ್ರ್ಯವನ್ನೂ ಸ್ವತಂತ್ರ ಕಲ್ಪನೆಯನ್ನೂ ಕುಂಠಿತ ಮಾಡುತ್ತದೆಂದು ಹಲವರು ಆಕ್ಷೇಪಿಸುವರು. ಆದರೆ ಅವರ ಆಕ್ಷೇಪಣೆಯು ತಪ್ಪಾದುದೂ ನಿರಾಧಾರವಾದುದೂ ಆಗಿರುತ್ತದೆ. ಹೆಸರಾದ ಸಾಹಿತಿಗಳೂ ವೈಜ್ಞಾನಿಕರೂ ರಾಜಕಾರಣಪಟುಗಳೂ ಆರಂಭದಲ್ಲಿ ಪೂರ್ವಜರನ್ನು ಅನುಕರಿಸುತ್ತಾರೆ. ಒಬ್ಬ ಐನಸ್ಟೀನನು ನ್ಯೂಟನ್‌ನಿಗಿಂತ

ಮುಂದುವರಿಯಬೇಕಾದರೆ ಮೊದಲು ನ್ಯೂಟನ್‌ನ ವಿಚಾರಗಳನ್ನು ಅನುಕರಿಸಬೇಕು. ಆದ್ದರಿಂದ ವಿದ್ಯಾರ್ಥಿಗಳು ತಮ್ಮ ಭಾಷಾಶೈಲಿಯನ್ನಾಗಲಿ ಅಥವಾ ಕಲಾಕೃತಿಗಳನ್ನಾಗಲಿ ಉತ್ತಮ ರೀತಿಯಿಂದ ಬೆಳೆಯಿಸಬೇಕಾದರೆ ಮೊದಲು ತಾವು ಶ್ರೇಷ್ಠ ಸಾಹಿತಿಗಳ ಮತ್ತು ಕಲಾನಿಪುಣರ ಮಾದರಿಯ ಭಾಷಾಶೈಲಿಯನ್ನೂ ಕಲಾಕೃತಿಗಳನ್ನೂ ಅನುಕರಿಸಬೇಕು. ಈ ವಿಷಯದಲ್ಲಿ ಮಕ್ಕಳನ್ನು ಪ್ರೋತ್ಸಾಹಿಸಲು ಹಿಂದೆ ಮುಂದೆ ನೋಡುವ ಕಾರಣವಿಲ್ಲ. ಏಕೆಂದರೆ ಅನುಕರಣವು ಸ್ವತಂತ್ರ ಕ್ರಿಯೆಯ ಪೂರ್ವಸಾಧನೆಯು.

(೨) **ಸಹಾನುಭೂತಿ.**— ಸಹಾನುಭೂತಿಯು ಭಾವಾನುಕರಣವು. ಪರರಿಗಾದ ಸುಖದುಃಖಗಳನ್ನು ಕಂಡು ತಾನೂ ಅವರ ಸಂವೇದನೆಯನ್ನು ಎಂದರೆ ಸುಖದುಃಖ ಮೊದಲಾದ ಮನೋಭಾವಗಳನ್ನು ಅನುಭವಿಸುವುದೇ ಸಹಾನುಭೂತಿಯು. ಎರಡನೆಯವರ ಉಲ್ಲಾಸ, ಉತ್ಸಾಹ. ಭಯ, ಚಿಂತೆಯನ್ನು ನಾವು ಸಹಜವಾಗಿ ಸ್ವೀಕರಿಸುತ್ತೇವೆ. ಒಂದು ಚಿಕ್ಕ ಮಗುವು ಅಳತೊಡಗಿದರೆ ಅದರ ಗೆಳೆಯರೂ ಅಳಲಾರಂಭಿಸುವರು. ಅನ್ಯರ ಪ್ರವೃತ್ತ್ಯಾತ್ಮಕ ವರ್ತನವನ್ನು ನೋಡಿ ನಮ್ಮಲ್ಲಿಯೂ ಅದೇ ಪ್ರವೃತ್ತಿಯು ಪ್ರಕಟವಾಗುತ್ತದೆ. ಅನೇಕ ವ್ಯಕ್ತಿಗಳನ್ನು ಕೂಡಿಸಿ ಒಂದು ಸಂಘವನ್ನು ಮಾಡುವ ಸಾಮರ್ಥ್ಯವು ಸಹಾನುಭೂತಿಯಲ್ಲುಂಟು. ಸಾಮೂಹಿಕ ಸಂವೇದನೆಯು ಅತ್ಯಂತ ಶೌರ್ಯದ ಕೆಲಸವನ್ನಾಗಲಿ ಅತ್ಯಂತ ಪಾತಕದ ಕೆಲಸವನ್ನಾಗಲಿ ಮಾಡಿಸಬಲ್ಲದು. ರಾಜಕೀಯ ಚಳವಳಿಗಾರರೂ ಚುನಾವಣೆಯ ಕಾರ್ಯಕರ್ತರೂ ಉಮೇದುವಾರರೂ ವೃತ್ತಪತ್ರಿಕೆಗಳ ಸಂಪಾದಕರೂ ಇದೇ ತತ್ವದ ಆಧಾರದಿಂದಲೇ ತಮ್ಮ ಚಾತುರ್ಯವನ್ನು ತೋರಿಸುತ್ತಾರೆ. ದೇಶವನ್ನಾಗಲಿ ಸೈನ್ಯವನ್ನಾಗಲಿ ಕಾರ್ಯಕ್ಕೆ ಹುರಿದುಂಬಿಸುವುದು ಬಂಧುಪ್ರೇಮವು. ಈ ಬಂಧುಪ್ರೇಮವು ಸಹಾನುಭೂತಿಯ ಇನ್ನೊಂದು ಹೆಸರು.

ಶಾಲೆಯ ಸಾಂಘಿಕ ಜೀವನದಲ್ಲಿ ಸಹಾನುಭೂತಿಗೆ ಮಹತ್ವವುಂಟು. ಸಹಾನುಭೂತಿರಹಿತನು ಶಿಕ್ಷಕನಾಗಲು ಅನರ್ಹನು. ಪಾಂಡಿತ್ಯವುಳ್ಳ ಶಿಕ್ಷಕನಿಗಿಂತ ಪ್ರೇಮ ಮತ್ತು ಸಹಾನುಭೂತಿಯುಳ್ಳ ಶಿಕ್ಷಕನೇ ಮೇಲು. ಸಹಾನುಭೂತಿ ಇಲ್ಲದ ಶಿಕ್ಷಕನು ವಿದ್ಯಾರ್ಥಿಗಳ ದೃಷ್ಟಿಕೋನವನ್ನು

ತಿಳಿದುಕೊಳ್ಳಲಾರನು, ಅಲ್ಲದೆ ಸಮಾಜದಲ್ಲಿದ್ದಾಗ ತಾನು ಹೇಗೆ ವರ್ತಿಸ ಬೇಕೆಂಬುದೂ ಅವನಿಗೆ ತಿಳಿಯದು. ಗುರು-ಶಿಷ್ಯ ಸಂಬಂಧವು ಅನುರಾಗ ದಿಂದ ಪ್ರೇರಿತವಾಗಿರಬೇಕು; ಸಹಾನುಭೂತಿಯಿಂದ ಕೂಡಿದುದಾಗಿರಬೇಕು. ಶಿಕ್ಷಕನು ಬಾಲಕರೊಡನೆ ಬಾಲಕನಾಗಿಯೂ ತರುಣರೊಡನೆ ತರುಣ ನಾಗಿಯೂ ವರ್ತಿಸಬಲ್ಲವನಾಗಿರಬೇಕು. ಎಂದರೆ ಮಾತ್ರ ಅವರು ಅವನ ಅಂಕಿತಕ್ಕೆ ಒಳಪಡುವರು. ಬಾಲಕನ ನಂಬುಗೆಯನ್ನೂ ಗೌರವವನ್ನೂ ಗಳಿಸಲು ಶಿಕ್ಷಕನಿಗೆ ಸಹಾನುಭೂತಿಯ ಸಹಾಯವು ಅತ್ಯಾವಶ್ಯಕವಾಗಿದೆ. ಶಿಕ್ಷಕನು ಹಸನ್ಮುಖಿಯಾಗಿದ್ದರೆ ಬಾಲಕರು ಹಸನ್ಮುಖಿಗಳೂ ಚಿಂತಾಮುಖಿ ಯಾಗಿದ್ದರೆ ಚಿಂತಾಮುಖಿಗಳೂ ಸಮಾಧಾನವೃತ್ತಿಯವನಾಗಿದ್ದರೆ ಸಮಾ ಧಾನವೃತ್ತಿಯವರೂ ಆಗುವರು. ಚಿಂತೆ, ಉಲ್ಲಾಸ, ಸಮಾಧಾನಗಳು ಸಾಂಕ್ರಾಮಿಕವಾಗಿರುವವು. ಶಿಕ್ಷಕನು ಪಾಠದಲ್ಲಿ ಆಸಕ್ತಿಯನ್ನು ತೋರಿದರೆ ವಿದ್ಯಾರ್ಥಿಗಳಲ್ಲಿಯೂ ಅದು ವ್ಯಕ್ತವಾಗುವುದು. 'ಗುರುವಿನಂತೆ ಶಿಷ್ಯ ತಂದೆಯಂತೆ ಮಗ' ಎಂಬ ನಾಣ್ಣುಡಿಯಾದರೂ ಇದೇ ತತ್ವವನ್ನು ಪ್ರತಿಪಾದಿಸುತ್ತದೆ.

(೩) **ಸೂಚನೆ.**— ಒಂದು ಮನಸ್ಸು ಇನ್ನೊಂದು ಮನಸ್ಸಿನ ಮೇಲೆ ಗೊತ್ತಾಗದ ರೀತಿಯಲ್ಲಿ ಕಾರ್ಯ ನಡೆಯಿಸುವುದಕ್ಕೆ ಸೂಚನೆ ಎನ್ನುತ್ತಾರೆ. ನಮ್ಮ ಎಷ್ಟೋ ನಂಬುಗೆಗಳೂ ಆಚರಣೆಗಳೂ ಇದೇ ತತ್ತ್ವವನ್ನು ಅನುಸರಿಸಿರುತ್ತವೆ. ಇನ್ನೊಬ್ಬರು ಒಂದು ವಿಷಯವನ್ನು ನಂಬಿ ದರೆ ನಾವೂ ಅದನ್ನು ನಂಬುತ್ತೇವೆ, ಇನ್ನೊಬ್ಬರು ಒಂದು ಕಾರ್ಯವನ್ನು ಮಾಡಿದರೆ ನಾವೂ ಅದೇ ಕಾರ್ಯವನ್ನು ಮಾಡುತ್ತೇವೆ. ಇದು ಮನಸ್ಸಿನ ಪರಸ್ಪರ ಪರಿಣಾಮವನ್ನುಂಟುಮಾಡುವ ಕೃತಿಯ ದ್ಯೋತಕ. ಕೆಲವೊಂದು ಬಗೆಯ ಚಹಾ, ಕಾಫಿ, ಸಬಕಾರ, ಸಿಗರೇಟು, ಮುಂತಾದ ವಸ್ತುಗಳನ್ನು ಶ್ರೀಮಂತರು, ವಿದ್ಯಾವಂತರು, ಅಥವಾ ಬಹುಜನರು ಉಪಯೋಗಿಸುವ ರೆಂಬುದನ್ನು ಜಾಹೀರಾತುಗಳಲ್ಲಿ ನೋಡಿ ನಾವೂ ಅವನ್ನೇ ಉಪಯೋಗಿಸ ತೊಡಗುತ್ತೇವೆ. ಸಭಿಕರು ಚಪ್ಪಾಳೆಯನ್ನು ಇಕ್ಕಿದರೆ ಭಾಷಣಕಾರನು ಸಭಿಕರು ತನ್ನನ್ನು ಅನುಮೋದಿಸುತ್ತಾರೆಂದು ತಿಳಿಯುತ್ತಾನೆ.

ವ್ಯಕ್ತಿಯ ವರ್ಚಸ್ಸು ಸೂಚನೆಯ ತಿರುಳು. ಗೌರವಸ್ಥರ, ಉಚ್ಚ ಸ್ಥಾನಗಳಲ್ಲಿರುವವರ, ಹಿರಿಯವರ ಮತ್ತು ಅಧಿಕಾರವಾಣಿಯುಳ್ಳವರ ಸೂಚನೆಗಳನ್ನೇ ನಾವು ಸ್ವೀಕರಿಸುತ್ತೇವೆ. ಅಶಕ್ತರಾಗಿದ್ದಾಗ, ವಿಷಯಗಳು ತಿಳಿಯದಿದ್ದಾಗ, ಅನುಭವವು ಕಡಮೆಯಿದ್ದಾಗ, ದೇಹದಿಂದಾಗಲಿ ಮನಸ್ಸಿನಿಂದಾಗಲಿ ಅಸ್ವಸ್ಥರಾಗಿದ್ದಾಗ ನಾವು ಹಿರಿಯರ ಸೂಚನೆಗಳನ್ನು ಕೂಡಲೇ ಸ್ವೀಕರಿಸುತ್ತೇವೆ. ನಮ್ಮಲ್ಲಿರುವ ವಿಧೇಯ ಪ್ರವೃತ್ತಿಯು ಈ ಸೂಚನಾ ಸ್ವೀಕಾರಕ್ಕೆ ಪ್ರೇರಣೆಯನ್ನು ಮಾಡುತ್ತದೆ.

ನಮಗಿಂತ ಶ್ರೇಷ್ಠರಲ್ಲದವರ ಮತ್ತು ನಮ್ಮ ಅನಾದರಕ್ಕೆ ಪಾತ್ರರಾದವರ ಸೂಚನೆಗಳು ನಮ್ಮ ಮನಸ್ಸಿಗೆ ನಾಟಲಾರವು. ನಾವು ಅವರನ್ನು ಹಿಂಬಾಲಿಸುವುದಿಲ್ಲ, ಅವರ ಅಭಿಪ್ರಾಯಕ್ಕೆ ಮನ್ನಣೆಯನ್ನೀಯುವುದಿಲ್ಲ, ಅವರ ಉಪದೇಶವನ್ನು ಸ್ವೀಕರಿಸುವುದಿಲ್ಲ. ಅವರ ಆಜ್ಞೆಗಳನ್ನು ಪಾಲಿಸುವುದಿಲ್ಲ ಮತ್ತು ಅವರ ಮಾತುಗಳನ್ನು ನಂಬುವುದೂ ಇಲ್ಲ

ಸೂಚನೆಯ ಉಪಯೋಗವು ಶಿಕ್ಷಕನಿಗೆ ಗೊತ್ತಿರಬೇಕಾದುದು ಆವಶ್ಯಕ. ಶಿಕ್ಷಕನು ಸೂಚಕ ಪ್ರಶ್ನೆಗಳನ್ನು ಕೇಳಿದರೆ ವಿಚಾರಾತ್ಮಕ ಉತ್ತರಗಳು ವಿದ್ಯಾರ್ಥಿಗಳಿಂದ ಬರುವುದಿಲ್ಲ. ಒಂದು ರಟ್ಟಿಗೆ ಗುಂಡಿಯನ್ನು ಅಂಟಿಸಿ "ಯಾವ ಬಣ್ಣದ ದಾರದಿಂದ ಗುಂಡಿಯನ್ನು ರಟ್ಟಿಗೆ ಹೊಲಿದಿದ್ದಾರೆ?" ಎಂದು ಪ್ರಶ್ನೆ ಕೇಳಿದರೆ ಹಳದಿಯೊ ಹಸರೊ ಬಣ್ಣದ ದಾರದಿಂದ ಹೊಲಿದಿರುತ್ತಾರೆಂಬ ತಪ್ಪು ಉತ್ತರವು ಬರುತ್ತದೆ. ಏಕೆಂದರೆ ನಾವು ಮಾಡಿದ ("ಹೊಲಿದಿದ್ದಾರೆ") ಸೂಚನೆಯನ್ನು ಬಾಲಕರು ಅನುಮಾನಿಸದೆ ಸ್ವೀಕರಿಸುತ್ತಾರೆ. ಶಿಕ್ಷಕನು ಸೂಚಕ ಪ್ರಶ್ನೆಗಳನ್ನು ಕೇಳಬಾರದು. ಅವು ಮಕ್ಕಳ ವಿಚಾರಶಕ್ತಿಗೆ ಅವಕಾಶವನ್ನು ಕೊಡುವುದಿಲ್ಲ. ಒಂದು ದಿವಸ ನಾನು 'ಹಿತೋಪದೇಶ'ದಲ್ಲಿಯ ಕಥೆಯನ್ನು—ಕಾಗೆಯು ಹಾವನ್ನು ಕೊಲ್ಲಿಸಿದ ಕಥೆಯನ್ನು—ಬಾಲಕರ ವರ್ಗಕ್ಕೆ ಹೇಳುತ್ತಿದ್ದೆ. ಕಥೆಯಲ್ಲಿ ಅರಸನ ಆಳುಮಕ್ಕಳು ಸರವನ್ನು ಒಯ್ದ ಕಾಗೆಯನ್ನು ಬಡಿಯಬೇಕೆಂದು ಹೋದವರು ಹಾವನ್ನು ಕೊಲ್ಲುವರು. ಏಕೆಂದರೆ ಕಾಗೆಯು ಆ ಸರವನ್ನು ಹಾವಿನ ಹುತ್ತದಲ್ಲಿ ಚಲ್ಲಿತು. ಕಥೆಯನ್ನು ಹೇಳಿದ ನಂತರ—"ಅರಸನ

ತಿಳುಮಕ್ಕಳು ಕಾಗೆಯನ್ನು ಎಷ್ಟು ಸಾರೆ ಹೊಡೆದರು ?" ಎಂದು ಪ್ರಶ್ನೆ ಮಾಡಿದೆನು. ಬಾಲಕರ ಬುದ್ಧಿ ಚಾತುರ್ಯವನ್ನು ಪರೀಕ್ಷಿಸಬೇಕೆಂದು ಉದ್ದೇಶಪೂರ್ವಕವಾಗಿ ಈ ತಪ್ಪು ಪ್ರಶ್ನೆಯನ್ನು ಕೇಳಲಾಯಿತು. ಪ್ರಶ್ನೆಯನ್ನು ಕೇಳಿದ ಕೂಡಲೆ ಕೆಲವು ಹುಡುಗರು ಆಶ್ಚರ್ಯವನ್ನು ತೋರಿಸಿದರು. "ಕಾಗೆಯನ್ನು ಒಮ್ಮೆ ಹೊಡೆದರು" ಎಂದು ಕಲವರು, "ಎರಡು ಸಾರೆ ಹೊಡೆದರು" ಎಂದು ಕೆಲವರು ಉತ್ತರ ಕೊಟ್ಟರು. ಒಬ್ಬ ಹುಡುಗನು "ಕಾಗೆಯನ್ನು ಹೊಡೆಯಲಿಲ್ಲ, ಹಾವನ್ನು ಹೊಡೆದರು" ಎಂದು ಕೂತಲ್ಲಿಯೇ ಮೆಲ್ಲಗೆ ಅಂದನು. ಅವನು ವಿಚಾರಪರನೆಂದು ಬಗೆದು ಅವನನ್ನು ಎದ್ದು ನಿಲ್ಲಿಸಿ ಮೇಲಿನ ಪ್ರಶ್ನೆಯನ್ನು ಮತ್ತೊಮ್ಮೆ ಕೇಳಲಾಗಿ "ಕಾಗೆಯನ್ನು ಒಮ್ಮೆ ಹೊಡೆದರು" ಎಂದು ತಪ್ಪು ಉತ್ತರ ಹೇಳಿದನು. ಶಿಕ್ಷಕನ ಮಾತಿನಲ್ಲಿ ನಂಬುಗೆ ಇಟ್ಟಿರುವುದರಿಂದಲೇ ಮಕ್ಕಳು ಈ ರೀತಿಯಾಗಿ ಉತ್ತರ ಕೊಡುವರು. ಶಿಕ್ಷಕನು ಸೂಚಕ ಪ್ರಶ್ನೆಗಳನ್ನು ಕೇಳಿದರೆ ಅನೇಕ ಬಾರಿ ಹೀಗೆ ಅನಿಷ್ಟ ಪರಿಣಾಮವಾಗುವುದು ಸಹಜ. ಒಮ್ಮೊಮ್ಮೆ ಸೂಚನೆಯಿಂದ ಹಿತವೂ ಆಗುವುದುಂಟು; ಅಹಿತವೂ ಆಗುವುದುಂಟು. ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿದರೆ ಅವರ ಅಭ್ಯಾಸದ ಫಲಿತಾಂಶವು ಹೆಚ್ಚುವುದು. ಅವರನ್ನು ನಿರುತ್ಸಾಹಗೊಳಿಸಿದರೆ ಅವರಲ್ಲಿ ನಿರಾಶೆಯು ಮೂಡುವುದು, ಬುದ್ಧಿಯ ಬೆಳವಣಿಗೆಯು ಕುಂಠಿತವಾಗುವುದು. ಒಬ್ಬ ಬಾಲಕನಿಗೆ "ನೀನು ದಡ್ಡ, ತುಂಟ, ಹುಡುಗ" ಎಂದು ಪದೇ ಪದೇ ಎನ್ನತೊಡಗಿದರೆ ಅವನು ಹಾಗಾಗುವ ಸಂಭವವೇ ಬಹಳ.

ನೀತಿಬೋಧೆಯಲ್ಲಂತೂ ಸೂಚನೆಯ ಉಪಯೋಗವು ಉತ್ಕೃಷ್ಟ ರೀತಿಯಿಂದಾಗುವುದು. ಪ್ರತ್ಯಕ್ಷವಾಗಿ ಮಾಡಿದ ಉಪದೇಶವು ಬಾಲಕರ ಮನಸ್ಸಿನ ಮೇಲೆ ಅಷ್ಟೊಂದು ಪರಿಣಾಮವನ್ನುಂಟುಮಾಡುವುದಿಲ್ಲ. ಸ್ವಾಮಿನಿಷ್ಠೆ, ಔದಾರ್ಯ, ಧೈರ್ಯ ಇತ್ಯಾದಿ ವಿಷಯಗಳ ಪ್ರವಚನಗಳನ್ನು ಕೇಳಿ ಅವುಗಳ ಬಗೆಗೆ ಬಾಲಕರಲ್ಲಿ ತಿರಸ್ಕಾರವಾಗಲಿ ದುರ್ಲಕ್ಷ್ಯವಾಗಲಿ ಹುಟ್ಟುವ ಸಂಭವವು ಇದೆ. ಪ್ರತ್ಯಕ್ಷವಾಗಿ "ಇಂಥದನ್ನು ಮಾಡು" "ಇಂಥದನ್ನು ಬಿಡು" ಎಂದು ಉಪದೇಶಿಸಿದರೆ ಅನೇಕ ಬಾರಿ ಅದರ ಬಗ್ಗೆ ವಿರೋಧವು ತಲೆದೋರುವ ಸಂಭವವದೆ. ಆದರೆ ನೈತಿಕಾಚರಣೆಯ ಉದಾಹರಣೆಗಳು

ಶಾಲೆಯ ಜೀವನದಲ್ಲಿಯಾಗಲಿ, ಮಹಾಪುರುಷರ ಜೀವನದಲ್ಲಿಯಾಗಲಿ, ಭಾಷೆ--ಇತಿಹಾಸದ ಪಾಠಗಳಲ್ಲಿ ಆಗಲಿ ಅವರ ನಿದರ್ಶನಕ್ಕೆ ಬಂದರೆ ಆ ಮಾತೇ ಬೇರೆಯಾಗುತ್ತದೆ; ಆದರ್ಶ ಪುರುಷರಂತೆ ತಾವೂ ತಮ್ಮ ನಡತೆಯನ್ನು ಇಟ್ಟುಕೊಳ್ಳಬೇಕೆಂಬ ಬಲವಾದ ಇಚ್ಛೆಯು ಮಕ್ಕಳಲ್ಲಿ ಹುಟ್ಟುವುದು.

ಶಿಕ್ಷಕನು ವಯಸ್ಸಿನಲ್ಲಿಯೂ ಅನುಭವದಲ್ಲಿಯೂ ವಿದ್ಯಾರ್ಥಿಗಳಿಗಿಂತ ಹಿರಿಯನು; ಅಧಿಕಾರಸ್ಥಾನದಲ್ಲಿಯೂ ಇರುವವನು. ಆದುದರಿಂದ ಅವನ ಸೂಚನೆಗಳ ಪ್ರಭಾವವು ವಿದ್ಯಾರ್ಥಿಗಳ ಮೇಲೆ ಆಗುವುದು ಖಂಡಿತ. ಶಿಕ್ಷಕನು ವಿದ್ಯಾರ್ಥಿಗಳ ಗೌರವಕ್ಕೆ ಮತ್ತು ನಂಬಿಗೆಗೆ ಪಾತ್ರನಾಗಿದ್ದರಂತೂ ಅವನ ಸೂಚನೆಗಳನ್ನು ಅವರು ತಡೆಯಿಲ್ಲದೆ ಸ್ವೀಕರಿಸುವರು.

ಶಿಕ್ಷಕನು ಸೂಚನೆಯ ಉಪಯೋಗವನ್ನು ಮಾಡಲೇಕೂಡದೆಂದು ಹಲವರ ಅಭಿಪ್ರಾಯವಿದೆ ಆದರೆ ಸೂಚನೆಯಿಲ್ಲದೆ ಸಾಗುವುದು ಅದು ಹೇಗೆ ತಾನೆ ಸಾಧ್ಯ? ಶಿಕ್ಷಕನ ವರ್ಚಸ್ಸು ಮಕ್ಕಳ ಮೇಲೆ ಸಹಜವಾಗಿ ಬಿದ್ದೇಬೀಳುವುದು ಮಕ್ಕಳು ಅನ್ಯರ ಅನಿಷ್ಟ ಸೂಚನೆಗಳಿಗೆ ಒಳಗಾಗುವುದಕ್ಕಿಂತ ತನ್ನ ಗುರುವಿನ ಅಧಿಕಜ್ಞಾನದ ಮತ್ತು ಅನುಭವದ ಲಾಭವನ್ನು ಪಡೆಯುವುದು ವಿಹಿತವಲ್ಲವೆ? ಸರ್ ಟಿ. ಪಿ. ನನ್ನ್ ಅವರು ಹೇಳುವಂತೆ ಶಿಕ್ಷಕನು "ಸತ್ಯಶೋಧನದ ಚಿಕಿತ್ಸಕ ಬುದ್ಧಿಯನ್ನು" ಮತ್ತು "ಮಾನವ ಕುಲವು ತನ್ನ ಅನುಭವದಿಂದ ನಿಷ್ಕರ್ಷಿಸಿದ ಉದಾತ್ತ ಧ್ಯೇಯಗಳನ್ನು" ಸೂಚಿಸಬೇಕು. ಇವುಗಳಲ್ಲದೆ ಬಾಲಕರಲ್ಲಿ ಶಾಲೆಯ ವಿಷಯಕ್ಕೆ ಗೌರವವನ್ನೂ ಅಭಿಮಾನವನ್ನೂ ಹುಟ್ಟಿಸಲು ಕೆಲವು ಸಂಪ್ರದಾಯಗಳು, ಪತ್ರಿಕೆಗಳು, ಸ್ಮಾರಕಗಳು, ಸಂಘಗಳು, ಹಳೆಯ ವಿದ್ಯಾರ್ಥಿಗಳ ಕೂಟಗಳು ಸಹಾಯವಾಗುವುವು.

**(೪) ಪುನರುಕ್ತಿ.**— ಮಕ್ಕಳು ಹಾಡಿದ ಹಾಡನ್ನೇ ಹಾಡುವುದರಲ್ಲಿಯೂ ಕೇಳಿದ ಕತೆಗಳನ್ನೇ ಕೇಳುವುದರಲ್ಲಿಯೂ ಹೇಳಿದ ಕತೆಯನ್ನೇ ಹೇಳುವುದರಲ್ಲಿಯೂ ಆಡಿದ ಆಟವನ್ನೇ ಆಡುವುದರಲ್ಲಿಯೂ ಆಸಕ್ತಿಯನ್ನು ತೋರಿಸುತ್ತಾರೆ. ಹಾಡಿದ್ದೇ ಹಾಡುವುದು, ಮಾಡಿದ್ದೇ ಮಾಡುವುದು ಹುಡುಗರಿಗೆ ಬೇಸರವಾಗುವುದಿಲ್ಲ. ಜೋಕಾಲಿ ಜೀಕುವುದು, ಕಳ್ಳಿಮಳ್ಳಿ,

ಕಸುಟವುಳ್ಳಿ ಎನ್ನುತ್ತ ದುಂಡುಸುತ್ತುವುದು, ಕಣ್ಣುಮುಚ್ಚಾಲೆಯಲ್ಲಿ ಅದಲುಬದಲು ಕಂಚೀಬದಲು ಇವರ ಬಟ್ಟು ಇವರಾರು' ಎಂದು ಪ್ರತಿಯೊಂದು ಬಾರಿಯೂ ಎನ್ನುವುದು ಮತ್ತು ಗಾಯಕರು ಅಂದ ಪಲ್ಲವಿಯನ್ನೇ ಪುನಃ ಪುನಃ ಅನ್ನುವುದು ಮಾನವನ ಪುನರುಕ್ತಿಯ ಪ್ರೀತಿಯನ್ನು ವ್ಯಕ್ತಗೊಳಿಸುತ್ತದೆ. ಇದಕ್ಕೆ **"ಪರಿಪಾಠ ವೃತ್ತಿ"** (Routine Tendency) ಎಂದು ಪ್ರೊ. ನನ್ನ್ ಅವರು ಕರೆಯುತ್ತಾರೆ. ಈ ಪುನರುಕ್ತಿ ಅಥವಾ ಪುನರಾಚರಣ ವೃತ್ತಿಯು ಸೃಷ್ಟಿಯಲ್ಲಿಯೂ ಕಂಡುಬರುತ್ತದೆ. ಋತುಗಳೂ ಹಗಲಿರುಳುಗಳೂ ಚಕ್ರದ ಹಾಗೆ ತಿರುಗುತ್ತಲೇ ಇರುತ್ತವೆ ಈ ವೃತ್ತಿಯು ನಮ್ಮ ದೈನಿಕ ಜೀವನಕಾರ್ಯದಲ್ಲಿಯೂ ಕಂಡುಬರುತ್ತದೆ. ನಿತ್ಯಕರ್ಮಗಳಾದ ಏಳುವುದು, ಮಲಗುವುದು, ಊಟಮಾಡುವುದು, ನಮ್ಮ ನಮ್ಮ ಉದ್ಯೋಗಗಳಲ್ಲಿ ತೊಡಗುವುದು ಪ್ರತಿದಿನವೂ ಸಾಗಿರುತ್ತವೆ. ಪುನರಾಚರಣೆಯು ಜೀವನದ ಒಂದು ಮುಖ್ಯ ಲಕ್ಷಣವೇ ಆಗಿದೆಯೆಂದು ತೋರುತ್ತದೆ.

ಈ ಪುನರಾಚರಣೆ ಅಥವಾ ಪುನರುಕ್ತಿಯು ನಮ್ಮನ್ನು ಇಷ್ಟು ಆಕರ್ಷಿಸಬೇಕಾದರೆ ಅದು ಮನುಷ್ಯನ ಸ್ವಭಾವಸಿದ್ಧವಾದ ಒಂದು ವೃತ್ತಿಯಾಗಿರಬೇಕು. ಪುನರುಕ್ತಿಯಲ್ಲಿ ಮನಃಶಾಸ್ತ್ರದ ಒಂದು ತತ್ತ್ವವು ಅಡಕವಾಗಿದೆ. ಅದು ಕೇವಲ **ಪ್ರಭುತ್ವದ ಆನಂದ.** ಎಂದರೆ ಯಾವ ಕೆಲಸವನ್ನು ನಾವು ಚೆನ್ನಾಗಿ ಮಾಡಬಲ್ಲೆವೊ, ಯಾವುದರಲ್ಲಿ ನಮಗೆ ನೈಪುಣ್ಯವಿರುವುದೊ ಅದನ್ನು ಪುನಃ ಪುನಃ ಪ್ರಕಟಿಸಲು ನಾವು ಹಾತೊರೆಯುವೆವು. ಅವುಗಳ ಮೇಲೆ ನಮ್ಮ ಪ್ರಭುತ್ವವುಂಟು; ಅಧಿಕಾರವುಂಟು. ಅಲ್ಲಿ ಆತ್ಮಪ್ರತಿಷ್ಠಾ ಪ್ರವೃತ್ತಿಗೆ ಅನುವು ದೊರೆಯುತ್ತದೆ. ಆತ್ಮಪ್ರತಿಷ್ಠೆಯನ್ನು ಬಯಸುವಾಗ ನಮಗೆ ಪರಿಚಯವಿದ್ದ ಕಾರ್ಯವನ್ನೇ ಮಾಡುತ್ತೇವೆ, ನಮಗೆ ಗೊತ್ತಿದ್ದ ಆಟವನ್ನೇ ಆಡಲು ಬಯಸುತ್ತೇವೆ.

ಈ 'ಪರಿಪಾಠ' ವೃತ್ತಿಯು ಶಿಕ್ಷಕನಿಗೆ ಅನೇಕ ಪ್ರಸಂಗಗಳಲ್ಲಿ ಅನುಕೂಲವಾಗುವುದು. ಸಾಲೆಯ ಅಥವಾ ವರ್ಗದ ಕೆಲಸವು ಒಂದು ಕ್ರಮವನ್ನು ಅನುಸರಿಸಿ ನಡೆಯುವುದು ಒಳ್ಳೆಯದು. ಸಾಲೆಯಲ್ಲಿ ಶಿಸ್ತನ್ನು

ಕಾಯಲು ಪುನರಾಚರಣ ಪ್ರವೃತ್ತಿಯು ನಮಗೆ ಬಹಳ ಸಹಾಯಕವಾಗು ವುದು. ಶಾಲೆಯಲ್ಲಾಗಲಿ ಸಮಾಜದಲ್ಲಾಗಲಿ ಒಂದು ಸಂಪ್ರದಾಯವನ್ನು ಕಾಯಲಿಕ್ಕೆ ಇದು ನಮಗೆ ನೆರವಾಗುವುದು. ವೇಳಾಪತ್ರಿಕೆಯು ಪ್ರತಿನಿತ್ಯದ ಕಾರ್ಯಕ್ರಮವನ್ನು ಹಾಕಿಕೊಡುತ್ತದೆ. ಕಲಿಸುವ ಕ್ರಮದಲ್ಲಿಯೂ ಈ ವೃತ್ತಿಯು ಶಿಕ್ಷಕನಿಗೆ ನೆರವಾಗುತ್ತದೆ. ಗಣಿತ ಪಾಠದಲ್ಲಿ ರೂಢಿ ಲೆಕ್ಕ ಗಳನ್ನು ಹೇಳುವಾಗ, ಮಗ್ಗಿಗಳನ್ನೂ ಕೋಷ್ಟಕಗಳನ್ನೂ ಸೂತ್ರಗಳನ್ನೂ ವ್ಯಾಕರಣದ ನಿಯಮಗಳನ್ನೂ ಬಾಯಪಾಠ ಮಾಡಿಸುವಾಗ ಮನಃಶಾಸ್ತ್ರದ ಈ ಮಾತು ನಮಗೆ ಆಧಾರಭೂತವಾಗುವದೆಂಬುದನ್ನು ಮರೆಯಲಾಗದು. ಆದರೆ ಕೇವಲ ಮುಖಪಾಠ ಮಾಡಿ ಕಲಿಯುವುದು ಅಂತಿಮ ಧ್ಯೇಯವು ಎಂದು ಭಾವಿಸದೆ ಅದು ಉತ್ಪಾದನ ಕಾರ್ಯಗಳಿಗೆ ತಳಹದಿಯಾದ ದೃಢೀಕರಣವೆಂದು ತಿಳಿಯಬೇಕು. ವಿಷಯವು ತಿಳಿದ ನಂತರ ಬಾಯಪಾಠ ಮಾಡುವುದು ಆಗಬೇಕು.

(೫) **ಆಟ.**— ಮಕ್ಕಳಿಗೆ ಆಹಾರವೂ ನಿದ್ರೆಯೂ ಎಷ್ಟು ಆವಶ್ಯ ಕವೋ ಆಟವೂ ಅಷ್ಟೇ ಆವಶ್ಯಕ. ಸಹಜವಾದ ಈ ಕ್ರೀಡಾವೃತ್ತಿಯನ್ನು ಬೇರೆ ಬೇರೆ ತಜ್ಞರು ಬೇರೆ ಬೇರೆಯಾಗಿ ವಿವರಿಸುತ್ತಾರೆ. ಅವರ ಸ್ಪಷ್ಟೀ ಕರಣವನ್ನು ಒಂದೊಂದನ್ನಾಗಿ ವಿಚಾರಿಸೋಣ :—

(೧) **ಶ್ಲಿಲರ್ ಮತ್ತು ಹರ್ಬರ್ಟ್ ಸ್ಪೆನ್ಸರ್ ಅವರ ಅಧಿಕ-ಉತ್ಸಾಹ ವಾದ.**—ಮಕ್ಕಳು ತಮ್ಮ ಹೊಟ್ಟೆಯ ಸಲುವಾಗಿ ತಾವೇ ದುಡಿ ಯುವುದಿಲ್ಲ ಅವರ ಲಾಲನೆ ಪಾಲನೆಗಳನ್ನು ಅವರ ತಂದೆತಾಯಿಂದಿರೇ ಮಾಡುತ್ತಾರೆ. ಆದ್ದರಿಂದ ಅವರಲ್ಲಿರುವ ಅಧಿಕ ಉತ್ಸಾಹವು ಆಟದಲ್ಲಿ ವ್ಯಯ ವಾಗುತ್ತದೆಂದು ಶ್ಲಿಲರ್ ಮತ್ತು ಹರ್ಬರ್ಟ್ ಅವರು ಹೇಳುತ್ತಾರೆ. ಇದಕ್ಕೆ ಅವರು ಒಂದು ಎಂಜಿನದ ಸಾಮ್ಯವನ್ನು ಕೊಡುತ್ತಾರೆ. ಒಂದು ಎಂಜಿನಿನಲ್ಲಿ ಗಾಡಿಯನ್ನು ಎಳೆಯಲಿಕ್ಕೆ ಬೇಕಾಗುವುದಕ್ಕಿಂತ ಹೆಚ್ಚು ಶಕ್ತಿ ಇದ್ದರೆ ಡ್ರಾಯವರನು ಅದನ್ನು ಬೇರೆ ಕಾರ್ಯದಲ್ಲಿ ಉಪಯೋಗಿಸುತ್ತಾನೆ ಕೆಲಮಟ್ಟಿಗೆ ಇದು ನಿಜವೆಂದು ತೋರಿದರೂ ಸರಿಯಾದ ನಿರೂಪಣೆಯಾಗಿ ರುವುದಿಲ್ಲ. ಮಕ್ಕಳ ಉತ್ಸಾಹವು ಹಾಗೂ ಹೀಗೂ ಹರಣವಾಗದೆ ಅದು

ಆಟದಲ್ಲಿ ಒಂದು ನಿರ್ದಿಷ್ಟ ರೂಪವನ್ನೇ ತಾಳುತ್ತದೆ ಮತ್ತು ದಣಿವು ಆದಾಗಲೂ ಹುಡುಗರು ಏಕೆ ಆಡುವುರೆಂಬುದನ್ನು ಕುರಿತು ಅವರು ಸ್ಪಷ್ಟೀಕರಿಸುವುದಿಲ್ಲ. ಪ್ರೊಫೆಸರ್ ನನ್ ಅವರು ಹೇಳುವಂತೆ ಶಿಶುಗಳ ಚಲ್ಲಾಟ, ಬಾಲಕರ ಓಡಾಟ, ದೊಡ್ಡವರ ಬಯಲಾಟ ಮುಂತಾದ ಯಾವುದೇ ತರದ ಆಟವಾಗಲಿ, ಅದು ಮನುಷ್ಯನನ್ನು ಸುಸಂಸ್ಕೃತನನ್ನಾಗಿ ಮಾಡುತ್ತದೆ. ಆದರೆ ಎಂಜಿನವು ತನ್ನ ಶಕ್ತಿಯನ್ನು ವ್ಯಯ ಮಾಡುತ್ತಲೇ ಹೋದರೆ ಅದು ಒಳ್ಳೆಯ ಯಂತ್ರವಾಗದೆ ಸವಕಳಿಯನ್ನು ಹೊಂದಿ ನಿರುಪಯೋಗಿ ಆಗುವುದು. ಮನುಷ್ಯನ ಮಾತು ಹಾಗಲ್ಲ. ಅವನು ಆಟದಲ್ಲಿ ತನ್ನ ಶಕ್ತಿಯನ್ನು ವ್ಯಯಮಾಡಿದ ಹಾಗೆಲ್ಲ ಅವನ ದೇಹಸೌಷ್ಠವವು ಹೆಚ್ಚುತ್ತದೆ, ನೀತಿಯು ಮಾರ್ಪಡುತ್ತದೆ.

(೨) **ಕಾರ್ಲ್ ಗ್ರೂಸ್ ಅವರ ರೂಢಿ ವಾದ.**—ಮೇಲ್ತರಗತಿಯ ಪ್ರಾಣಿಗಳು ತಮ್ಮ ಪ್ರೌಢಜೀವನದ ಚಟುವಟಿಕೆಗಳನ್ನು ಮುಂಚೆಯೆ ಅನುಭವಿಸುತ್ತವೆಂದು ಕಾರ್ಲ್ ಗ್ರೂಸ್‌ನ ಸಿದ್ಧಾಂತ. ಬೆಕ್ಕು ಇಲಿಯನ್ನು ಹಿಡಿಯುವುದನ್ನೂ ನಾಯಿ ಬೇಟೆಯಾಡುವುದನ್ನೂ ಅವು ಮರಿಯಾಗಿದ್ದಾಗಲೆ ಆಟವಾಡುತ್ತ ಕಲಿಯುತ್ತವೆ. ಇದರಂತೆಯೆ ಹುಡುಗನು ಸಿಪಾಯಿ ಆಗುವ ಆಟ, ಹುಡುಗಿಯ ಗೊಂಬೆಯ ಆಟ, ಮೊದಲಾದವು ಅವರ ಭಾವಿ ಜೀವನದ ಪೂರ್ವಸಾಧನಗಳು ಎಂದು ಗ್ರೂಸ್‌ನು ಹೇಳುತ್ತಾನೆ.

ಈ ವಾದವು ಹೆಚ್ಚು ಸಮಂಜಸವಾದುದೆಂದು ತೋರುತ್ತದೆ. ಇದರಿಂದ ಶಿಕ್ಷಣಕ್ಕೆ ಹೆಚ್ಚು ಪ್ರಯೋಜನವಾಗುವುದು. ಉಚ್ಚವರ್ಗದ ಪ್ರಾಣಿಗಳು ಹುಟ್ಟಿದಂದಿನಿಂದ ಕೆಲವೊಂದು ಕಾಲದ ವರಗೆ ಪರಾವಲಂಬಿಗಳಾಗಿರುತ್ತವೆ. ಈ ಅಪಕ್ವ ಅವಧಿಯಲ್ಲಿ ಅವು ಆಟವಾಡುತ್ತ ಅನುಭವವನ್ನು ಪಡೆಯುತ್ತವೆ. ಆದುದರಿಂದ ಆಟವು ಸೃಷ್ಟಿಯ ಶಿಕ್ಷಣಪದ್ಧತಿಯು ಆದರೆ ಇದಕ್ಕೊಂದು ಆಕ್ಷೇಪವಿದೆ—ಆಟವು ಭಾವಿ ಬಾಳಿನ ಪೂರ್ವರೂಢಿಯಾಗಿದ್ದರೆ ಮಗುವು ತಾನು ದೊಡ್ಡವನಾದಾಗ ಕೈಕೊಳ್ಳಬಹುದಾದ ವ್ಯವಸಾಯ ಜೀವನಕ್ಕೆ ಸಂಬಂಧವಿಲ್ಲದ ಅನೇಕ ತರದ ಆಟಗಳನ್ನೇಕೆ ಆಡುವುದು ? ಮಗುವು ಬೇರೆ ಬೇರೆ ಉದ್ಯೋಗಗಳನ್ನು ಪ್ರಯತ್ನಪಟ್ಟು

ಪ್ರಯೋಗವಮಾಡಿ ನೋಡುತ್ತ ಇರುತ್ತವೆಂದು ಕಾರ್ಲ್ ಗ್ರೂಸ್‌ನು ಇದಕ್ಕೆ ಸಮಾಧಾನವನ್ನು ಹೇಳುತ್ತಾನೆ. ಈ ಸಮರ್ಥನೆಯು ಯೋಗ್ಯವಾದುದು ಅಲ್ಲವೆಂದು ಸ್ಟ್ಯಾನ್ಲೀ ಹಾಲ್ ಎಂಬವನು ಅಭಿಪ್ರಾಯಪಡುತ್ತಾನೆ.

**(೩) ಸ್ಟ್ಯಾನ್ಲೀ ಹಾಲ್ ಅವರ ಸ್ಮಾರಕ ವಾದ.**— ಆಟವು ಮುನ್ನೋಟವಲ್ಲ, ಹಿನ್ನೋಟವು. ಎಂದರೆ ಆಟವು ಭಾವಿ ಜೀವನದ ಮುಂಬೆಳಕಾಗಿರುವುದಿಲ್ಲ. ಹಿಂದಿನ ಜೀವನದ ಸ್ಮಾರಕವಾಗಿದೆಯೆಂದು ಸ್ಟ್ಯಾನ್ಲೀ ಹಾಲ್‌ನ ಅಭಿಪ್ರಾಯ. ಬೆಕ್ಕಿನ ಮರಿಯ ಆಟಗಳು, ನಾಯಿಕುನ್ನಿಯ ಆಟಗಳು ಪ್ರವೃತ್ತಿಪರವಾಗಿರುವುದರಿಂದ ಅವು ಆನುವಂಶಿಕವಾಗಿರುತ್ತವೆಂದೇ ಹೇಳಬಹುದು. ಮಕ್ಕಳು ಕಣ್ಣುಮುಚ್ಚಣಿಕೆಯ ಆಟ ಆಡುವುದು, ಮುಟ್ಟಾಟ ಆಡುವುದು, ಜೇಪಿ ಆಡುವುದು, ಕಲ್ಲೆಸೆಯುವುದು, ಮೀನ ಹಿಡಿಯುವುದು, ಮನೆ ಕಟ್ಟುವುದು, ಗವಿ ಗುಹೆಗಳನ್ನು ಕುರಿತು ತಿರುಗಾಡುವುದು ಮೊದಲಾದುವೆಲ್ಲವು ನಮ್ಮ ಅಸಂಸ್ಕೃತ ಪೂರ್ವಜರ ಜೀವನಕಾರ್ಯಗಳನ್ನು ಸ್ಮರಣೆಗೆ ತಂದುಕೊಡುತ್ತವೆ. ಆಟಗಳಲ್ಲಿ ಮಕ್ಕಳು ಮಾನವವಂಶದ ಯೌವನಾವಸ್ಥೆಯನ್ನು ಪುನಃ ಆಚರಿಸುತ್ತಾರೆ. ಆಟದಲ್ಲಿ ಪ್ರಾಚೀನ ಮನುಷ್ಯನ ಕೆಲವು ಚಟುವಟಿಕೆಗಳನ್ನು ಸಿಂಹಾವಲೋಕನ ಮಾಡುತ್ತೇವೆಂಬುದೇ ಈ ವಾದವು ಪ್ರತಿಪಾದಿಸುವ ವಿಷಯವಾಗಿದೆ.

**(೪) ರಾಸ್ಸ್ ಅವರ ರೇಚನ ವಾದ.**— ಪೂರ್ವದಲ್ಲಿ ಗ್ರೀಕ ತತ್ವಜ್ಞಾನಿಯಾದ ಅರಿಸ್ಟಾಟಲ್‌ನು ರೇಚನ ವಾದವನ್ನು ಸಾಹಿತ್ಯಕ್ಕೆ ಅನ್ವಯಿಸಿ ವಿವರಿಸಿದ್ದಾನೆ. ಹೊಸ ಮನಃಶಾಸ್ತ್ರವನ್ನು ಅನುಸರಿಸುವ ರಾಸ್ಸ್ ಮೊದಲಾದವರು ಆಟವನ್ನು ಕುರಿತು ವಿವೇಚಿಸುವಾಗ ಈ ವಾದವನ್ನೇ ಪುರಸ್ಕರಿಸುತ್ತಾರೆ. ಆಟದಿಂದ ಭಾವ ಪರಿಶುದ್ಧಿಯಾಗುತ್ತದೆಂದು ಇವರ ಮತವಿರುವುದು. ಹಲವು ಪ್ರವೃತ್ತಿಗಳಿಗೂ ಮನೋಭಾವಗಳಿಗೂ ಅವು ಪ್ರಕಟವಾಗಲು ಅನುವು ದೊರೆಯದ ಮೂಲಕ ಮನದಲ್ಲಿಯೇ ಹುದುಗಿಕೊಂಡಿರುತ್ತವೆ. ಸುಸಂಸ್ಕೃತ ಜೀವನದಲ್ಲಿ ಯುದ್ಧಪ್ರವೃತ್ತಿಗೆ ಸಾಕಷ್ಟು ಸ್ಥಾನವಿರುವುದಿಲ್ಲ. ಆದುದರಿಂದ ನಾಗರಿಕನಾದವನು ಯುದ್ಧ

ಪ್ರವೃತ್ತಿಗೆ ಸಾಕಷ್ಟು ಸ್ಥಾನವಿರುವುದಿಲ್ಲ. ಆದುದರಿಂದ ನಾಗರಿಕನಾದವನು ಯುದ್ಧವನ್ನು ಆಟದಲ್ಲಿ ಆಡುತ್ತಾನೆ. (ಇಂದಿನ ' ಮಹಾಯುದ್ಧ " ಕ್ಕೂ ಆಟವೆನ್ನಬಹುದೆ ?) ಪ್ರತಿಯೊಂದು ಆಟವೂ ಒಂದು ಕೃತ್ರಿಮ ಯುದ್ಧವೇ ಆಗಿದೆ. ಹತ್ತಿಕ್ಕಿದ ಪ್ರವೃತ್ತಿಗಳು ಆಟದಲ್ಲಿ ಹೊರಹೊಮ್ಮುತ್ತವೆ. ಆಟವು ವಿಮೋಚಕವು. ಕೃತಕ ನಂಬಿಗೆಯ ಆಟದಲ್ಲಿ ಈ ಮಾತು ಹೆಚ್ಚು ಸ್ಪಷ್ಟವಾಗುತ್ತದೆ.

ಸಮಾರೋಪ :— ಮೇಲೆ ವಿವರಿಸಿದ ವಿವಿಧ ವಾದಗಳು ಪರಸ್ಪರ ಪೂರಕವಾಗಿವೆ, ಒಂದಕ್ಕೊಂದು ವಿರೋಧವಾಗಿರುವುದಿಲ್ಲ. ಅಧಿಕಶಕ್ತಿಯು ಶಾರೀರಿಕವಾಗಿರದೆ ಮಾನಸಿಕವೂ ಆಗಿದೆಯೆಂದು ಬಗೆದಲ್ಲಿ ಅದು ಆಟದಲ್ಲಿ ವಿಮೋಚನ ಹೊಂದುವುದು ಅಥವಾ ಶುದ್ಧವಾಗುವುದು. ಆಟವು ಆನುವಂಶಿಕ ಪ್ರವೃತ್ತಿಗಳ ಶುದ್ಧೀಕರಣವೆಂದು ತಿಳಿದಲ್ಲಿ ಅದು ಪೂರ್ವದೇಹಗಳ ಸ್ಮಾರಕವಾಗುವುದು ಪ್ರವೃತ್ತಿಗಳ ಶುದ್ಧೀಕರಣವು ಪ್ರೌಢದೆಸೆಯಲ್ಲಿಯ ಸುಸಂಸ್ಕೃತ ಜೀವನದ ಸನ್ನಾಹವೆಂದು ಅರಿತಲ್ಲಿ ಅದು ಭಾವಿ ಕಾರ್ಯಗಳ ಪೂರ್ವಚಿಹ್ನವೆಂದು ಎನಿಸುವುದು. ಹೀಗೆ ಈ ಪ್ರತಿಯೊಂದು ವಾದವಲ್ಲಿಯೂ ಅಲ್ಪಸ್ವಲ್ಪ ಸತ್ಯಾಂಶವು ಇರುತ್ತದೆ. " ಆಟವು ಸೃಷ್ಟಿಯ ಶಿಕ್ಷಣಪದ್ಧತಿಯು " ಎಂಬ ಕಾರ್ಲ್ ಗ್ರೂಸ್‌ನ ಮತವನ್ನು ಉಳಿದವರ ತತ್ವಗಳೂ ಪುಷ್ಟೀಕರಿಸುತ್ತವೆ ಅದನ್ನು ಶಿಕ್ಷಕನು ಅಂಗೀಕರಿಸಬೇಕು. ಏಕೆಂದರೆ ಶಿಕ್ಷಣವು ಮನುಷ್ಯನ ಗತವೈಭವವನ್ನು ರಕ್ಷಿಸಬೇಕು. ಶಿಕ್ಷಣದ ಪ್ರಧಾನ ಕೆಲಸವು ಪ್ರವೃತ್ತಿಗಳನ್ನು ಉದಾತ್ತಗೊಳಿಸುವುದೂ ಮತ್ತು ಅಂತರ್ಗತ ಶಕ್ತಿಗಳನ್ನು ಸನ್ಮಾರ್ಗಕ್ಕೆ ತಿರುಗಿಸುವುದೂ ಆಗಿರುತ್ತದೆ. ' ಆಟದ ತಿರುಳನ್ನು ಕಂಡು ಹಿಡಿದರೆ ಶಿಕ್ಷಣದ ಎಲ್ಲ ಸಮಸ್ಯೆಗಳನ್ನು ಕಂಡುಹಿಡಿದು ಅವನ್ನು ಬಿಡಿಸಿದಂತಾಗುವುದು ' ಎಂದು ನನ್ನ್ ಅವರು ಹೇಳುವುದು ನಿಜವೆನಿಸದೆ ಇರಲಾರದು. **ಮಕ್ಕಳಿಗೆ ಆಟವೇ ಪಾಠವಾಗಿರಬೇಕು, ಪಾಠವೇ ಆಟವಾಗಿರಬೇಕು.**

**ಕೃತಕ ನಂಬಿಗೆ.**— ಮಗುವು ಕೆಲವು ಪ್ರಸಂಗಗಳಲ್ಲಿ ಕಾಲ್ಪನಿಕ ಪಾತ್ರಗಳನ್ನು ನಿಜವಾಗಿ ನಂಬುತ್ತದೆ. ಇದಕ್ಕೆ ಕೃತಕ ನಂಬಿಗೆ ಅಥವಾ

ನಟನೆ ಎಂದು ಹೆಸರು. ಮಕ್ಕಳು ಆಟವಾಡುವಾಗ ಶಿಕ್ಷಕ, ವಕೀಲ, ಗೌಳಿಗ, ಪೋಲೀಸ ಮೊದಲಾದವರ ಪಾತ್ರಗಳನ್ನು ವಹಿಸುತ್ತಾರೆ. ಒಂದು ಚಿಕ್ಕ ಮಗುವು 'ಲೆಪ್ ಲೇಟ್' ಅನ್ನುತ್ತ ಕೂಚು ಮಾಡುವುದನ್ನು ನಾವು ನೋಡುತ್ತೇವೆ. ಇದು ಪೋಲೀಸನ ಅನುಕರಣವೆಂದು ಹೇಳುವುದು ಸ್ಥೂಲವಿಚಾರವಾಗುತ್ತದೆ. ಪ್ರೌಢ ಜೀವನದ ಪೂರ್ವಸನ್ನಾಹವೆಂದು ಹೇಳುವುದೂ ಅಷ್ಟೊಂದು ಸಮಂಜಸವಾಗದು. ಆದರೆ ರೇಚನ ವಾದವು ಇಲ್ಲಿ ಹೆಚ್ಚು ಅನ್ವಯಿಸುವುದೆಂದು ನಮಗೆ ಮನವರಿಕೆಯಾಗುವುದು ತನ್ನ ಎಲ್ಲ ಪ್ರವೃತ್ತಿಗಳನ್ನು, ಮುಖ್ಯವಾಗಿ ತನ್ನ ಆತ್ಮಪ್ರತಿಷ್ಠಾ-ಪ್ರವೃತ್ತಿಯನ್ನು ವ್ಯಕ್ತಗೊಳಿಸಲು ಆವನ ನಿತ್ಯದ ಪರಿಸ್ಥಿತಿಯು ಮಗುವಿಗೆ ಅನುಕೂಲವಾಗಿರುವುದಿಲ್ಲ. ಭೌತಿಕ ಮತ್ತು ಸಾಮಾಜಿಕ ಸನ್ನಿವೇಶದ ಮೇಲೆ ತನ್ನ ಪ್ರಭುತ್ವವನ್ನು ಸಾಧಿಸಲು ಮಗುವಿಗೆ ಶಕ್ತಿ ಸಾಲದು. ಆದ್ದರಿಂದ ಮಗುವು ಬಲಿಷ್ಠ ಜಗತ್ತಿಗೆ ಶರಣು ಹೊಡೆದು ತನ್ನ ಕಲ್ಪನಾಸಾಮ್ರಾಜ್ಯದಲ್ಲಿ ತಲ್ಲೀನವಾಗುತ್ತದೆ. ಈ ಕೃತಕ ನಂಬುಗೆಯಲ್ಲಿ ಅವನೊಳಗೆ ಹುದುಗಿಕೊಂಡಿದ್ದ ಪ್ರವೃತ್ತಿಗಳು ಬಿಡುಗಡೆಯನ್ನು ಹೊಂದುತ್ತವೆ. ದೊಡ್ಡವರ ಮೇಲೆ ಅಧಿಕಾರ ನಡೆಯಿಸಿ ಅವರಿಂದ "ಲೆಪ್ ಲೇಟ್" ಮಾಡಿಸುವುದು ಚಿಕ್ಕ ಮಗುವಿಗೆ ಅಸಾಧ್ಯವಾದ ಮಾತು. ಆದುದರಿಂದ ಅಧಿಕಾರ ಲಾಲಸೆಯನ್ನು ಅವನು ತನ್ನಲ್ಲಿಯೇ ಕಂಡುಕೊಳ್ಳುವನು. "ಲೆಪ್ ಲೇಟ್" ಆಟದಲ್ಲಿ ಆಜ್ಞೆ ಕೊಡುವವನೂ ಅವನೆ, ಆಜ್ಞೆ ಪಾಲಿಸುವವನೂ ಅವನೆ. ಸ್ವಪ್ರತಿಷ್ಠೆಯು ಅವನ ಈ ಆಟದಲ್ಲಿ ವಿಮೋಚನಗೊಳ್ಳುತ್ತದೆ. ಈ ತೆರನಾದ ಕೃತಕನಂಬುಗೆಯ ಆಟಗಳಲ್ಲಿ ಮಕ್ಕಳ ಭಾವಶುದ್ಧಿಯು ಆಗುತ್ತದೆ.

ಮಗುವು ತನ್ನ ಪ್ರತ್ಯಾತ್ಮ (Alter Ego) ನನ್ನೂ ಕಾಲ್ಪನಿಕ ಮಿತ್ರರನ್ನೂ ವೈರಿಗಳನ್ನೂ ನಿರ್ಮಿಸುವುದು ಕೃತಕ ನಂಬುಗೆಯ ಒಂದು ಆಶ್ಚರ್ಯಕಾರಕ ಸಂಗತಿಯು. ನೇತಾಜಿಯು ಚಿಕ್ಕಂದಿನಲ್ಲಿ ಡಬ್ಬಗಳ್ಳಿಯ ಗಿಡವನ್ನು ಕಡಿಯುವಾಗ ತಾನು ವೈರಿಯನ್ನು ಕೊಲ್ಲುತ್ತಿದ್ದೇನೆ ಎಂದು ಭಾವಿಸುತ್ತಿದ್ದನು ಮತ್ತು ಆಗ "ಹರಹರ ಮಹಾದೇವ" ಎಂದು ಯುದ್ಧ ಘೋಷವನ್ನು ಮಾಡುತ್ತಿದ್ದನು. ಇಂಥ ಆಟಗಳಿಂದ ಅವನಲ್ಲಿ ಸುಪ್ತವಾಗಿದ್ದ

ಯುದ್ಧಪ್ರವೃತ್ತಿಯೂ ಭಾವೋದ್ರೇಕಗಳೂ ವಿಮೋಚನೆಗೊಳ್ಳುತ್ತಿದ್ದವು. ಮಗುವಿನ ಇಚ್ಛೆಯು ಈಡೇರದಿದ್ದಲ್ಲಿ ತನ್ನ ಉದ್ರೇಕಗಳನ್ನು ಇಂಥ ಭ್ರಮೆಯಲ್ಲಿ ಅದು ವ್ಯಯಮಾಡುತ್ತದೆ. ಸಾಹಸದ ಕತೆಗಳನ್ನು, ಯಕ್ಷಿಣಿಯ ಕತೆಗಳನ್ನು ಆಸಕ್ತಿಯಿಂದ ಕೇಳುತ್ತದೆ. ಯಾಕೆಂದರೆ ಈ ಕತೆಗಳಲ್ಲಿಯ ಕಾಲ್ಪನಿಕ ಪಾತ್ರಗಳನ್ನು ಅದು ತನ್ನ ಸುತ್ತುಮುತ್ತಲಿನ ಜೀವನದ ಪಾತ್ರಗಳಿಗೆ ಹೋಲಿಸುತ್ತದೆ. ಚಂದ್ರಹಾಸ, ಧ್ರುವ, ಪ್ರಹ್ಲಾದ, ಅಭಿಮನ್ಯು, ಲವಕುಶ, ಉದ್ದಾಲಕ, ಮೊದಲಾದ ಬಾಲವೀರರ ಕತೆಗಳನ್ನು ಕೇಳುವುದರಲ್ಲಿ ಮಕ್ಕಳು ಆಸಕ್ತಿಯನ್ನು ತೋರಿಸುತ್ತಾರೆ. ಭೀಮನು ಬಕಾಸುರನನ್ನು ಕೊಂದ ಕತೆ, ಕೋಳೂರು ಕೊಡಗೂಸಿನ ಕತೆ ಮುಂತಾದ ಕತೆಗಳನ್ನು ಕೇಳುವುದರಿಂದ ಮಗುವಿನ ಭಾವಶುದ್ಧಿಯಾಗುತ್ತದೆ. ಏಕೆಂದರೆ ಕಥಾನಾಯಕನು ಅಥವಾ ನಾಯಕಳು ತಾನೇ ಎಂದು ಮಗುವು ಭಾವಿಸುತ್ತದೆ ಮತ್ತು ನಾಯಕನಿಗೆ ಅಥವಾ ನಾಯಕಳಿಗೆ ಉಂಟಾದ ಸುಖದುಃಖಗಳನ್ನು ತಾನೂ ಅನುಭವಿಸುತ್ತದೆ.

**ಆಟ ಮತ್ತು ಕೆಲಸ.**— ಆಟ ಮತ್ತು ಕೆಲಸದಲ್ಲಿಯ ವ್ಯತ್ಯಾಸವು ಅವುಗಳ ಕಾರ್ಯದಲ್ಲಿಲ್ಲ, ಆದರೆ ಮಾಡುವವನ ಮನೋಭಾವದಲ್ಲಿದೆ. ಯೋಗ್ಯ ಶಿಕ್ಷಕನೇ ಆಗಲಿ, ನಟನೇ ಆಗಲಿ, ವೈದ್ಯನೇ ಆಗಲಿ ತನ್ನ ಕಾಯಕವನ್ನು ಅತ್ಯಂತ ಉತ್ಸಾಹದಿಂದ ಮಾಡಿದರೆ ಅದು ಅವನಿಗೆ ಆನಂದವೆನಿಸುವ ಆಟವಾಗುತ್ತದೆ; ಅದನ್ನೇ ನಿರುತ್ಸಾಹದಿಂದ ಮಾಡಿದರೆ ಕಠಿನವೆನಿಸುವ ಕೆಲಸವಾಗುತ್ತದೆ. ಬಾಲಕನನ್ನು ಒತ್ತಾಯದಿಂದ ಆಟಕ್ಕೆ ಹಚ್ಚಿದರೆ ಆ ಆಟವು ಅವನಿಗೆ ಕೆಲಸವಾಗುತ್ತದೆ; ತಾನೇ ಪ್ರೀತಿಯಿಂದ ಕಲಿಯಲಾರಂಭಿಸಿದರೆ ಅಭ್ಯಾಸವು ಆಟವಾಗುತ್ತದೆ. ಬರೆಯಲು ಅದೆಷ್ಟು ಉಬ್ಬಿಸಿದರೂ ಒತ್ತಾಯಪಡಿಸಿದರೂ ಐದು ವರ್ಷದ ನನ್ನ ಮಗುವು ಮೊನ್ನೆ ತಾನೇ ಸ್ವಯಂಸ್ಫೂರ್ತಿಯಿಂದ ಬರೆಯಲಿಕ್ಕೆ ಇಚ್ಛಿಸಿದನು. ಆದರೆ ಅವನಿಗೆ ಬೇಕಾದ ಬಿಳೀ ಪೆನ್ಸಿಲ್ಲು ಇಲ್ಲದ್ದರಿಂದ ಅದನ್ನು ಬೇಡಿ ಅಳಹತ್ತಿದನು; ಪೆನ್ಸಿಲನ್ನು ಕೊಡಿಸಿದ ಮೇಲೆ ತೂಕಡಿಸುತ್ತಿರುವಾಗಲೂ ಬರೆಯುವುದನ್ನು ಬಿಡಲಿಲ್ಲ. ಇಂತಹ ಅನೇಕ ಉದಾಹರಣೆಗಳನ್ನು ಕೊಡಬಹುದು ಯಾವುದಾದರೊಂದು ಅಂಜಿಕೆಯಿಂದ ಇಲ್ಲವೆ ಒತ್ತಾಯ

ಪ್ರವೃತ್ತಿಗೆ ನಾಕಷ್ಟು ಸ್ಥಾನವಿರುವುದಿಲ್ಲ. ಆದುದರಿಂದ ನಾಗರಿಕನಾದವನು ಯುದ್ಧವನ್ನು ಆಟದಲ್ಲಿ ಆಡುತ್ತಾನೆ. (ಇಂದಿನ ' ಮಹಾಯುದ್ಧ " ಕ್ಕೂ ಆಟವೆನ್ನಬಹುದೆ ?) ಪ್ರತಿಯೊಂದು ಆಟವೂ ಒಂದು ಕೃತ್ರಿಮ ಯುದ್ಧವೇ ಆಗಿದೆ. ಹತ್ತಿಕ್ಕಿದ ಪ್ರವೃತ್ತಿಗಳು ಆಟದಲ್ಲಿ ಹೊರಹೊಮ್ಮುತ್ತವೆ. ಆಟವು ವಿಮೋಚಕವು. ಕೃತಕ ನಂಬಿಗೆಯ ಆಟದಲ್ಲಿ ಈ ಮಾತು ಹೆಚ್ಚು ಸ್ಪಷ್ಟವಾಗುತ್ತದೆ.

ಸಮಾರೋಪ :— ಮೇಲೆ ವಿವರಿಸಿದ ವಿವಿಧ ವಾದಗಳು ಪರಸ್ಪರ ಪೂರಕವಾಗಿವೆ, ಒಂದಕ್ಕೊಂದು ವಿರೋಧವಾಗಿರುವುದಿಲ್ಲ. ಅಧಿಕಶಕ್ತಿಯು ಶಾರೀರಿಕವಾಗಿರದೆ ಮಾನಸಿಕವೂ ಆಗಿದೆಯೆಂದು ಬಗೆದಲ್ಲಿ ಅದು ಆಟದಲ್ಲಿ ವಿಮೋಚನ ಹೊಂದುವುದು ಅಥವಾ ಶುದ್ಧವಾಗುವುದು. ಆಟವು ಆನುವಂಶಿಕ ಪ್ರವೃತ್ತಿಗಳ ಶುದ್ಧೀಕರಣವೆಂದು ತಿಳಿದಲ್ಲಿ ಅದು ಪೂರ್ವದೇಹಗಳ ಸ್ಮಾರಕವಾಗುವುದು ಪ್ರವೃತ್ತಿಗಳ ಶುದ್ಧೀಕರಣವು ಪ್ರೌಢದೆಸೆಯಲ್ಲಿಯ ಸುಸಂಸ್ಕೃತ ಜೀವನದ ಸನ್ನಾಹವೆಂದು ಅರಿತಲ್ಲಿ ಅದು ಭಾವಿ ಕಾರ್ಯಗಳ ಪೂರ್ವಚಿಹ್ನವೆಂದು ಎನಿಸುವುದು. ಹೀಗೆ ಈ ಪ್ರತಿಯೊಂದು ವಾದದಲ್ಲಿಯೂ ಅಲ್ಪಸ್ವಲ್ಪ ಸತ್ಯಾಂಶವು ಇರುತ್ತದೆ. " ಆಟವು ಸೃಷ್ಟಿಯ ಶಿಕ್ಷಣಪದ್ಧತಿಯು " ಎಂಬ ಕಾರ್ಲ್ ಗ್ರೂಸ್‌ನ ಮತವನ್ನು ಉಳಿದವರ ತತ್ವಗಳೂ ಪುಷ್ಟೀಕರಿಸುತ್ತವೆ. ಅದನ್ನು ಶಿಕ್ಷಕನು ಅಂಗೀಕರಿಸಬೇಕು. ಏಕೆಂದರೆ ಶಿಕ್ಷಣವು ಮನುಷ್ಯನ ಗತವೈಭವವನ್ನು ರಕ್ಷಿಸಬೇಕು. ಶಿಕ್ಷಣದ ಪ್ರಧಾನ ಕೆಲಸವು ಪ್ರವೃತ್ತಿಗಳನ್ನು ಉದಾತ್ತಗೊಳಿಸುವುದೂ ಮತ್ತು ಅಂತರ್ಗತ ಶಕ್ತಿಗಳನ್ನು ಸನ್ಮಾರ್ಗಕ್ಕೆ ತಿರುಗಿಸುವುದೂ ಆಗಿರುತ್ತದೆ. ' ಆಟದ ತಿರುಳನ್ನು ಕಂಡುಹಿಡಿದರೆ ಶಿಕ್ಷಣದ ಎಲ್ಲ ಸಮಸ್ಯೆಗಳನ್ನು ಕಂಡುಹಿಡಿದು ಅವನ್ನು ಬಿಡಿಸಿದಂತಾಗುವುದು ' ಎಂದು ನನ್ ಅವರು ಹೇಳುವುದು ನಿಜವೆನಿಸದೆ ಇರಲಾರದು. **ಮಕ್ಕಳಿಗೆ ಆಟವೇ ಪಾಠವಾಗಿರಬೇಕು, ಪಾಠವೇ ಆಟವಾಗಿರಬೇಕು.**

**ಕೃತಕ ನಂಬಿಗೆ.**— ಮಗುವು ಕೆಲವು ಪ್ರಸಂಗಗಳಲ್ಲಿ ಕಾಲ್ಪನಿಕ ಪಾತ್ರಗಳನ್ನು ನಿಜವಾಗಿ ನಂಬುತ್ತದೆ. ಇದಕ್ಕೆ ಕೃತಕ ನಂಬಿಗೆ ಅಥವಾ

ವಿಶ್ವಭಾರತಿಯ ಶಿಕ್ಷಣ ಪದ್ಧತಿ, ಮುಂತಾದವುಗಳಿಗೆ ಕ್ರೀಡಾ ಪದ್ಧತಿಯ ತತ್ವಗಳೇ ಮೂಲಾಧಾರವಾಗಿವೆ. ಇವೆಲ್ಲವೂ ಶಿಕ್ಷಣದಲ್ಲಿ 'ಶಿಶುಪ್ರಾಧಾನ್ಯ' ಮಾರ್ಗವನ್ನು—ಅಂದರೆ, ಸರ್ವ ಶಿಕ್ಷಣ ಕಾರ್ಯವನ್ನು ಮಗುವಿನ ದೃಷ್ಟಿಯಿಂದ ನೋಡಬೇಕೆಂಬ ತತ್ವವನ್ನು—ಅನುಸರಿಸುವವು ಎಂದು ಸರ್ ಜಾನ್ ಆಡ್ಯಾಮ್ಸ್ ಅವರು ಹೇಳುತ್ತಾರೆ. ಇದಕ್ಕೆ "ಕ್ರೀಡಾ-ಪದ್ಧತಿ' ಎಂದು ಕರೆಯುವುದು ಹೆಚ್ಚು ಸಮಂಜಸವಾಗುವುದೆಂದು ರಾಸ್, ಮತ್ತು ನನ್ ಎಂಬವರು ಅಭಿಪ್ರಾಯಪಡುತ್ತಾರೆ. ಯಾಕೆಂದರೆ ಆಟವಾಡುವುದು ಮಗುವಿಗೆ ಸ್ವಾಭಾವಿಕವಾದುದು. ಶಿಕ್ಷಕನು ತನ್ನ ವ್ಯವಸಾಯದಲ್ಲಿ ಯಶಸ್ವಿಯಾಗಬೇಕಾದರೆ **ಪಾಠವೇ ಆಟ, ಆಟವೇ ಪಾಠ** ಎಂಬ ರಾಜಮಾರ್ಗವನ್ನು ಅನುಸರಿಸಬೇಕು. ಆಟದಲ್ಲಿ—ಆನಂದದಾಯಕವೂ ಸ್ವಯಂಪ್ರೇರಿತವೂ ಆದ ಚಟುವಟಿಕೆಯಲ್ಲಿ—ಪ್ರವೃತ್ತಿಗಳು ಪ್ರಕಟವಾಗಿ ಉದಾತ್ತಗೊಳ್ಳುತ್ತವೆ. ಕ್ರೀಡಾ-ಪದ್ಧತಿಯು ಹೊಸ ಶಿಕ್ಷಣದ ತಿರುಳು.

ಶಾಲೆಯಲ್ಲಿ ಬೇರೆ ಬೇರೆ ವಿಷಯಗಳನ್ನು ಕಲಿಯುವಾಗ ಮಕ್ಕಳಿಗೆ ಬೇರೆ ಬೇರೆ ಆಟಗಳನ್ನು ಆಡುತ್ತಿರುವಂತೆ ಅನಿಸಬೇಕು. ಶಿಕ್ಷಕನು ಶಾಲೆಯಲ್ಲಿಯ ಗಾರುಡಿಗನಾಗಿರಬೇಕು. ವಿಷಯಗಳು ಬೇಸರವಾಗದೆ ಮನರಂಜನವಾಗುವಂತೆ ಅವನು ತನ್ನ ಪಾಠಕ್ರಮವನ್ನು ಸಾಗಿಸಬೇಕು. ಜೀವನದೊಡನೆ ಪ್ರಯೋಗ ನಡೆಯಿಸುವುದು ಮಗುವಿನ ಸ್ವಾಭಾವಿಕ ಒಲವು. ಸ್ವಾನುಭವದಿಂದ ಸಹಜವಾಗಿಯೇ ಒಂದು ಬಗೆಯ ಶಿಕ್ಷಣವನ್ನು ಅವನು ಪಡಕೊಳ್ಳುತ್ತಿರುತ್ತಾನೆ. ವಸ್ತುಗಳನ್ನು ಪ್ರತ್ಯಕ್ಷ ಮುಟ್ಟಿ ನೋಡಿ ಅವುಗಳ ಬಗ್ಗೆ ಜ್ಞಾನವನ್ನು ಹೆಚ್ಚಿಸಿಕೊಳ್ಳುವುದು ಅವನಿಗೆ ಒಂದು ತರಹದ ಆಟವೇ ಆಗಿರುತ್ತದೆ. ಮಗುವಿಗೆ ವಿಷಯವನ್ನು ಕಲಿಸುವಾಗ ಈ ತತ್ವವು ನಮಗೆ ಯಾವಾಗಲೂ ಮಾರ್ಗದರ್ಶಕವಾಗಿರಬೇಕು. ವಿದ್ಯಾರ್ಥಿಗಳು ಇನ್ನೂ ಅರಳದೆ ಇರುವ ಕವಿಗಳೆಂದೂ, ನಟರೆಂದೂ, ಸಾಹಿತಿಗಳೆಂದೂ, ಶಿಲ್ಪಗಾರರೆಂದೂ, ವೈಜ್ಞಾನಿಕರೆಂದೂ, ರಾಜಕಾರಣ ಪಟುಗಳೆಂದೂ ನಾವು ತಿಳಿಯಬೇಕು. ಆ ಆ ರೀತಿಯ ಬೆಳವಣಿಗೆಗೆ ಪೋಷಕವಾಗುವಂತೆ ಅಭ್ಯಾಸ ಪತ್ರಿಕೆಯನ್ನೂ ಕಲಿಸುವ ಕ್ರಮವನ್ನೂ ಅಳವಡಿಸಿಕೊಳ್ಳಬೇಕು. ಶಾಲೆಯಲ್ಲಿ ಅಭ್ಯಾಸಮಾಡುವ ವಿಷಯಗಳು

ನಿತ್ಯ ಜೀವನಕ್ಕೆ ಹೇಗೆ ಸಂಬಂಧಪಟ್ಟಿರುತ್ತವೆ ಎಂಬುದನ್ನು ವಿದ್ಯಾರ್ಥಿಗಳಿಗೆ ಉಪಾಧ್ಯಾಯರು ತಿಳಿಸಿ ಹೇಳಬೇಕು. ಇತಿಹಾಸ-ಭೂಗೋಲಗಳು ನಮ್ಮ ರಾಜಕೀಯ ಹಾಗು ಆರ್ಥಿಕ ಸ್ಥಿತಿಗೆ ಹೇಗೆ ಸಂಬಂಧಪಟ್ಟಿವೆ; ವೈಜ್ಞಾನಿಕ ಸಂಶೋಧನೆಗಳು ನಮ್ಮ ಬಾಳುವೆಯ ರೀತಿ–ನೀತಿಗಳನ್ನು ಹೇಗೆ ಬದಲಾಯಿಸಿವೆ, ಬದಲಾಯಿಸುತ್ತಿವೆ; ಗಣಿತವು ನಿತ್ಯ ವ್ಯವಹಾರದಲ್ಲಿ ಹೇಗೆ ಉಪಯುಕ್ತವಾದುದು ಎಂಬ ಮಾತುಗಳು ಆ ಆ ವಿಷಯವನ್ನು ಕಲಿಸುವಾಗ ಮಕ್ಕಳಿಗೆ ಮನವರಿಕೆಯಾಗಬೇಕು. ನಾಗರಿಕ ಜೀವನಕ್ಕೆ ಸಂಬಂಧಿಸಿದ ವಿಷಯಗಳನ್ನು ಹೀಗೆ ಪ್ರಾಯೋಗಿಕ ರೀತಿಯಿಂದ ಕಲಿಸಿದರೆ ಕಲಿಯುವವನಿಗೆ ಅದು ಆಟವೆನಿಸುತ್ತದೆ.

ಶಿಕ್ಷಣದ ಹೊಸ ಪದ್ಧತಿಗಳಲ್ಲಿ ಮಕ್ಕಳ ಕ್ರೀಡಾ ವೃತ್ತಿಗೇ ಹೆಚ್ಚು ಮಹತ್ವವನ್ನು ಕೊಡಲಾಗಿದೆ. ಏಕೆಂದರೆ ಕ್ರೀಡಾ ಪದ್ಧತಿಯಿಂದ ಕಲಿಸಿದರೆ ಅವರು ಸ್ವಯಂಸ್ಫೂರ್ತಿಯಿಂದಲೂ ಆನಂದದಿಂದಲೂ ಕಲಿಯು ವರು ವಿಷಯಗಳನ್ನು ಕ್ರೀಡಾ ಪದ್ಧತಿಯಿಂದ ಹೇಗೆ ಕಲಿಸಬಹುದೆಂಬುದನ್ನು ಸ್ವಲ್ಪ ವಿಚಾರಿಸುವ :—

(೧) **ಮೊಂಟೇಸರಿ ಪದ್ಧತಿ.**— ಬಾಲಕವರ್ಗಕ್ಕೆ ಹೆಚ್ಚಾಗಿ ಮೊಂಟೇಸರಿ ಅಮ್ಮನವರ ಪದ್ಧತಿಯನ್ನೇ ಉಪಯೋಗಿಸಬೇಕು. ಈ ಪದ್ಧತಿಯ ಮುಖ್ಯ ಲಕ್ಷಣವೆಂದರೆ ಕೆಲವು ಸಾಮಗ್ರಿಗಳೊಡನೆ ಸ್ವಚ್ಛಂದ ವೃತ್ತಿಯಿಂದ ಆಟವಾಡಲಿಕ್ಕೆ ಮಕ್ಕಳನ್ನು ಬಿಟ್ಟುಬಿಡುವುದು. ಅಮ್ಮನವರು ಬಾಲಕರಿಗೆ ಆಡಲಿಕ್ಕೆಂದು ದುಂಡಗಿನ ಕಟ್ಟಿಗೆಯ ತುಂಡು, ಮೃದುವಾದ ಉಣ್ಣೆಯ ಚೆಂಡು, ಪೆಟ್ಟಿಗೆ, ಹಲಿಗೆ, ದಾರ, ಚಿತ್ರ ಮುಂತಾದ ಸಾಮಾನುಗಳನ್ನು ಕೊಡುವರು. ಇವುಗಳಿಗೆ "ಬೋಧನಾತ್ಮಕ ಉಪಕರಣಗಳು" (Didactic Apparatus) ಎಂದು ಅನ್ನುವರು. ಉಪಾಧ್ಯಾಯಿನಿಯು ಮಕ್ಕಳ ಸ್ವಾತಂತ್ರ್ಯವೃತ್ತಿಗೆ ಅಡ್ಡ ಬಾರದೇ ಇರುವುದರಿಂದ ಅವರಲ್ಲಿ ಸ್ವಾವಲಂಬನೆ, ಸ್ವಂತ ವಿಚಾರ ಮತ್ತು ಉದ್ಯೋಗ ತತ್ಪರತೆಗಳು ನೆಲಗೊಳ್ಳುವುವು. ಡಾ|| ಮೊಂಟೇಸರಿ ಅವರ "ಮಕ್ಕಳ ಮನೆ"ಯಲ್ಲಿ ಜ್ಞಾನೇಂದ್ರಿಯಗಳ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ. ಅಲ್ಲಿ ಬಾಲಕರು

ಓದು-ಬರೆಹ-ಲೆಕ್ಕಗಳನ್ನು ಆಟವಾಡುತ್ತಲೇ ಕಲಿಯುವರು. "ಇದನ್ನು ಮಾಡು, ಇದನ್ನು ಬಿಡು" ಎಂದು ಉಪಾಧ್ಯಾಯಿನಿಯು ಮಕ್ಕಳಿಗೆ ಎಂದೂ ಉಪದೇಶಿಸುವುದಿಲ್ಲ, ಅವರು ತಪ್ಪಿ ನಡೆದರೆ ಶಿಕ್ಷೆಯನ್ನು ವಿಧಿಸುವುದಿಲ್ಲ. ತಮ್ಮ ತಪ್ಪು ನಡತೆಯು ಅನ್ಯರಿಗೆ ಅಸಹ್ಯವೂ ಅಪ್ರಿಯವೂ ಆಗುವುದೆಂದು ಬಗೆದು ಮಕ್ಕಳು ಮುಂದೆ ಹಾಗೆ ಮಾಡುವುದನ್ನು ತಾವಾಗಿಯೇ ಬಿಟ್ಟುಬಿಡುತ್ತಾರೆ. ತಮ್ಮನ್ನು ತಾವೇ ತಿದ್ದಿಕೊಳ್ಳುವ ಸದ-ಸದ್ವಿವೇಕ ಬುದ್ಧಿಯು ಮಕ್ಕಳಲ್ಲಿ ಜಾಗ್ರತವಾಗುವಂತೆ ಉಪಾಧ್ಯಾಯಿನಿಯು ನೋಡಿಕೊಳ್ಳುತ್ತಾಳೆ. ವ್ಯಕ್ತಿತ್ವ ವಿಕಾಸಕ್ಕೆ ವ್ಯಕ್ತಿಸ್ವಾತಂತ್ರ್ಯವೇ ಮೂಲ ಎಂಬುದು ಡಾ|| ಮೊಂಟೇಸರಿ ಅವರ ಮುಖ್ಯ ಮಂತ್ರವಾಗಿದೆ. ಅಮ್ಮನವರ ದೃಷ್ಟಿಯಲ್ಲಿ ಉಪಾಧ್ಯಾಯಿನಿಯು "ನಿರೀಕ್ಷಕಳು"; ಶಿಕ್ಷಕಳಲ್ಲ. ಮೊಂಟೇಸರಿ ಪದ್ಧತಿಯಲ್ಲಿ ವರ್ಗಶಿಕ್ಷಣವು ಇಲ್ಲವೇ ಇಲ್ಲ. ಡಾ|| ಮೊಂಟೇಸರಿ ಅವರಂತೆ ಫ್ರೊಬೆಲ್‌ನೂ ಮಕ್ಕಳ ಕ್ರೀಡಾವೃತ್ತಿಗೆ ಹೆಚ್ಚು ಮಹತ್ವವನ್ನು ಕೊಟ್ಟಿದ್ದನು. ಅವನು ಸ್ಥಾಪಿಸಿದ "ಬಾಲೋದ್ಯಾನ"ವೆಂಬ ಶಿಶುಶಾಲೆಯಲ್ಲಿ ಮಕ್ಕಳು ಆಟದ ಮೂಲಕವೇ ಶಿಕ್ಷಣವನ್ನು ಪಡೆಯುತ್ತಾರೆ.

**(೨) ಡಾಲ್ಟನ್ ಪದ್ಧತಿ.**— ಸಣ್ಣ ಹುಡುಗರಿಗೆ ಕಲಿಸುವಲ್ಲಿ ಮೊಂಟೇಸರಿ ಪದ್ಧತಿಯು ಪ್ರಸಿದ್ಧವಿರುವಂತೆ ದೊಡ್ಡ ಹುಡುಗರಿಗೆ ಕಲಿಸುವ ಕ್ರಮದಲ್ಲಿ ಡಾಲ್ಟನ್ ಪದ್ಧತಿಯು ಪ್ರಸಿದ್ಧವಿರುತ್ತದೆ. ಮೊಂಟೇಸರಿ ಸಾಲೆಯಲ್ಲಿಯ ಹಾಗೆ ಡಾಲ್ಟನ್ ಯೋಜನೆಯಲ್ಲಿಯೂ ಸಾಂಪ್ರದಾಯಿಕ ವೇಳಾಪತ್ರಿಕೆಗೂ ವರ್ಗರಚನೆಗೂ ಸ್ಥಾನವಿಲ್ಲ. ಇಲ್ಲಿ ವಿದ್ಯಾರ್ಥಿಗಳು ತಮಗೆ ಇಷ್ಟವಿದ್ದ ಬೇಕಾದ ವಿಷಯಗಳನ್ನು ಆರಿಸಬಹುದು. ಆದರೆ ತಾವು ಆಯ್ದುಕೊಂಡ ವಿಷಯ ಭಾಗವನ್ನು ನಿಯಮಿತ ಅವಧಿಯಲ್ಲಿ (ಉದಾ—ಒಂದು ತಿಂಗಳಲ್ಲಿ) ಮುಗಿಸುವ ಹೊಣೆಯು ವಿದ್ಯಾರ್ಥಿಗಳ ಮೇಲೆಯೇ ಇರುತ್ತದೆ. ಶಿಕ್ಷಕನು ಅವರ ಸಲಹೆಗಾರನು. ಸಾಲೆಯಲ್ಲಿ ವರ್ಗದ ಪ್ರಕಾರ ಕೋಣೆಗಳಿರದೆ ವಿಷಯಗಳ ಪ್ರಕಾರ ಕೋಣೆಗಳಿರುವವು. ಇತಿಹಾಸ, ಭೂಗೋಲ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಪ್ರಯೋಗಶಾಲೆಗಳಲ್ಲಿ ವಿದ್ಯಾರ್ಥಿಗಳು ತಾವಾಗಿಯೇ ತಮ್ಮ ಅಭ್ಯಾಸವನ್ನು ಸಾಗಿಸುವರು. ಸಾಕು ಎನಿಸಿದಾಗ ಒಂದು ವಿಷಯವನ್ನು ಬಿಟ್ಟು

ಮತ್ತೊಂದಕ್ಕೆ ತೆರಳುವ ಸ್ವಾತಂತ್ರ್ಯವು ಅವರಿಗೆ ಉಂಟು. ಡಾಲ್ಟನ್ ಯೋಜನೆಯಲ್ಲಿ ಮಕ್ಕಳು ಸ್ವಯಂಪ್ರೇರಣೆಯಿಂದಲೇ ಕಲಿಯುವರು.

(೩) **ಯೋಜನಾ ಪದ್ಧತಿ** (The Project Method) – ಪ್ರೊ. ಕಿಲ್ ಪ್ಯಾಟ್ರಿಕ್ ಎಂಬವರು ಈ ಪದ್ಧತಿಯ ಜನಕರು. ಒಂದು ಸಾಮಾಜಿಕ ಸನ್ನಿವೇಶವನ್ನು—ಅಂಗಡಿ, ಓಣಿ, ಅಂಚೆ ಕಚೇರಿ, ಹೊಲ, ಸ್ಟೇಶನ್ ಮೊದಲಾದುವುಗಳನ್ನು—ಆರಿಸಿಕೊಂಡು ಅದರ ಮುಖಾಂತರ ವಿಷಯಗಳನ್ನು ಕಲಿಸುವುದು ಈ ಪದ್ಧತಿಯ ಮುಖ್ಯ ಲಕ್ಷಣ. ಶಾಲೆಯ ಕೋಣೆಯೊಳಗೆ ಕುಳಿತು ನೀರಸವಾದ ಪಾಠಗಳನ್ನು ಕಲಿಯುವುದನ್ನು ಬಿಟ್ಟು ಬಾಲಕರು ತಮ್ಮಿಷ್ಟಕ್ಕೆ ತಾವೇ ಕೆಲಸ ಮಾಡುತ್ತ ಜೀವನದ ಅನುಭವವನ್ನು ಪ್ರತ್ಯಕ್ಷವಾಗಿ ಪಡೆಯುತ್ತಾರೆ. ಉದಾಹರಣಾರ್ಥವಾಗಿ ಪೋಸ್ಟ ಆಫೀಸಿನ ಯೋಜನೆಯಲ್ಲಿ ಕೆಲವು ಬಾಲಕರು ಪೋಸ್ಟ ಪೆಟ್ಟಿಗೆಯನ್ನು ತಯಾರಿಸುವರು, ಕೆಲವರು ಪತ್ರಗಳನ್ನು ಬರೆಯುವರು, ಬೇರೆ ಕೆಲವರು ಆ ಪತ್ರಗಳನ್ನು ಹಂಚುವರು. ಇಂತಹ ಪ್ರಯೋಗಗಳಲ್ಲಿ ತೊಡಗಿದ ಬಾಲಕರು ಓದು-ಬರೆಹವನ್ನು ಆಟದ ರೂಪದಲ್ಲಿ ಅಪ್ರತ್ಯಕ್ಷ ರೀತಿಯಿಂದಲೂ ಆನಂದದಿಂದಲೂ ತೀವ್ರವಾಗಿ ಕಲಿಯುವರು. ಲೆಕ್ಕವನ್ನು ಕಲಿಸುವಾಗ ವಿದ್ಯಾರ್ಥಿಗಳೆ ನಡೆಯಿಸುವ ಅಂಗಡಿಯಲ್ಲಿ ಪ್ರತ್ಯಕ್ಷ ವ್ಯವಹಾರವನ್ನು ಸಾಗಿಸುವುದು; ವಿಜ್ಞಾನವನ್ನು ಕಲಿಸುವಾಗ ಸಾಮಾನ್ಯ ನಿಯಮಗಳನ್ನು ಪ್ರಯೋಗದಿಂದ ವಿದ್ಯಾರ್ಥಿಗಳೇ ಹುಡುಕಿ ತೆಗೆಯುವಂತೆ ಮಾಡುವುದು; ಇತಿಹಾಸವನ್ನು ಕಲಿಸುವಾಗ ಚಿತ್ರ ತೆಗೆಯಿಸುವುದು, ನಟನೆ ಮಾಡಿಸುವುದು; ಭೂಗೋಲ ಕಲಿಸುವಾಗ ತೋಟದಲ್ಲಿ ಮಾದರಿಯ ರೈಲುಮಾರ್ಗಗಳನ್ನೂ ಜಲಮಾರ್ಗಗಳನ್ನೂ ರಚಿಸುವುದು; ಇಲ್ಲವೆ ವಿದ್ಯಾರ್ಥಿಗಳು ಸಂತೆಯಲ್ಲಿ ಹೋಗಿ ಕಾಯಿಪಲ್ಲೆ, ಕಾಳು, ಅರಿವೆ ಮುಂತಾದ ಸಾಮಾನುಗಳನ್ನು ವ್ಯಾಪಾರಿಗಳು ಎಲ್ಲಿಂದ ತರಿಸುತ್ತಾರೆ ಹೇಗೆ ತರಿಸುತ್ತಾರೆ ಮುಂತಾದ ಎಲ್ಲ ಸಂಗತಿಗಳನ್ನು ತಾವಾಗಿಯೇ ವಿಚಾರಿಸಿಕೊಂಡು ಬರುವುದು; ಭಾಷಾ ವಿಷಯವನ್ನು ಹೇಳುವಾಗ ಬಾಲಕರೇ ವರ್ಣನೆಯನ್ನು ಮಾಡಲಿಕ್ಕೂ ಕಥೆಗಳನ್ನು ಕಟ್ಟಲಿಕ್ಕೂ ಕಲಿಯುವುದು—ಇವೆಲ್ಲವುಗಳು ಯೋಜನಾ ಪದ್ಧತಿಗಳಲ್ಲಿ ಬರುವುವು.

ಈ ರೀತಿಯಾಗಿ ಒಂದು ಉದ್ದೇಶಪೂರ್ವಕವಾದ ಕೆಲಸವನ್ನು ಬಾಲಕರೇ ಕೈಕೊಂಡು ಅದನ್ನು ಕೊನೆಗಾಣಿಸುವುದು ಯೋಜನಾ ಪದ್ಧತಿಯ ಮುಖ್ಯ ಲಕ್ಷಣವು. ಉದ್ದೇಶವಿದ್ದಲ್ಲಿ ಉತ್ಸಾಹವುಂಟು, ಉತ್ಸಾಹವಿದ್ದಲ್ಲಿ ಆಟವುಂಟು. ಯೋಜನಾ ಪದ್ಧತಿಯಲ್ಲಿ ಕೈಕೆಲಸವು ಹೆಚ್ಚಾಗಿ ಕಂಡುಬರುತ್ತದೆ. ಪ್ರೌಢಜೀವನದ ಕೇವಲ ಅಣಕವೇ ಈ ಪದ್ಧತಿಯ ತಿರುಳೆಂದು ತಿಳಿಯಬಾರದು. ಆದರೆ ಚಟುವಟಿಕೆಯು ಯಾವ ತರಹದ್ದೇ ಇರಲಿ ಸ್ವಯಂಸಂತೋಷದಿಂದ ಅದು ಪ್ರೇರಿತವಾಗಿದ್ದರೆ ಅದೇ ಯೋಜನಾ ಪದ್ಧತಿಯು.

ಪ್ರಾಥಮಿಕ ಸಾಲೆಯ ಮೊದಲನೆಯ ನಾಲ್ಕು ಇಯತ್ತೆಗಳ ವರೆಗೆ ಯೋಜನಾ ಪದ್ಧತಿಯನ್ನು ಉಪಯೋಗಿಸುವುದು ಸರಿಯಾದುದು. ಯೋಜನಾ ಪದ್ಧತಿಯ ಪಾಠಗಳು ಮಕ್ಕಳಿಗೆ ಆಟಗಳೆಂದು ತೋರುತ್ತವೆ.

(೪) **ಶೋಧಕ ಪದ್ಧತಿ** (The Heuristic Method).—ಪ್ರೊಫೆಸರ್ ಆರ್ಮ್‌ಸ್ಟ್ರಾಂಗ್ ಅವರು ವಿಜ್ಞಾನವನ್ನು ಕಲಿಸುವಾಗ ಈ ಪದ್ಧತಿಯನ್ನು ಪ್ರಾರಂಭಿಸಿದರು. ಮೂಲ ಶಾಸ್ತ್ರೀಯ ಶೋಧಕನಂತೆ ವಿದ್ಯಾರ್ಥಿಯೇ ಸಂಶೋಧನೆಯನ್ನು ನಡೆಯಿಸುವುದು ಈ ಪದ್ಧತಿಯ ವೈಶಿಷ್ಟ್ಯ. ಸೃಷ್ಟಿಯನ್ನು ನಿರೀಕ್ಷಿಸಿ ಇಲ್ಲವೆ ಪ್ರಯೋಗವನ್ನು ಮಾಡಿ ಸಾಮಾನ್ಯ ನಿಯಮಗಳನ್ನು ವಿದ್ಯಾರ್ಥಿಯೇ ಹುಡುಕಿ ತೆಗೆಯುವನು. ಮಕ್ಕಳು ಈ ದೃಷ್ಟಿಯನ್ನು ಇಟ್ಟುಕೊಂಡರೆ ವಿಷಯದಲ್ಲಿ ಬೆರೆತು ಹೋಗುವರು. ಮೂಲ ಸಂಶೋಧಕರಂತೆ ಅವರನ್ನು ಕುತೂಹಲ ಪ್ರೇರಿತರನ್ನಾಗಿ ಮಾಡುವುದು ತತ್ವತಃ ಕ್ರೀಡಾ ಪದ್ಧತಿಯೇ ಆಗಿದೆ. ಈ ಹ್ಯರಿಸ್ಟಿಕ್ ಪದ್ಧತಿಯನ್ನು ಭೂಮಿತಿ, ವ್ಯಾಕರಣ ಮೊದಲಾದ ಬೇರೆ ವಿಷಯಗಳನ್ನು ಕಲಿಸುವಾಗಲೂ ಉಪಯೋಗಿಸಬಹುದು.

**ನೀತಿ ಶಿಕ್ಷಣವೂ ಕ್ರೀಡಾ ಪದ್ಧತಿಯೂ.**— ಬೌದ್ಧಿಕ ಶಿಕ್ಷಣದಂತೆ ನೈತಿಕ ಶಿಕ್ಷಣದಲ್ಲಿಯೂ ಈಗ ಕ್ರೀಡಾ ಪದ್ಧತಿಯನ್ನು ಅನುಸರಿಸುವುದು ಕಂಡುಬರುತ್ತದೆ. ಸಾಲೆಯಲ್ಲಿ ಉಪದೇಶದ ಮುಖಾಂತರ ಮಕ್ಕಳ ಶೀಲವನ್ನು

ತಿದ್ದುವುದು, ದಂಡದ ಮುಖಾಂತರ ಶಿಸ್ತನ್ನು ಕಾಯುವುದು ಇತ್ತೀಚಿಗೆ ಮಾಯವಾಗಹತ್ತಿವೆ ನೀತಿ ಶಿಕ್ಷಣದಲ್ಲಿ ಅಧಿಕಾರವಾಣಿಯು ಫಲದಾಯಕ ವಲ್ಲವೆಂದೂ ಶಿಕ್ಷಕನೇ ತನ್ನ ನಡೆನುಡಿಯಿಂದ ಮೇಲುಪಜ್ಙ್ತಿಯನ್ನು ಹಾಕಿ ಕೊಡಬೇಕೆಂದೂ ಆಧುನಿಕ ಶಿಕ್ಷಣತಜ್ಞರು ಹೇಳುತ್ತಾರೆ. ಪ್ರಾಮಾಣಿಕತನ, ಮನಸ್ಸಿನ ನಿರ್ಮಲತೆ, ಓರಣ, ನಿಷ್ಪಕ್ಷಪಾತತನ, ನಿಯಮಿತತನ ವೊದಲಾದ ಸದ್ಗುಣಗಳನ್ನು ಮಕ್ಕಳು ಕೇಳಿ ಕಲಿಯುವುದಕ್ಕಿಂತ ನೋಡಿ ಕಲಿಯುವುದೇ ಹೆಚ್ಚು. ಇದಲ್ಲದೆ ಶಿಕ್ಷಕನ ಒಲವುಗಳನ್ನು, ಅಭಿಪ್ರಾಯಗಳನ್ನು ಮತ್ತು ಧೋರಣಗಳನ್ನು ವಿದ್ಯಾರ್ಥಿಗಳು ಸ್ವಾಭಾವಿಕವಾಗಿ ಸ್ವೀಕರಿಸುತ್ತಾರೆ. ಸತ್ಪುರುಷರ ಜೀವನ ಚರಿತ್ರೆಗಳನ್ನು ಓದುವುದರಿಂದಲೂ ಅದರ ಪರಿಣಾಮವು ಮಕ್ಕಳ ಮೇಲೆ ಆಗುವುದು. ಆದುದರಿಂದ ಪಠ್ಯಪುಸ್ತಕಗಳಲ್ಲಿ ಅಂತಹ ಪಾಠಗಳು ಇರಬೇಕೆಂದು ಹೇಳುವರು. ನೀತಿಬೋಧೆಯು ಹೀಗೆ ಅಪ್ರತ್ಯಕ್ಷ ರೀತಿಯಿಂದ ಆಗಬೇಕೆಂದು ಆಧುನಿಕ ಶಿಕ್ಷಣತಜ್ಞರು ಹೇಳುವಲ್ಲಿ ಕ್ರೀಡಾ ಪದ್ಧತಿಯ ತತ್ವವು ಅಡಕವಾಗಿದೆ. ಏಕೆಂದರೆ ಇಲ್ಲಿ ಮಗುವು ಆದರ್ಶ ಪುರುಷರ ಉದಾಹರಣೆಗಳನ್ನು ನೋಡಿ ಸ್ವಯಂಪ್ರೇರಣೆಯಿಂದ ನೈತಿಕ ಗುಣಗಳನ್ನು ಕಲಿಯುವನು; ಹೀಗೆಯೆ ನಡೆಯಬೇಕೆಂದು ಯಾರೂ ಅವನನ್ನು ಒತ್ತಾಯಪಡಿಸುವುದಿಲ್ಲ.

ಪ್ರಜಾಸತ್ತಾತ್ಮಕ ಸಂಘಗಳನ್ನು ಸಾಲೆಯಲ್ಲಿ ಸ್ಥಾಪಿಸಿ ಅದರ ಆಡಳಿತವನ್ನು ಮಕ್ಕಳೇ ಸಾಗಿಸುವಂತೆ ಮಾಡುವುದು ಇಂಗ್ಲಂಡ ಅಮೇರಿಕೆ ಗಳಲ್ಲಿ ಕಂಡುಬರುತ್ತದೆ. ಆ ಸಂಘದ ನಿಯಮಾವಳಿಗಳನ್ನು ಸಂಘದ ಸದಸ್ಯರಾದ ವಿದ್ಯಾರ್ಥಿಗಳೇ ತಯಾರಿಸುತ್ತಾರೆ. ಯಾವನಾದರೊಬ್ಬ ವಿದ್ಯಾರ್ಥಿಯು ಆ ನಿಯಮಗಳನ್ನು ಉಲ್ಲಂಘಿಸಿದರೆ ಉಳಿದ ವಿದ್ಯಾರ್ಥಿಗಳೇ ಅದರ ವಿಚಾರಣೆ ನಡೆಸುತ್ತಾರೆ. ಈ ರೀತಿಯಾಗಿ ಮಕ್ಕಳು ನಾಗರಿಕ ಜೀವನದ ತರಬೇತನ್ನು ಸಾಲೆಯಲ್ಲಿಯೇ ಹೊಂದುತ್ತಾರೆ. ತಾವಾಗಿಯೇ ನಡೆಯಿಸುವ ಸಂಸ್ಥೆಯಲ್ಲಿ ಮಕ್ಕಳ ಸಾಮಾಜಿಕ ಪ್ರವೃತ್ತಿಗಳು—ಆತ್ಮಪ್ರತಿಷ್ಠೆ, ವಿಧೇಯತೆ, ಕ್ರೋಧ, ಪಾಲನ ಮತ್ತು ಸಂಘ ಪ್ರವೃತ್ತಿಗಳು—ಉದಾತ್ತತೆ ಯನ್ನು ಹೊಂದುತ್ತವೆ. ಶಿಕ್ಷಕನು ಇಂಥ ಸಂಘದ ಮೇಲ್ವಿಚಾರಕನಾಗಿ ವ್ಯವಹರಿಸುತ್ತಾನೆ.

ಆಟಗಳಲ್ಲಿಯೂ ಸ್ಕಾವುಟ ಪದ್ಧತಿಯಲ್ಲಿಯೂ ಮಕ್ಕಳ ಶೀಲಸಂವರ್ಧನೆಗೆ ತುಂಬ ಎಡೆಯುಂಟು. ಸಂಘಾಭಿಮಾನ, ಸಹಕಾರ, ಮುಂದಾಳುತನ, ಅನುಯಾಯಿತನ, ಧೈರ್ಯ, ಸಾಹಸ, ಪರೋಪಕಾರ, ಪ್ರಾಮಾಣಿಕತನ ಮೊದಲಾದ ಸದ್ಗುಣಗಳು ಆಟದಲ್ಲಿಯೂ ಸ್ಕಾವುಟ ಯೋಜನೆಯಲ್ಲಿಯೂ ಪೋಷಿಸಲ್ಪಡುತ್ತವೆ ಆಟದಲ್ಲಿ ನೈತಿಕ ಶಿಕ್ಷಣದೊಡನೆ ಬೌದ್ಧಿಕ ಶಿಕ್ಷಣವೂ ದೊರಕುವುದೆಂದು ಹೇಳಬಹುದು. ಚಿಕ್ಕ ಮಕ್ಕಳು ಆಟವಾಡುವಾಗ ಶಾಲೆಯಲ್ಲಿ ಕಲಿಯಬೇಕಾಗುವ ಸಾಧಾರಣ ಎಲ್ಲ ವಿಷಯಗಳ ಪರಿಚಯವು ಅವರಿಗೆ ಆಗುತ್ತದೆ. ಎಣಿಕೆ ಮಾಡುವ ಪ್ರಸಂಗವು ಬರುವುದರಿಂದ ಲೆಕ್ಕದ ಪರಿಚಯವಾಗುತ್ತದೆ; ತಿರುಗಾಡುವುದರಿಂದ ಭೂಗೋಲಿನ ಪರಿಚಯವಾಗುತ್ತದೆ; ನಟನೆಯಿಂದ ಇತಿಹಾಸದ ಪರಿಚಯವಾಗುತ್ತದೆ; ವರ್ಣನೆಯಿಂದ ಭಾಷಾಜ್ಞಾನವು ಬೆಳೆಯುತ್ತದೆ; ಮತ್ತು ಚಿಕಿತ್ಸಕ ಬುದ್ಧಿಯು ಸಂಶೋಧನೆಯಿಂದ ವಿಜ್ಞಾನದ ಪರಿಚಯವಾಗುತ್ತದೆ. ವಿಚಾರಿಸಿ ನೋಡಿದರೆ ಅಭ್ಯಾಸ ಪತ್ರಿಕೆಯ ಎಲ್ಲ ವಿಷಯಗಳು ಬೀಜರೂಪವಾಗಿ ಬಾಲಕರ ಕ್ರೀಡೆಯಲ್ಲಿ ಕಂಡುಬರುತ್ತವೆ. ಶಿಕ್ಷಕನು ಚಾಣಾಕ್ಷನಾಗಿದ್ದರೆ ಕಲಿಸುವ ವಿಷಯಕ್ಕೆ ಆಟದ ಸ್ವರೂಪವನ್ನು ಹೇಗೆ ಕೊಡಬೇಕೆಂಬ ಉಪಾಯಗಳು ಅವನಿಗೆ ತೋಚುವುವು.

ಮೇಲೆ ಉದಾಹರಿಸಿದ ಕಲಿಸುವ ಹೊಸ ರೀತಿಗಳು ಕ್ರೀಡಾಪದ್ಧತಿಗಳೆಂದು ಹೇಳಿರುವೆವು ಅಂದರೆ ಮಗುವು ಸ್ವಾಭಾವಿಕವಾಗಿ ಆಡುವ ಆಟದ ತತ್ವಗಳ ಮೇಲೆಯೇ ಅವು ಯೋಚಿಸಲ್ಪಟ್ಟಿರುವುವೆಂದು ತಿಳಿಯಬೇಕು. ಆದರೆ ಇವು ಅಷ್ಟೇ ಕ್ರೀಡಾಪದ್ಧತಿಗಳೆಂದು ಊಹಿಸಬಾರದು. ಶಿಕ್ಷಕನು ಗಣಿತವನ್ನು ಕಲಿಸುವಾಗ 'ಯೋಜನಾ ಪದ್ಧತಿ'ಯನ್ನೂ, ವಿಜ್ಞಾನವನ್ನು ಕಲಿಸುವಾಗ 'ಶೋಧಕ ಪದ್ಧತಿ'ಯನ್ನೂ, ಇತಿಹಾಸ ಭೂಗೋಲಗಳನ್ನು ಕಲಿಸುವಾಗ 'ಡಾಲ್ಟನ್ ಪದ್ಧತಿ'ಯನ್ನೂ (—ಆದರೆ ಈ ಪದ್ಧತಿಯನ್ನು ಪ್ರಯೋಗಿಸಲಿಕ್ಕೆ ನಮ್ಮಲ್ಲಿಯ ಈಗಿನ ಸಾಲೆಗಳು ಅನುಕೂಲವಾಗಿರುವುದಿಲ್ಲ) ನೀತಿಯನ್ನು ಕಲಿಸುವಾಗ ಚರಿತ್ರೆ ಅಥವಾ ಸನ್ನಿವೇಶ ಪದ್ಧತಿಯನ್ನೂ ಸಾಮಾನ್ಯವಾಗಿ ಉಪಯೋಗಿಸಬಹುದು.

ಆದರೆ ಪ್ರತಿನಿತ್ಯದ ಪಾಠದಲ್ಲಿ ಯಾವ ರೀತಿಯಿಂದ ಕ್ರೀಡಾಪದ್ಧತಿಯನ್ನು ಅನುಸರಿಸಬೇಕೆಂಬುದನ್ನು ಶಿಕ್ಷಕನು ಸ್ವತಃ ವಿಚಾರಿಸಿ ಕಲ್ಪಿಸಿಕೊಳ್ಳಬೇಕು. ಸ್ವಯಂಪ್ರೇರಣೆ ಮತ್ತು ಬಾಹ್ಯಚಟುವಟಿಕೆ ಇವು ಆಟದ ಎರಡು ಮುಖ್ಯ ಲಕ್ಷಣಗಳು. ಇವನ್ನು ನೆನಪಿನಲ್ಲಿಟ್ಟುಕೊಂಡು ಶಿಕ್ಷಕನು ತಾನು ಕಲಿಸುವ ಪದ್ಧತಿಯನ್ನು ಯೋಚಿಸಿದರೆ ಅವನ ಪಾಠವು ಆಟದ ಸ್ವರೂಪವನ್ನೇ ಹೊಂದುವುದು. ಪಾಠ ನಡೆದಾಗ ವಿದ್ಯಾರ್ಥಿಗಳು ಸುಮ್ಮನೆ ಕೂತು ಕೇಳುವುದು ಕಲಿಯುವಿಕೆಯೇ ಅಲ್ಲ; ಮತ್ತು ಅಧ್ಯಾಪಕನು ಉದ್ದವಾಗಿ ಒಂದು ಭಾಷಣವನ್ನು ಮಾಡುವುದು ಕಲಿಸುವಿಕೆಯೇ ಅಲ್ಲ; ಕ್ರೀಡಾಪದ್ಧತಿಗಂತೂ ಇವು ಅತ್ಯಂತ ವಿರೋಧವಾದುವು. ಅಭ್ಯಾಸಿಸುವ ವಿಷಯದ ಬಗೆಗೆ ಬಾಲಕರನ್ನು ಒಂದಿಲ್ಲೊಂದು ಬಾಹ್ಯ ಚಟುವಟಿಕೆಯಲ್ಲಿ ತೊಡಗಿಸಬೇಕು. ಭಾಷಾವಿಷಯವನ್ನು ಕಲಿಸುವಾಗ ಬಾಲಕರಿಂದ ಚಿತ್ರಗಳನ್ನು ತೆಗೆಯಿಸುವುದು, ಪಾಠಗಳಲ್ಲಿಯ ಪಾತ್ರಗಳನ್ನು ಅಭಿನಯಿಸಿಸುವುದು, ಬಿಟ್ಟ ಶಬ್ದಗಳನ್ನು ತುಂಬಿಸುವುದು, ಸಂಕ್ಷಿಪ್ತ ಸಂಗತಿಗಳಿಂದ ಕತೆಗಳನ್ನು ಬರೆಯಿಸುವುದು, ಸಂಭಾಷಣೆಗಳನ್ನು ಮಾಡಿಸುವುದು, ಅಕ್ರಮವಾಗಿ ಬರೆದ ಶಬ್ದಗಳಿಂದ ವಾಕ್ಯಗಳನ್ನು ರಚಿಸುವುದು ಮುಂತಾದುವು ಕ್ರೀಡಾಪದ್ಧತಿಯಲ್ಲಿಯೇ ಬರುವುವು. ಅದರಂತೆ ಇತರ ವಿಷಯಗಳನ್ನು ಕಲಿಸುವಾಗ ವಿದ್ಯಾರ್ಥಿಗಳಿಂದ ವಾಹನ, ಪ್ರತಿಮೆ ಮೊದಲಾದ ಕೈಕೆಲಸಗಳನ್ನು ಮಾಡಿಸುವುದು, ಚಿತ್ರಗಳನ್ನಾಗಲಿ ಹಳೆಯ ನಾಣ್ಯಗಳನ್ನಾಗಲಿ ಅಥವಾ ವಿಚಿತ್ರವಾದ ವಸ್ತುಗಳನ್ನಾಗಲಿ ಸಂಗ್ರಹಿಸಲಿಕ್ಕೆ ಹಚ್ಚುವುದು, ಭಾಷಣ ಸ್ಪರ್ಧೆಗಳನ್ನೂ ಲೇಖನ ಸ್ಪರ್ಧೆಗಳನ್ನೂ ಏರ್ಪಡಿಸುವುದು ಮೊದಲಾದವುಗಳು ಸಹ ಕ್ರೀಡಾ ಪದ್ಧತಿಯ ಉದಾಹರಣೆಗಳು. ಒಟ್ಟಿನಮೇಲೆ ಮಕ್ಕಳಲ್ಲಿ ಉತ್ಸಾಹವನ್ನುಂಟು ಮಾಡುವ ಚಟುವಟಿಕೆಗಳನ್ನು ಅವರಿಂದಲೇ ಮಾಡಿಸಬೇಕು.

ಮಕ್ಕಳಿಗೆ ವಿದ್ಯಾಭ್ಯಾಸವನ್ನು ಮಾಡಿಸುವಾಗ ಆಟದ ತತ್ವವನ್ನೇ ಅವಲಂಬಿಸಬೇಕೆಂದು ಹೊಸ ಶಿಕ್ಷಣವು ಸಾರಿ ಹೇಳುತ್ತದೆ. ಹೀಗೆನ್ನುವಾಗ ಅದರ ಮುಖ್ಯ ಉದ್ದೇಶವೇನೆಂದರೆ—ಪಾಲಕರು ಮತ್ತು ಅಧ್ಯಾಪಕರು ತಮ್ಮ ಅಧಿಕಾರ ನಡೆಯಿಸುವುದನ್ನು ಕಡಿಮೆ ಮಾಡಬೇಕು; ಅಭ್ಯಾಸ [illegible] ವರ್ತಿಸುವ ಹೊಣೆಗಾರಿಕೆಯನ್ನು

ಮಕ್ಕಳ ಮೇಲೆಯೇ ಹಾಕಬೇಕು; ಮಕ್ಕಳು ಸಾಲೆಗೆ ಹೊಂದಿಕೊಂಡು ಹೋಗಬೇಕೆಂದು ಅಪೇಕ್ಷಿಸಡದೆ, ನಾಲೆಯ ಪದ್ಧತಿಯನ್ನೂ ಕಲಿಸುವ ರೀತಿಯನ್ನೂ ಮಕ್ಕಳಿಗೆ ಹೊಂದಿಕೆಯಾಗುವಂತೆ ಅಳವಡಿಸಿಕೊಳ್ಳಬೇಕು; ಮತ್ತು ಮಕ್ಕಳ ಬುದ್ಧಿಶಕ್ತಿಯಲ್ಲಿ ತೋರಿಬರುವ ವೈಯಕ್ತಿಕ ಭೇದಗಳನ್ನೂ ಅನುಲಕ್ಷಿಸಬೇಕು. ಸಾಲೆಯ ಕೋಣೆಯಲ್ಲಿ ಕೂತು ಕಲಿಯುವುದು ಮಾತ್ರ ಅಭ್ಯಾಸ—ಕೆಲಸ—ವೆಂದೂ ಬಯಲಲ್ಲಿ ಆಡುವುದು ಮಾತ್ರ ಆಟವೆಂದೂ ನಾಮಾನ್ಯ ಜನರು ಮಾಡುವ ವ್ಯತ್ಯಾಸವನ್ನು ಹೋಗಲಾಡಿಸುವುದೇ ಹೊಸ ಆಂದೋಲನಗಳ ಧ್ಯೇಯವಾಗಿದೆ. ಅಂತು ನವೀನ ವಿದ್ಯಾಭ್ಯಾಸದ ತತ್ವದ ಮೇರೆಗೆ ನಾಲೆಯು ಚಪ್ಪರವಿದ್ದ ಆಟದ ಬಯಲು; "ಆಟದ ಬಯಲು ಚಪ್ಪರವಿಲ್ಲದ ಸಾಲೆ."

೭

# ಬೆಳವಣಿಗೆಯ ಸ್ಥಲಗಳು

ಮಗುವು ದೊಡ್ಡದಾಗುತ್ತ ಹೋಗುವುದು. ಅವನು ಬೆಳೆಯುತ್ತ ಹೋದಹಾಗೆ ಅವನಲ್ಲಿ ಶಾರೀರಿಕ ಮತ್ತು ಬೌದ್ಧಿಕ ಮಾರ್ಪಾಟಗಳು ಕಂಡು ಬರುತ್ತವೆ. ಮಗುವಿನ ಬೇರೆ ಬೇರೆ ವಯಸ್ಸಿನಲ್ಲಿ ಬೇರೆ ಬೇರೆ ಲಕ್ಷಣಗಳು ಒಡೆದು ತೋರುತ್ತವೆ. ಬೆಳವಣಿಗೆಯು ಸ್ವಾಭಾವಿಕವಾಗಿ ಸಾಗಿದರೂ ಪರಿಸ್ಥಿತಿಯ ಪರಿಣಾಮವು ಅದರ ಮೇಲೆ ಆಗದೇ ಇರದು. ಈ ಬೆಳವಣಿಗೆಯು ಯೋಗ್ಯ ರೀತಿಯಲ್ಲಿ ಆಗಬೇಕೆಂದು ನಿರ್ಮಿಸಿದ ವಿಶಿಷ್ಟ ಆವರಣವೇ ಶಾಲೆಯು. ಬೆಳೆಯುವ ಮಗುವಿನ ಯೋಗ್ಯತೆಯನ್ನೂ ಅಭಿರುಚಿಯನ್ನೂ ಅರಿತುಕೊಂಡು ಆಯಾ ಕಾಲಕ್ಕೆ ತಕ್ಕಂತೆ ಶಿಕ್ಷಣಯೋಜನೆಗಳನ್ನು ಸರಿಪಡಿಸಿ ಕೊಳ್ಳಬೇಕೆಂದು ಫ್ರೋಬೆಲ್‌ನು ಸ್ಪಷ್ಟವಾಗಿ ಹೇಳುತ್ತಾನೆ. ಆದ್ದರಿಂದ ಬೆಳವಣಿಗೆಯ ಲಕ್ಷಣಗಳನ್ನು ಶಾಸ್ತ್ರೀಯ ದೃಷ್ಟಿಯಿಂದ ನೋಡುವುದು ಅಗತ್ಯ. ಶಾರೀರಿಕ, ಬೌದ್ಧಿಕ ಮತ್ತು ನೈತಿಕ ಬೆಳವಣಿಗೆಗಳು ಜೊತೆ ಜೊತೆಯಾಗಿ ಸಾಗುವವೆಂದು ಕಲ್ಪಿಸಬಾರದು ಮತ್ತು ಬೆಳವಣಿಗೆಯಲ್ಲಿ ನಾವು ಮಾಡುವ ವಿಭಾಗಗಳು ಒಂದಕ್ಕೊಂದು ಬೇರೆಯಾಗಿರುವವೆಂದೂ ಊಹಿಸಬಾರದು. ಏಕೆಂದರೆ ವಿಕಾಸವು ನಿರಂತರವಾಗಿ ಸಾಗುತ್ತದೆ.

ಡಾ|| ಅರ್ನೆಸ್ಟ್ ಜೋನ್ಸ್‌ನು ಮಗುವಿನ ಬೆಳವಣಿಗೆಯಲ್ಲಿ ನಾಲ್ಕು ಮೆಟ್ಟುಗಳನ್ನು ಮಾಡುತ್ತಾನೆ: (೧) **ಬಾಲ್ಯ:** ೧ರಿಂದ ೫ ವರ್ಷಗಳ ವರೆಗೆ; (೨) **ಕುಮಾರ:** ೫ರಿಂದ ೧೨ ವರ್ಷಗಳ ವರೆಗೆ; (೩) **ತಾರುಣ್ಯ:** ೧೨ರಿಂದ ೧೮ ವರ್ಷಗಳ ವರೆಗೆ; (೪) **ಪ್ರೌಢಾವಸ್ಥೆ:** ೧೮ರಿಂದ ಮುಂದೆ. ತಾರುಣ್ಯವು ಬಾಲ್ಯದ ಪುನರಾವರ್ತನೆಯೆಂದೂ ಪ್ರೌಢಾವಸ್ಥೆಯು ಕೌಮಾರಾವಸ್ಥೆಯ ಪುನರಾವರ್ತನೆಯೆಂದೂ ಜೋನ್ಸ್‌ನ ಅಭಿಪ್ರಾಯವಿದೆ. ಎಂದರೆ ನೀರಿನ ತೆರೆಗಳಂತೆ ಬೆಳವಣಿಗೆಯಲ್ಲಿಯೂ ಏರಿಳಿತಗಳು ಇರುತ್ತವೆ.

ಬಾಲ್ಯದಲ್ಲಿಯೂ ತಾರುಣ್ಯದಲ್ಲಿಯೂ ಬೆಳವಣಿಗೆಯು ಭರದಿಂದ ಸಾಗುತ್ತದೆ. ಈ ಅವಸ್ಥೆಗಳಲ್ಲಿ ಮಗುವು ತನ್ನ ಸುತ್ತಲಿನ ಸನ್ನಿವೇಶಗಳಿಗೆ ಹೊಂದಿಕೊಳ್ಳುವುದಕ್ಕೆ ಸಾಹಸಪಡುತ್ತದೆ ಆದರೆ ಕೌಮಾರ ಮತ್ತು ಪ್ರೌಢಾವಸ್ಥೆಗಳಲ್ಲಿ ಅದಕ್ಕೆ ಒಂದು ಸ್ಥಿರತೆಯು ಪ್ರಾಪ್ತವಾಗುತ್ತದೆ; ಚಿತ್ತಚಾಂಚಲ್ಯವು ಅಡಗುತ್ತದೆ. ಆದ್ದರಿಂದ ಈ ಅವಸ್ಥೆಗಳು ಸೃಷ್ಟಿಯಿಂದ ವಿಧಿಸಲ್ಪಟ್ಟ ದೃಢೀಕರಣದ ಅವಧಿಗಳೆಂದ ತೋರುತ್ತವೆ. ( ಬಾಲಕರನ್ನು ಕುರಿತು ಹೇಳಿದ ಕೆಳಗಿನ ಮಾತುಗಳು ಸಾಮಾನ್ಯವಾಗಿ ಬಾಲಿಕೆಯರಿಗೂ ಅನ್ವಯಿಸುತ್ತವೆಂಬುದನ್ನು ಓದುಗರು ಗಮದಲ್ಲಿಟ್ಟುಕೊಳ್ಳಬೇಕು. )

ಇನ್ನು ಬೆಳವಣಿಗೆಯ ಬೇರೆ ಬೇರೆ ಸ್ಥಲಗಳನ್ನು ಅಥವಾ ಅವಸ್ಥೆಗಳನ್ನು ಕುರಿತು ಸ್ವಲ್ಪ ವಿಶದವಾಗಿ ವಿಚಾರಮಾಡುವ.

## ಬಾಲ್ಯ: ೧ ರಿಂದ ೫ ವರ್ಷ

ಹುಟ್ಟಿದ ಶಿಶುವು ತನ್ನ ಅವಯವಗಳನ್ನು ಬೇಕಾದತ್ತ ಚಲಿಸುವ ಶಕ್ತಿಯನ್ನು ಕ್ರಮೇಣ ಸಂಪಾದಿಸುತ್ತದೆ. " ನಾಲ್ಕನೆಯ ತಿಂಗಳಿಗೆ ತಲೆಯನ್ನು ಎತ್ತಿ ಹಿಡಿಯುತ್ತದೆ, ಒಂಬತ್ತನೆಯ ತಿಂಗಳಿಗೆ ಕೂತುಕೊಳ್ಳಲಿಕ್ಕೆ ಕಲಿಯುತ್ತದೆ, ಹದಿನೆಂಟನೆಯ ತಿಂಗಳಿಗೆ ಅಡ್ಡಾಡಲಿಕ್ಕೆ ಕಲಿಯುತ್ತದೆ. " ಮುಂದೆ ಜಿಗಿದಾಡಲಿಕ್ಕೆ, ಕುಂಟಾಡಲಿಕ್ಕೆ, ಕುಣಿದಾಡಲಿಕ್ಕೆ ಮತ್ತು ಓಡಾಡಲಿಕ್ಕೆ ಪ್ರಾರಂಭಿಸುತ್ತದೆ. ಮನೆಯಲ್ಲಿಯೂ ಸಾಲೆಯಲ್ಲಿಯೂ ಆಟವಾಡಲಿಕ್ಕೆ ಇದು ಅನುಕೂಲವಾಗುತ್ತದೆ. ಈ ಅವಸ್ಥೆಯಲ್ಲಿ ಸುಮ್ಮನೆ ಕೂತುಕೊಳ್ಳಬೇಕೆಂದರೆ ಮಗುವಿಗೆ ಆಗದು.

ಕೈಕಾಲುಗಳನ್ನು ಚಲಿಸುವುದರಲ್ಲಿ ಸ್ವಾತಂತ್ರ್ಯವು ಹೆಚ್ಚಿದ ಹಾಗೆಲ್ಲ ಮಕ್ಕಳಲ್ಲಿ ಕೃತಿಪ್ರೇಮವು ಉಂಟಾಗುವುದು. ಅವರು ಸ್ವತಃ ಕೈಮುಟ್ಟಿ ಕೆಲಸ ಮಾಡಲಿಕ್ಕೆ ಹಾತೆರೆಯುವರು. ಅಂತೆಯೇ ಶಿಶು ಸಾಲೆಗಳಲ್ಲಿ ಚಟುವಟಿಕೆಗೆ ಹೆಚ್ಚು ಪ್ರಾಧಾನ್ಯವನ್ನು ಕೊಡಬೇಕು. ಮೂರು–ನಾಲ್ಕನೆಯ ವಯಸ್ಸಿನಲ್ಲಿ ಕೈಗಳನ್ನು ಚೆನ್ನಾಗಿ ಉಪಯೋಗಿಸುವುದು ಗೊತ್ತಾಗುವುದರಿಂದ ಮಕ್ಕಳಿಗೆ ಬರೆಯಲಿಕ್ಕೂ ಚಿತ್ರ ತೆಗೆಯಲಿಕ್ಕೂ ಕಲಿಸಿದರೆ ಅವರು ಕಲಿಯಬಲ್ಲರು.

ತೊದಲು ನುಡಿಯಿಂದ ಪ್ರಾರಂಭಿಸಿದ ಮಗುವು ಕ್ರಮೇಣ ಶುದ್ಧವಾಗಿ ಉಚ್ಚರಿಸಲಿಕ್ಕೆ ಹವಣಿಸುವನು. ಈ ಶಾರೀರಿಕ ಚಟುವಟಿಕೆಯಲ್ಲದೆ ಬಾಲಕನಲ್ಲಿ ವಿಶಿಷ್ಟವಾದ ಮಾನಸಿಕ ಲಕ್ಷಣಗಳು ಕಂಡು ಬರುತ್ತವೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಕೆಳಗೆ ವಿವರಿಸಿದೆ.

**ಸ್ವಾಭಾವಿಕ ಪ್ರವೃತ್ತಿ.**— ಚಿಕ್ಕ ಮಗುವು ಪ್ರವೃತ್ತಿಗಳು ಪ್ರೇರಿಸಿದತ್ತ ಹೋಗುವುದು ನೈಸರ್ಗಿಕ ಪ್ರೇರಣೆಯನ್ನು ತಡೆಗಟ್ಟುವ ವಿಚಾರ ಶಕ್ತಿಯು ಅದರಲ್ಲಿ ಇನ್ನೂ ಬಂದಿರುವುದಿಲ್ಲ ಕಂಡದ್ದನ್ನು ಹಿಡಿಯಲಿಕ್ಕೂ ಹಿಡಿದದ್ದನ್ನು ಬಾಯಲ್ಲಿ ಹಾಕಕೊಳ್ಳಲಿಕ್ಕೊ ಅದು ಹಾತೊರೆಯುವದು. ಪ್ರೌಢರಾದವರು ವಿಚಾರಪರಿತು ಕೆಲಸಮಾಡುತ್ತಾರೆ ಆದರೆ ಮಗುವಿನ ವರ್ತನದಲ್ಲಿ ವಿಚಾರಕ್ಕೆ ಪ್ರಾಶಸ್ತ್ಯವಿಲ್ಲ. ಮಗುವಿನಲ್ಲಿ ನೀತಿಯ ಸೋಂಕೇ ಇಲ್ಲ; ದೇಹದ ಸುಖದುಃಖದ ಕಲ್ಪನೆಯು ಮಾತ್ರ ಉಂಟು. ಬರಬರುತ್ತ ಈ ಸುಖದುಃಖದ ಸ್ಥಾನವನ್ನು ಸಮಾಜದ ಸುತ್ತಿ-ನಿಂದೆಗಳು ವಹಿಸುತ್ತವೆ. ಆಗ ಮಗುವಿನಲ್ಲಿ ನೀತಿಯು ಅಂಕುರಿಸುವುದು.

**ಪರಾವಲಂಬನ**— ಮಗುವಿನ ಲಾಲನೆ-ಪಾಲನೆಗಳ ಹೊಣೆಯು ಅವನ ತಂದೆ-ತಾಯಿಗಳ ಮೇಲೆ ಇದೆ. ಮಗುವು ಪಾಲಕರ ಪ್ರೇಮವನ್ನೂ ಅಪೇಕ್ಷಿಸುವುದು. ಮಗುವು ಅತ್ತ ಕೂಡಲೆ ಪರಾಂಬರಿಕೆ ಮಾಡುವುದು, ಬೇಡಿದುದನ್ನೆಲ್ಲ ಒದಗಿಸಿಕೊಡುವುದು ಪ್ರೀತಿಯಾಗಿ ತೋರಿದರೂ ಅದು ಮುಂದೆ ಅವನಿಗೆ ಅಹಿತವನ್ನುಂಟುಮಾಡುವ ಸಂಭವವುಂಟು ಅನುರಾಗದ ಅತಿರೇಕವಾದರೆ ಮಗುವು ಕೆಡುವ ಸಂಭವವೇ ಹೆಚ್ಚು. ನನ್ನ್ ಮತ್ತು ಬರ್ಟರ್ಯಾಂಡ್ ರಸೆಲ್ ಅವರು ಹೇಳುವಂತೆ ಬಾಲ್ಯದಲ್ಲಿಯೆ ಮಗುವಿಗೆ ಸ್ವಾವಲಂಬನವನ್ನು ಕಲಿಸಬೇಕು. ಯಾಕೆಂದರೆ ಮುಂದೆ ಅವನು ಬೆಳೆದು ದೊಡ್ಡವನಾದ ಮೇಲೆ ನಿರ್ದಾಕ್ಷಿಣ್ಯವಾದ ಜಗತ್ತಿನಲ್ಲಿ ಸ್ವಾವಲಂಬನದಿಂದ ಜೀವಿಸಬೇಕಾಗುವುದು. ಅಲ್ಲದೆ ಸ್ವಪ್ರಯತ್ನದಿಂದ ಮಾಡಿದ ಕೃತಿಯಲ್ಲಿ ಮಗುವಿಗೆ ಅತ್ಯಂತ ಆನಂದವೆನಿಸುತ್ತದೆ. ಬಾಲಕರನ್ನು ಬೆದರಿಸಬಾರದು, ದಂಡಿಸಬಾರದು. ಬೆದರಿಕೆ, ದಂಡನೆಗಳು ಬಾಲಕರನ್ನು ಯೋಗ್ಯ ಮಾರ್ಗಕ್ಕೆ ಹಚ್ಚಿಯೇ ಬಿಡುವವೆಂದು ತಿಳಿಯುವುದು ತಪ್ಪಾದುದು.

**ಕಲ್ಪನಾ ವಿಲಾಸ.**— ಬಾಲಕನು ಕಲ್ಪನಾ ವಿಲಾಸಿಯು. ಇದು ಅವನು ಆಡುವ ಆಟಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಆಟವನ್ನು ಕುರಿತು ವಿಚಾರಿಸುವಾಗ ಕೃತಕ ನಂಬಿಗೆ, ಅಥವಾ ಭ್ರಮೆ ಎಂಬ ವಿಷಯವನ್ನು ವಿವರಿಸಿದ್ದೇವೆ. ಈ ಕೃತಕ ನಂಬಿಗೆಯ ಆಟಗಳಲ್ಲಿ ಅಥವಾ ಕತೆಗಳಲ್ಲಿ ಬಾಲಕನೇ ನಾಯಕನ ಪಾತ್ರವನ್ನು ವಹಿಸಿ ತನ್ನ ವ್ಯಾವಹಾರಿಕ ಜೀವನದ ಕಷ್ಟನಷ್ಟಗಳನ್ನು ಪರಿಹಾರಮಾಡಿಕೊಳ್ಳುತ್ತಾನೆ. ಕೋಲುಕುದುರೆಯ ಆಟ, ಎಂಜಿನ್ ಡ್ರೈವರನ ಆಟ, ಗೌಳಿಗನ ಆಟ ಮೊದಲಾದ ಆಟಗಳು ಕೇವಲ ಅನುಕರಣವಲ್ಲ. ಅವು ಭಾವವಿಮೋಚನೆಯ ಸಾಧನಗಳು. ಯಾಕೆಂದರೆ ಬಾಲಕನ ಆತ್ಮಪ್ರತಿಷ್ಠೆಯೆಂಬ ಹುಟ್ಟುಗುಣಕ್ಕೆ ವ್ಯವಹಾರದಲ್ಲಿ ಅನೇಕ ಬಾರಿ ಪ್ರತಿಕೂಲವುಂಟಾಗುತ್ತದೆ. ಅದಕ್ಕೆ ಪ್ರತೀಕಾರವಾಗಿ ಅವನು ನಟನೆಯ ಆಟಗಳಲ್ಲಿ ಸ್ವಪ್ರತಿಷ್ಠೆಯನ್ನು ಸಾಧಿಸಿ ಆನಂದವನ್ನು ಹೊಂದುತ್ತಾನೆ.

ಬಾಲಕನು ಅದ್ಭುತ ಕತೆಗಳಲ್ಲೂ ನಂಬಿಕೆಯನ್ನಿಡುತ್ತಾನೆ. 'ರಾವಣನಿಗೆ ಹತ್ತು ತಲೆಗಳು ಇದ್ದುವು' 'ಹನುಮಂತನು ತನ್ನ ಬಾಲದ ಸಹಾಯದಿಂದ ಲಂಕೆಯನ್ನು ಸುಟ್ಟನು' ಎಂದು ಬರೆದುದನ್ನು ಓದಿ ಅದನ್ನೇ ಅವನು ನಂಬುತ್ತಾನೆ. ಇವುಗಳಿಂದ ಗೊತ್ತಾಗುವುದೇನೆಂದರೆ ಬಾಲಕನು ಕಲ್ಪನಾಲೋಲನು, ಕಲ್ಪನಾಸಾಮ್ರಾಜ್ಯದಲ್ಲಿ ಸಂಚರಿಸುವವನು.

ಬಾಲಲೀಲೆಗಳಲ್ಲಿ ಆತ್ಮಪ್ರತಿಷ್ಠೆ ಮತ್ತು ವಿಧೇಯತೆಗಳು ಕಂಡುಬರುತ್ತವೆ. ಅಪರಿಚಿತ ಮನುಷ್ಯರನ್ನು ಅಥವಾ ಪ್ರಾಣಿಗಳನ್ನು ಕಂಡು ಅಂಜುವ ಬಾಲಕನು ಅವರು ಇಲ್ಲದ ವೇಳೆಯಲ್ಲಿ ಅವರಂತೆ ನಟಿಸಿ ಆನಂದದಿಂದ ಆಟವಾಡುತ್ತಾನೆ. ಹೃದಯದಲ್ಲಿ ಹುದುಗಿದ ಭಾವನೆಗಳನ್ನು ವಿಮೋಚನೆ ಮಾಡಲಿಕ್ಕೆ ಅವನು ಇಂತಹ ಕಾಲ್ಪನಿಕ ಆಟಗಳನ್ನು ಹೂಡುತ್ತಾನೆ. ಇದು ಒಳಿತಾದುದೇ. ಏಕೆಂದರೆ ಜೀವನದಲ್ಲಿ ಅನೇಕ ಕಠಿಣ ಪ್ರಸಂಗಗಳು ಒದಗಿದಾಗ ಇಂಥ ಪ್ರತಿಕ್ರಿಯೆಗಳು ಇಲ್ಲದಿದ್ದರೆ ಅವು ಸಹಿಸಲಸಾಧ್ಯವಾಗುವುವು. ಚಿಕ್ಕಮಕ್ಕಳ ಅಭ್ಯಾಸವನ್ನು ಮಾಡಿಸುವ ಶಿಕ್ಷಕನು ಇದರ ಮಹತ್ವವನ್ನು ಅರಿತವನಾಗಿರಬೇಕು. ಬಾಲಕರು ತಮ್ಮೊಳಗೆ ಬಚ್ಚಿಟ್ಟ ಭಾವಗಳನ್ನು ಹೊರಗೆಡವಬೇಕಾದರೆ ಅರ್ಥಾತ್ ಅವರ

ಬೆಳವಣಿಗೆಯು ಯೋಗ್ಯ ರೀತಿಯಲ್ಲಿ ಸಾಗಬೇಕಾದರೆ ಸಾಲೆಯಲ್ಲಿ ಕೃತಕ ನಂಬುಗೆಯ ಆಟಗಳಿಗೂ ನಟನೆಗಳಿಗೂ ಸಾಕಷ್ಟು ಅವಕಾಶವನ್ನು ಕಲ್ಪಿಸಿ ಕೊಡಬೇಕು.

**ಕಾಮಲೀಲೆ.**— ಕಾಮಪ್ರವೃತ್ತಿಯು ಶಿಶುವಿನಲ್ಲಿಯೂ ಒಂದು ವಿಶಿಷ್ಟರೂಪದಲ್ಲಿ ತೋರುತ್ತದೆಂದು ಫ್ರಾಯ್ಡ್ ಎಂಬ ತತ್ವಜ್ಞಾನಿಯು ಅಭಿಪ್ರಾಯಪಡುತ್ತಾನೆ. ತನ್ನ ಸುಖದುಃಖದಿಂದ ಮಗುವಿನಲ್ಲಿ ಸ್ವಾಂಗ ಪ್ರೇಮವು ಹುಟ್ಟುವುದು. ಈ ಆತ್ಮಪ್ರೇಮಕ್ಕೆ 'ನಾರ್ಸಿಸಿಜಂ' ಎಂದು ಎನ್ನುತ್ತಾರೆ. ಸ್ವದೇಹಾನುರಾಗದಂತೆ ಮಾತಾನುರಾಗವೂ ಪಿತಾನುರಾಗವೂ ಮಗುವಿನಲ್ಲಿ ತಲೆದೋರುತ್ತವೆ. ಏಕೆಂದರೆ ಬಾಲಕನಿಗೆ ಸೌಕರ್ಯಗಳನ್ನು ಒದಗಿಸಿ ಕೊಡುವವರು ಅವನ ತಂದೆತಾಯಂದಿರೇ ಆಗಿರುತ್ತಾರೆ. ಒಮ್ಮೊಮ್ಮೆ ಬಾಲಕನು ತಂದೆಯನ್ನೂ ಬಾಲಿಕೆಯು ತಾಯಿಯನ್ನೂ ದ್ವೇಷಿಸುವುದು ಕಂಡುಬರುತ್ತದೆ. ಇದಕ್ಕೆ ತಂದೆತಾಯಂದಿರ ಕಠೋರವೃತ್ತಿಯೆ ಕಾರಣವಾಗಿರುತ್ತದೆ. ಇಂಥ ಪ್ರಸಂಗದಲ್ಲಿ ಶಿಕ್ಷಕ, ಶಿಕ್ಷಕಿಯರು ಎಚ್ಚರದಿಂದ ವ್ಯವಹರಿಸಬೇಕು. ಶಿಕ್ಷಕ, ಶಿಕ್ಷಕಿಯರು ತಂದೆತಾಯಂದಿರ ಪಡಿಯಾಳುಗಳು. ನಿರ್ದಯೆಗೆ ಗುರಿಯಾದ ಬಾಲಕನು ತಂದೆಯ ಮೇಲಿನ ಕೋಪವನ್ನು ಶಿಕ್ಷಕನ ಮೇಲೆ ಹಾಯಿಸಬಹುದು, ಶಿಕ್ಷಕನ ಸದುದ್ದೇಶಗಳಿಗೂ ಅಡ್ಡ ಬರಬಹುದು; ಬಾಲಿಕೆಯೂ ತಾಯಿಯ ಮೇಲಿನ ಕೋಪವನ್ನು ಶಿಕ್ಷಕಿಯ ಮೇಲೆ ತೋರಿಸಬಹುದು, ಶಿಕ್ಷಕಿಯ ಸದುದ್ದೇಶಗಳಿಗೂ ಅಡ್ಡಬರಬಹುದು.

ಫ್ರಾಯ್ಡ್‌ನ ಬಾಲ್ಯದ ಕಾಮಲೀಲೆಯ ತತ್ವವನ್ನು ಸಂಪೂರ್ಣವಾಗಿ ನಂಬಲಿಕ್ಕಾಗದಿದ್ದರೂ ಅದರಲ್ಲಿ ಸ್ವಲ್ಪ ತಥ್ಯಾಂಶವಿದೆ. ತಂದೆತಾಯಂದಿರಲ್ಲಿ, ಅಣ್ಣತಮ್ಮಂದಿರಲ್ಲಿ, ಅಕ್ಕತಂಗಿಯರಲ್ಲಿ ಮಗುವು ಯಾವ ಭಾವವನ್ನು ತಳೆದಿರುತ್ತಾನೆಯೋ ಅದರ ಪರಿಣಾಮವು ಅವನು ಮುಂದೆ ಇತರ ಜನರೊಡನೆ ಇಡುವ ಸಂಬಂಧದ ಮೇಲೆ ಕಡೆತನಕ ಆಗುತ್ತದೆ. ಸಾಲೆಯಲ್ಲಿ ಒಬ್ಬ ಮಗುವು ಚಂಡಿತನದಿಂದ ವರ್ತಿಸುತ್ತಿದ್ದರೆ ಮನೆಯಲ್ಲಿ ಅವನ ಪಾಲಕರು ಅವನನ್ನು ವಾತ್ಸಲ್ಯದಿಂದ ಕಾಣರೆಂದು ನಾವು ಸಹಜವಾಗಿ ಊಹಿಸಬಹುದು.

ಚಿಕ್ಕಮಕ್ಕಳಲ್ಲಿ ಇವಲ್ಲದೆ ಬೇರೆ ಲಕ್ಷಣಗಳೂ ಕಂಡುಬರುತ್ತವೆ. ಅವರು ಯಾವಾಗಲೂ ಚಟುವಟಿಕೆಯುಳ್ಳವರು. ಅವರಿಗೆ ಆಟವೇ ಕೆಲಸ, ಕೆಲಸವೇ ಆಟ. ಅಂತೆಯೆ ಫ್ರೊಬೆಲ್ ಮತ್ತು ಮೊಂಟೇಸರಿ ಅವರು ಶಿಶುಶಿಕ್ಷಣದಲ್ಲಿ ಆಟಕ್ಕೆ ಪ್ರಥಮಸ್ಥಾನವನ್ನು ಕೊಟ್ಟಿರುವರು ಮಕ್ಕಳಿಗೆ ಹಾಡುವುದೂ ಕುಣಿಯುವುದೂ ಬಹಳವಾಗಿ ಸೇರುತ್ತದೆ. ಇದಕ್ಕೆ 'ತಾಳ-ಪ್ರೇಮ' ಎನ್ನಬಹುದು. ಆದುದರಿಂದ ಶಾಲೆಯಲ್ಲಿ ಬಾಲಕ ವರ್ಗದ ವಿದ್ಯಾರ್ಥಿಗಳು ಯಾವುದಾದರೊಂದು ಚಟುವಟಿಕೆಯಲ್ಲಿ—ಚಿತ್ರಕಲೆ, ಕೃಷಿಕರ್ಮ, ಕೈಕೆಲಸ, ವ್ಯಾಯಾಮ, ಸಂಗೀತ, ಆಟ ಮುಂತಾದವುಗಳಲ್ಲಿ ಹೆಚ್ಚು ವೇಳೆಯನ್ನು ಕಳೆಯಬೇಕು.

## ಕೌಮಾರ: ೫ ರಿಂದ ೧೨ ವರ್ಷ

ಕೌಮಾರಾವಸ್ಥೆಯಲ್ಲಿ ಮಗುವಿನ ಅವಯವಗಳು ಪುಷ್ಟಿಯಾಗುತ್ತ ಹೋಗುವುವು. ಮಿದುಳು ಬೆಳೆದು ವಿಸ್ತೃತವಾಗುವುದು ಹುಡುಗರ ಮತ್ತು ಹುಡುಗಿಯರ ನಿಲುವಿಕೆಯು ಪ್ರತಿ ವರ್ಷ ಸುಮಾರು ಎರಡು ಇಂಚಿನಷ್ಟು ಹೆಚ್ಚಾಗುತ್ತ ನಡೆಯುವುದು. ಇವರ ಮಾನಸಿಕ ಬೆಳವಣಿಗೆಯ ಲಕ್ಷಣಗಳನ್ನು ಕೆಳಗೆ ವಿವೇಚಿಸಿದೆ.

**ಸಂದರ್ಭಾನುಸರಣ.**— ಬೆಳವಣಿಗೆಯಲ್ಲಿ ಏರಿಳಿತಗಳು ಉಂಟು. ಶಾರೀರಿಕ ಬೆಳವಣಿಗೆಯಾಗಲಿ ಮಾನಸಿಕ ಬೆಳವಣಿಗೆಯಾಗಲಿ ಒಂದೇ-ಸವನೆ ಸಾಗುವುದಿಲ್ಲ. ವಿಕಾಸವು ತೆರೆಗಳೋಪಾದಿಯಲ್ಲಿ ಸಾಗುತ್ತದೆ. ಅದು ಒಮ್ಮೆ ಮುಂದರಿಯುತ್ತದೆ, ಒಮ್ಮೆ ನಿಂತಲ್ಲಿಯೇ ನಿಲ್ಲುತ್ತದೆ. ಬಾಲ್ಯವೂ ತಾರುಣ್ಯವೂ ಮುಂದೆ ಸಾಗುವ ಅವಧಿಗಳೆಂದು ತೋರುವುದು. ಹತ್ತು ಹನ್ನೊಂದು ವರ್ಷದ ಕುಮಾರರು ದೊಡ್ಡವರ ಹಾಗೆ ವರ್ತಿಸುವುದು ಕಂಡುಬರುತ್ತದೆ. ಪ್ರಸಂಗಾನುಸಾರವಾಗಿ ಹೇಗೆ ವ್ಯವಹರಿಸಬೇಕೆಂಬುದನ್ನು ಅವರು ತಿಳಿದಿರುತ್ತಾರೆ. ಪರಿಸ್ಥಿತಿಗೆ ತಕ್ಕಂತೆ ವರ್ತಿಸುವುದು ಕುಮಾರರ ಮುಖ್ಯ ಲಕ್ಷಣವು.

ಕೌಮಾರಾವಸ್ಥೆಯು ಪ್ರಾಪ್ತವಾದೊಡನೆ ಬಾಲ್ಯದ ಕಲ್ಪನಾಸೃಷ್ಟಿಯು ಮಾಯವಾಗಿ ವ್ಯಾವಹಾರಿಕ ದೃಷ್ಟಿಯು ತಲೆದೋರುತ್ತದೆ. ಪ್ರಾಥಮಿಕ ಶಾಲೆಗೆ ಹೋಗತೊಡಗಿದ ಏಳನೆಯ ವರ್ಷದ ಬಾಲಕನಿಗೆ ಆಟ ಮತ್ತು ಕೆಲಸ ಇವುಗಳ ನಡುವಿನ ಭೇದವು ತಿಳಿಯತೊಡಗುತ್ತದೆ.

**ಸಂಘಚರ್ಯೆ.**—ಚಿಕ್ಕವನಿರುವಾಗ ಬಾಲಕನು ಸ್ವಾರ್ಥಪರಾಯಣ ನಾಗಿರುತ್ತಾನೆ. ಆದರೆ ಈಗ ಅವನು ಅದನ್ನು ಬಿಟ್ಟು ಓರಿಗೆಯ ಗೆಳೆಯರ ಕೂಡ ಆಡತೊಡಗುತ್ತಾನೆ. ಗೆಳೆಯರ ಸಹವಾಸವೆಂದರೆ ಅವನಿಗೆ ಅತ್ಯಂತ ಮೆಚ್ಚುಗೆಯ ವಿಷಯ. ಒಂದು ಮೇಳದಲ್ಲಿ ಸೇರಿಕೊಂಡು ಮೇಳದ ಒಡನಾಡಿಗಳ ಕೂಡ ಆಡುವುದರಲ್ಲಿ ಅವನು ಕಾಲವನ್ನು ಕಳೆಯುತ್ತಾನೆ; ಮನೆಯಲ್ಲಿಯೇ ಇರಲು ಒಪ್ಪುವುದಿಲ್ಲ. ತಾಯಿಯೇ ತನ್ನ ಸರ್ವಸ್ವವೆಂಬ ಬಾಲ್ಯದ ಭಾವನೆಯು ಕುಂದುವುದು. ಇದನ್ನೆಲ್ಲ ತಾಯಿಯು ಅನ್ಯಥಾ ಭಾವಿಸದೆ, ಇದು ತನ್ನ ಮಗುವಿನ ಯೋಗ್ಯ ಬೆಳವಣಿಗೆಯ ಸ್ವಾಭಾವಿಕ ಮಾರ್ಗವೆಂದು ತಿಳಿಯಬೇಕು.

ಕೌಮಾರಾವಸ್ಥೆಯಲ್ಲಿ ಸಂಘಪ್ರವೃತ್ತಿಯು ಪ್ರಬಲವಾಗಿರುವುದೇನೊ ನಿಜ. ಆದರೆ ಉಚ್ಚ ತರಗತಿಯ ಸಾಮಾಜಿಕ ವರ್ತನವು ಹತ್ತು ವರ್ಷದ ಹುಡುಗನಲ್ಲಿ ಕಂಡುಬರುವುದಿಲ್ಲ. ಪರೋಪಕಾರದ ಮತ್ತು ಸ್ವಾರ್ಥತ್ಯಾಗದ ಗುಣಗಳು ಅವನಲ್ಲಿ ಇನ್ನೂ ಹುಟ್ಟಿರುವುದಿಲ್ಲ. ಪ್ರಾಚೀನ ಕಾಲದ ಬೇಟೆ ಯಾಡುವ ಟೋಳಿಗಳಂತೆ ಹಿಂಡು ಕಟ್ಟಿಕೊಂಡು ತಿರುಗುವುದು ಮಾತ್ರ ಅವನಲ್ಲಿ ಕಂಡುಬರುತ್ತದೆ. ಆದರೂ ಹುಡುಗರ ಸಂಘದಲ್ಲಿ ಒಂದು ವ್ಯವಸ್ಥೆಯು ಇರುತ್ತದೆ. ಅವರಲ್ಲಿಯೆ ಕೆಲವರು ನಾಯಕರು ಆಗಿರುತ್ತಾರೆ, ಕೆಲವರು ಅನುಯಾಯಿಗಳು ಆಗಿರುತ್ತಾರೆ. ಹುಡುಗರಲ್ಲಿ ಸಂಘಪ್ರವೃತ್ತಿ ಯೊಡನೆ ಯುದ್ಧ ಮತ್ತು ಸಂಗ್ರಹಪ್ರವೃತ್ತಿಗಳೂ ತಲೆದೋರುತ್ತವೆ. ಆದರೆ ಅವು ಸಮಾಜಕ್ಕೆ ಅಹಿತವಾದ ಮಾರ್ಗದಲ್ಲಿ ಬೆಳೆಯದಂತೆ ನಾವು ಎಚ್ಚರ ಪಡಬೇಕು. ಕೌಮಾರ ಸ್ಥಲದ ಮಕ್ಕಳಲ್ಲಿ ಸ್ವಾಭಿಮಾನವೂ ಉಂಟಾ ಗುವುದರಿಂದ ಮನೆಯಲ್ಲಾಗಲಿ ಸಾಲೆಯಲ್ಲಾಗಲಿ ಅವರನ್ನು ಅಧಿಕಾರದ ನಿರ್ಬಂಧದಲ್ಲಿ ಇಡದೆ ಅವರಿಗೆ ಸ್ವಾತಂತ್ರ್ಯವನ್ನು ಕೊಡಬೇಕು.

ಹುಡುಗನ ನೀತಿ-ನಡಾವಳಿಗಳು ಅವನ ಮೇಳದ ಅಥವಾ ಗುಂಪಿನ ಸ್ತುತಿ-ನಿಂದೆಗಳಿಂದ ಬದಲಾವಣೆಯನ್ನು ಹೊಂದುತ್ತವೆ. ಸಂಘಾಭಿಮಾನವು ಅವನಲ್ಲಿ ಅಧಿಕವಾಗಿರುವುದರಿಂದ ತನ್ನ ಸಂಘದ ನಿಯಮಗಳನ್ನು ಅವನು ಪಾಲಿಸುತ್ತಾನೆ. ಅವನು ತನ್ನ ಸಂಘದ ನಾಯಕನ ಮಾತನ್ನು ಕೇಳುವಂತೆ ಬೇರೆ ಯಾರ ಮಾತನ್ನೂ ಕೇಳನು. ತನ್ನ ಸಂಘದವರು ಹೇಳಿದಂತೆ ಕೇಳಿ ಸಾಲೆಯ ಮಾಸ್ತರರನ್ನು ಮೋಸಗೊಳಿಸಲಿಕ್ಕೂ ಅವರೆದುರಿನಲ್ಲಿ ಸುಳ್ಳು ಹೇಳುವುದಕ್ಕೂ ಅವನು ಹಿಂಜರಿಯನು. ಇಂತಹ ಪ್ರಸಂಗಗಳಲ್ಲಿ ಉಪಾಧ್ಯಾಯನು ಸಹಾನುಭೂತಿಯಿಂದ ವರ್ತಿಸಬೇಕು; ತಾನು ಗುಂಪಿನ ವೈರಿಯಲ್ಲವೆಂಬುದನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕು ಗುಂಪಿನ ಬಗ್ಗೆ ತೋರಿಸುವ ಸ್ವಾಮಿನಿಷ್ಠೆಯನ್ನೂ ಕಾರ್ಯತತ್ಪರತೆಯನ್ನೂ ಸಾಲೆಯೆಂಬ ದೊಡ್ಡ ಸಂಘದ ಸೇವೆಯಲ್ಲಿ ತೊಡಗಿಸಲು ಶಿಕ್ಷಕನು ಪ್ರಯತ್ನಿಸಬೇಕು. ಸಾಲೆಯ ಶಿಕ್ಷಕನು ಸ್ಕೌಟ್ ಮಾಸ್ತರನಂತೆ ಹುಡುಗರ ಸಣ್ಣ ಸಣ್ಣ ಸಂಘಗಳನ್ನು ಮಾಡಿಕೊಟ್ಟು ಅವರಲ್ಲಿ ಪ್ರಕಟವಾಗುವ ಗುಂಪಿನ ಅಭಿಮಾನವನ್ನು ಯೋಗ್ಯ ಮಾರ್ಗದ ಕಡೆಗೆ ಪರಿವರ್ತಿಸಬೇಕು.

**ಬಾಹ್ಯದೃಷ್ಟಿ.—** ಬಾಲಕನಲ್ಲಿ ತೋರುವ ಮನೋಸಾಮ್ರಾಜ್ಯವು ಕುಮಾರನಾದಾಗ ಅಳಿದುಹೋಗುತ್ತದೆ. ಈಗ ಅವನು ಮನೆಯ ಹೊರಗಿನ ಆಟನೋಟಗಳಲ್ಲಿ ಆನಂದಪಡುತ್ತಾನೆ. ಬಾಹ್ಯಸೃಷ್ಟಿಯ ಕಡೆಗೆ ಅವನ ನೋಟವು ಹೊರಳುತ್ತದೆ. ವಸ್ತುಸ್ಥಿತಿಯನ್ನು ಅರಿಯಲು ಅವನು ಪ್ರಯತ್ನಪಡುತ್ತಾನೆ. ದೊಡ್ಡವರನ್ನು ಪ್ರಶ್ನಿಸಿ ಅನೇಕ ವಿಷಯಗಳ ಜ್ಞಾನಮಾಡಿಕೊಳ್ಳುತ್ತಾನೆ. ಕುಮಾರರಲ್ಲಿ ಕುತೂಹಲ ಪ್ರವೃತ್ತಿಯು ಪ್ರಬಲವಾಗಿರುವುದರಿಂದ ಅದನ್ನು ಪೂರ್ಣ ಪೋಷಿಸುವಂತೆ ಅಭ್ಯಾಸ ಪತ್ರಿಕೆಯನ್ನು ಮತ್ತು ಕಲಿಸುವ ಪದ್ಧತಿಗಳನ್ನು ಯೋಚಿಸಬೇಕು. ಹನ್ನೆರಡು ವರ್ಷದ ಹುಡುಗನಲ್ಲಿ ವ್ಯಾವಹಾರಿಕ ದೃಷ್ಟಿಯು ಬಲಗೊಂಡಿರುವುದರಿಂದ ಸಮಾಜದಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ಅವನು ಕಲಿಯುತ್ತಾನೆ.

ಮಗುವು ಏಳನೆಯ ವರ್ಷದಲ್ಲಿ ಹೆಜ್ಜೆಯನ್ನಿಕ್ಕುತ್ತಲೆ ಅವನ ಬುದ್ಧಿಯು ವಿಕಾಸಗೊಳ್ಳುತ್ತದೆ; ಸ್ಮರಣಶಕ್ತಿಯು ಬೆಳೆಯುತ್ತದೆ;

ಏಕಾಗ್ರತೆಯು ಹೆಚ್ಚುತ್ತದೆ. ಆಗ ಅವನು ಪ್ರಾಥಮಿಕ ಶಾಲೆಯನ್ನು ಪ್ರವೇಶಿಸಲು ಯೋಗ್ಯನಾಗುತ್ತಾನೆ. ಇಂಗ್ಲಂಡ್ ಮೊದಲಾದ ದೇಶಗಳಲ್ಲಿ ಜನರು ಮಕ್ಕಳು ಮೂರನೆಯ ವರ್ಷದವರಾದ ಕೂಡಲೆ ಅವರನ್ನು ಮಾಂಟೇಸರಿ ಅಥವಾ ಕಿಂಡರ್ ಗಾರ್ಟನ್ ಶಿಕ್ಷಣಪದ್ಧತಿಯ ಸಂಸ್ಥೆಗಳಿಗೆ ಕಳಿಸುತ್ತಾರೆ. ನಮ್ಮ ದೇಶದಲ್ಲಿ ಆ ತರದ ಸಾಲೆಗಳು ಇಲ್ಲವೆಂದು ಹೇಳಲಿಕ್ಕೆ ಆಗದಿದ್ದರೂ ತೀರ ವಿರಳವಾಗಿವೆಯೆಂದು ದುಃಖದೊಡನೆ ಒಪ್ಪಬೇಕಾಗುತ್ತದೆ. ಕೌಮಾರಾವಸ್ಥೆಯು ಓದುಬರೆಹ ಮತ್ತು ಗಣಿತವನ್ನು ಕಲಿಸಲು ಪ್ರಾರಂಭಿಸಲಿಕ್ಕೆ ತಕ್ಕ ಸಮಯವು. ಹುಡುಗರ ಪಾಠಗಳು ಮುಖ್ಯವಾಗಿ ಚಿತ್ರಗಳ ಸಹಾಯದಿಂದ ಸಾಗಬೇಕು. ಹುಡುಗನು ಸ್ಥೂಲ ವಸ್ತುಗಳ ಮುಖಾಂತರವೇ ವಿಚಾರಿಸುವುದರಿಂದ ಶಿಕ್ಷಕನು ಪಾಠ ಕಲಿಸುವಾಗ ಭಾವವಾಚಕ ಪ್ರಯೋಗವನ್ನು ಅನಿವಾರ್ಯ ಪಕ್ಷದಲ್ಲಿ ಮಾತ್ರ ಉಪಯೋಗಿಸಬೇಕು.

## ತಾರುಣ್ಯ : ೧೨ ರಿಂದ ೧೮ ವರ್ಷ

ತಾರುಣ್ಯದಲ್ಲಿ ಕಾಲಿಟ್ಟೊಡನೆ ತರುಣರಲ್ಲಿಯೂ ತರುಣಿಯರಲ್ಲಿಯೂ ಶಾರೀರಿಕ ಮತ್ತು ಮಾನಸಿಕ ಅತಿ ಮಹತ್ವದ ಬದಲಾವಣೆಗಳು ಕಂಡು ಬರುತ್ತವೆ. ಹುಡುಗರಿಗಿಂತ ಹುಡುಗೆಯರಿಗೆ ಯೌವನವು ಬೇಗನೆ ಪ್ರಾಪ್ತವಾಗುವುದು. ಹನ್ನೆರಡು ಮತ್ತು ಹದಿನಾಲ್ಕು ವಯಸ್ಸಿನೊಳಗೆ ಹುಡುಗರಿಗಿಂತ ಹುಡುಗೆಯರು ತೀವ್ರ ಬೆಳೆಯುವರು; ಮತ್ತು ಹುಡುಗರಿಗಿಂತ ಅವರು ಹೆಚ್ಚು ಎತ್ತರವಾಗಿಯೂ ಹೆಚ್ಚು ಸ್ಥೂಲವಾಗಿಯೂ ಕಾಣುವರು. ಹದಿನಾಲ್ಕು ವರ್ಷದ ನಂತರ ಹುಡುಗೆಯರಿಗಿಂತ ಹುಡುಗರ ಬೆಳವಣಿಗೆಯು ಹೆಚ್ಚು ಭರದಿಂದ ಸಾಗುವುದು. ಈ ವಯಸ್ಸಿನಲ್ಲಿ ಸ್ನಾಯುಗಳು ಬಲಪಡುವದರಿಂದ ಹೆಚ್ಚು ವ್ಯಾಯಾಮ ಮಾಡಲಿಕ್ಕೂ ಹುತುತು, ಖೋಖೊ, ಹಾಕಿ, ಫುಟ್‌ಬಾಲ್ ಮೊದಲಾದ ಬಯಲಾಟಗಳನ್ನು ಆಡಲಿಕ್ಕೂ ಅವರು ಶಕ್ತರಾಗುವರು. ತಾರುಣ್ಯದಲ್ಲಿ ಕಂಠವು ಬಲಿಯುವುದರಿಂದ ಧ್ವನಿಯೂ ಬದಲಾಗುವುದು.

ತಾರುಣ್ಯ ಸ್ಥಲದ ಬಗೆಗೆ ಡಾಕ್ಟರ್ ಅರ್ನೆಸ್ಟ್ ಜೋನ್ಸ್‌ನು ಹೇಳುವ ಹೊಸ ವಿಚಾರಗಳನ್ನು ನನ್ಸ್, ರಾಸ್ ಮೊದಲಾದವರು ಸ್ವೀಕರಿಸಿರುತ್ತಾರೆ. ಬಾಲ್ಯ ಮತ್ತು ತಾರುಣ್ಯದಲ್ಲಿ ತೋರಿಕೆಗೆ ಮಾತ್ರ ವೈಷಮ್ಯವುಂಟು. ಆದರೆ ಆಳವಾಗಿ ವಿಚಾರಿಸಿದರೆ ಸಾಮ್ಯವೇ ಹೆಚ್ಚೆಂಬುದು ತೋರಿಬರುತ್ತದೆ. ಬಾಲಕರ ಸಮಸ್ಯೆಗಳೇ ತರುಣರ ಸಮಸ್ಯೆಗಳು. ಆತ್ಮ ಸಂಯಮನ, ಇಂದ್ರಿಯ ನಿಗ್ರಹ, ಸಮಾಜಭಾವನೆ, ಜಗತ್ತಿನ ನಿಜವಾದ ಕಲ್ಪನೆ ಮುಂತಾದ ಸಮಸ್ಯೆಗಳೂ ಬಾಲಕನಿಗೆ ಎದುರಾಗುವಂತೆ ತರುಣ ನಿಗೂ ಎದುರಾಗುತ್ತವೆ. ಆಗ ತರುಣನ ಮಾನಸಿಕ ಸ್ಥಿತಿಯು ಹೇಗಿರುವ ದೆಂಬುದನ್ನು ಕೆಳಗೆ ವಿವರಿಸಲಾಗಿದೆ.

**ಭಾವೋದ್ರೇಕ.**—ತರುಣನು ಉದ್ರೇಕ ಸ್ವಭಾವದವನು. ಬಾಲಕ ನಂತೆ ತರುಣನೂ ಭಾವಜೀವಿಯು. ಮಗುವು ತಾರುಣ್ಯ ಸ್ಥಲದಲ್ಲಿ ಇದ್ದಾಗ ಕೌಮಾರಾವಸ್ಥೆಯ ಸ್ಥಿರತೆ ನಿದಾನವೃತ್ತಿಗಳು ಮಾಸಿಹೋಗುತ್ತವೆ. ಅವನಿಗೆ ದ್ವಿತೀಯ ಬಾಲ್ಯವು ಬರುತ್ತದೆ. ಎಂದರೆ ಜಗತ್ತು ವಿಲಕ್ಷಣವಾಗಿ ಕಾಣಿಸುತ್ತದೆ ಅದಕ್ಕೆ ಹೊಂದಿಕೊಂಡು ಹೋಗುವುದನ್ನು ಬಾಲಕನಂತೆ ತರುಣನು ಪುನಃ ಕಲಿಯಬೇಕಾಗುತ್ತದೆ. ತರುಣನು ವಿಚಾರಮಗ್ನನಾಗಿ ಇರುವುದು ಬಹಳ. ತರುಣ, ತರುಣಿಯರಲ್ಲಿ ಲಜ್ಜೆಯು ತಲೆದೋರುತ್ತದೆ. ಯಾವ ಸಂದರ್ಭಗಳಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ಹೊಸದಾಗಿ ಅವರು ಕಲಿಯುತ್ತಾರೆ. ತಾರುಣ್ಯವು ಪ್ರಾಪ್ತವಾದಾಗ ಬುದ್ಧಿ ಬೆಳವಣಿಗೆಯು ಪೂರ್ಣಾವಸ್ಥೆಯನ್ನು ಹೊಂದುತ್ತಿದ್ದರೂ ವಿವೇಕಕ್ಕಿಂತ ಭಾವೋದ್ರೇಕವೇ ಪ್ರಧಾನವಾಗಿರುತ್ತದೆ. ತಾರುಣ್ಯವು ಉದ್ವೇಗದ ತವರುಮನೆಯು. ಮೋದ ಖೇದಗಳ ಅತಿರೇಕದಲ್ಲಿ ತರುಣನು ಅಲೆದಾಡುತ್ತಾನೆ. ಶುಕನಾಸ ಮಂತ್ರಿಯು ಚಂದ್ರಾಪೀಡನಿಗೆ ಮಾಡಿದ ಉಪದೇಶದಲ್ಲಿ ತಾರುಣ್ಯವು ಒದಗಿದಾಗ ಯುವಕರು ಹೇಗೆ ವರ್ತಿಸುವುರೆಂಬುದನ್ನು ಚೆನ್ನಾಗಿ ವಿವರಿಸಿದ್ದಾನೆ.

**ಕಲ್ಪನಾ–ಸಾಮ್ರಾಜ್ಯ.**— ಬಾಲ್ಯದ ಕಲ್ಪನಾವಿಲಾಸದ ಪುನರಾ ವೃತ್ತಿಯು ತರುಣನು ನಿರ್ಮಿಸಿಕೊಳ್ಳುವ .ಮನೋರಾಜ್ಯದಲ್ಲಿ ಕಂಡು

ಬರುತ್ತದೆ; ಜೀವನವು ಕಠಿಣವಾಗಿ ತೋರುತ್ತದೆ. ಕೌಮಾರದ ಹಗಲು ಗನಸುಗಳಲ್ಲಿ ಬಹಿರ್ಮುಖನಾದವನು ಈಗ ಅಂತರ್ಮುಖನಾಗುತ್ತಾನೆ; ಅಂತರಾಲೋಚಕನೂ ಸ್ವಾಂಗಪ್ರೇಮಿಯೂ ಆಗುತ್ತಾನೆ; ಸತ್ಯಜಗತ್ತಿನಿಂದ ಮಿಥ್ಯಾಜಗತ್ತಿಗೆ ತೆರಳುತ್ತಾನೆ. ಈ ಸಮಯದಲ್ಲಿ ಕೃತಕ-ನಂಬಿಗೆಯ ಚಟುವಟಿಕೆಗಳಿಗೆ ಅವಕಾಶವನ್ನೀಯುವುದು ಆವಶ್ಯಕವಾಗಿದೆ.

**ಕಾಮುಕತೆ.**— ಕಾಮಪ್ರವೃತ್ತಿಯು ತರುಣರಲ್ಲಿ ಅತ್ಯಂತ ಪ್ರಬಲವಾಗಿರುತ್ತದೆ. ಕಾಮನ ಕೂರಂಬುಗಳಿಂದ ಯುವಕನ ಹೃದಯವು ವಿದೀರ್ಣವಾಗುತ್ತದೆ. ಕಾಮನನ್ನು ಜಯಿಸುವುದು ಅಸಾಧ್ಯವೆಂದು ತೋರುತ್ತದೆ ಕಾಮನಿಗೆ ವಶರಾಗದ ಯುವಕರು ವಿರಳವೆಂದೇ ಹೇಳಬಹುದು. ಕಾಮಪ್ರವಾಹವು ಬಾಲ್ಯದಲ್ಲಿ ತಂದೆತಾಯಂದಿರ ಪ್ರೇಮದ ರೂಪವನ್ನು ತಳೆದಿದ್ದಿತು. ಅದು ಕೌಮಾರದಲ್ಲಿ ಸ್ತಬ್ಧವಾಗಿದ್ದು ತಾರುಣ್ಯದಲ್ಲಿ ಅನ್ಯವ್ಯಕ್ತಿಗಳ ಕಡೆಗೆ ಹರಿಯುವುದೆಂದು ಡಾ|| ಜೋನ್ಸ್‌ನು ನಂಬುತ್ತಾನೆ. ಯುವಕನ ಕಾಮಪ್ರವೃತ್ತಿಯು ಮೂರು ತೆರನಾಗಿರುತ್ತದೆ: (೧) ಸ್ವದೇಹ ಕಾಮ, (೨) ಸಜಾತಿ ಕಾಮ, (೩) ವಿಜಾತಿ ಕಾಮ. ಕಾಮವೆಂದರೆ ಮೋಹ. ತರುಣರು ತಮ್ಮ ದೇಹಲಾವಣ್ಯಕ್ಕಾಗಿ ಅಭಿಮಾನ ತಾಳುತ್ತಾರೆ. ಯುವತಿಯು ತಾನು ರತಿಯೆಂದೂ ಯುವಕನು ತಾನು ಮನ್ಮಥನೆಂದೂ ಭಾವಿಸುತ್ತಾರೆ. ಸಜಾತಿ ಪ್ರೇಮವು ಜೀವದ ಗೆಳೆತನದಲ್ಲಿ ಕಂಡುಬರುತ್ತದೆ. ಗೆಳೆಯರ ಗುಂಪುಗಳನ್ನೂ, ಗೆಳತಿಯರ ಗುಂಪುಗಳನ್ನೂ ನಾವು ನೋಡುತ್ತೇವೆ. ವಿಜಾತಿ ಪ್ರೇಮವೆಂದರೆ ಯುವಕನು ಯುವತಿಯನ್ನೂ ಯುವತಿಯು ಯುವಕನನ್ನೂ ಪ್ರೀತಿಸುವುದು. ಇದು ರೂಪುಗೊಳ್ಳುವುದು ತಾರುಣ್ಯದಲ್ಲಿಯೆ. ತಾರುಣ್ಯವು ಪ್ರಣಯದ ಕಾಲವು. “ ಪುರುಷನ ಮುಂದೆ ಸ್ತ್ರೀಯಾಗಿ ಕಾಡಿತ್ತು ಮಾಯೆ, ಸ್ತ್ರೀಯ ಮುಂದೆ ಪುರುಷನಾಗಿ ಕಾಡಿತ್ತು ಮಾಯೆ.” ( —ಅಕ್ಕ ಮಹದೇವಿ.)

ಶಿಕ್ಷಕನು ಯುವಕರ ಸಂಗಡ ಮಿತ್ರಭಾವದಿಂದಲೂ ಸಹಾನುಭೂತಿಯಿಂದಲೂ ವರ್ತಿಸಬೇಕು. ತರುಣರಲ್ಲಿ ಕಂಡುಬರುವ ಅಪರಾಧಗಳು ಅಸ್ವಾಭಾವಿಕವಲ್ಲ. ಕೇವಲ ಶಾರೀರಿಕ ವ್ಯಾಯಾಮಗಳಿಂದ ತರುಣರ

ಯೋಜನೆಯನ್ನು ಮಾಡಿದೆ. ಈ ಬಗೆಯ ಯೋಜನೆಯು ಹಿಂದುಸ್ತಾನ ದಲ್ಲಿ ಸರ್ವತ್ರ ಪ್ರಚಾರದಲ್ಲಿ ಬಂದರೆ ರಾಷ್ಟ್ರೋನ್ನತಿಗೆ ಸಹಾಯವಾಗುವುದು.

ಗೋಪಾಲಕೃಷ್ಣ ಗೋಖಲೆಯವರು ಪ್ರಾಥಮಿಕ ಶಿಕ್ಷಣವು ಕಡ್ಡಾಯ ವಾಗಿಯೂ ಉಚಿತವಾಗಿಯೂ ಕೊಡಲ್ಪಡಬೇಕೆಂಬ ಒಂದು ಗೊತ್ತುವಳಿ ಯನ್ನು ಹಿಂದುಸ್ತಾನದ ಕೇಂದ್ರ ಸರಕಾರದ ಸಭೆಯಲ್ಲಿ ಸನ್ ೧೯೧೦ರಲ್ಲಿ ತಂದಿದ್ದರು. ಆದರೆ ಸರಕಾರದವರು ಅದನ್ನು ಸ್ವೀಕರಿಸಲಿಲ್ಲ. ಆದರೂ ಬೇರೆ ಬೇರೆ ಪ್ರಾಂತಗಳಲ್ಲಿ ಒತ್ತಾಯ ಶಿಕ್ಷಣವು ಸರಕಾರದ ಪ್ರೋತ್ಸಾಹ ದಿಂದ ಕೆಲಮಟ್ಟಿಗೆ ಜಾರಿಯಲ್ಲಿ ಬಂದಿದೆ. ಆದರೆ ಇಷ್ಟರಿಂದ ತೃಪ್ತರಾಗದೆ ಹಿಂದುಸ್ತಾನದ ಎಲ್ಲ ಮಕ್ಕಳಿಗೂ ಸಾಮಾನ್ಯ ಶಿಕ್ಷಣವು ( General Education ) ಅವಶ್ಯವಾಗಿ ದೊರೆಯುವಂತೆ ಸರಕಾರದವರೂ ರಾಷ್ಟ್ರದ ಹಿತಚಿಂತಕರಾದ ಮುಖಂಡರೂ ಪ್ರಯತ್ನಿಸಬೇಕು. ಇದನ್ನುದ್ದೇಶಿಸಿಯೆ ವರ್ಧಾ ಶಿಕ್ಷಣ ಯೋಜನೆಯು ರಚಿಸಲ್ಪಟ್ಟಂತೆ ತೋರುತ್ತದೆ. ಅದು ಇನ್ನೂ ಪ್ರಯೋಗಾವಸ್ಥೆಯಲ್ಲಿ ಇದೆ. ಬಾಲಕರ ಲಕ್ಷಣಕ್ಕೆ ತಕ್ಕಂತೆ ವರ್ಧಾ ಯೋಜನೆಯಲ್ಲಿ ಚಟುವಟಿಕೆಗೆ ಪ್ರಾಧಾನ್ಯವಿದೆ ಆದರೆ ಬಾಲಕರ ಕೈಕೆಲಸ ದಲ್ಲಿ ಹೆಚ್ಚು ವೇಳೆ ವ್ಯಯವಾಗುವುದೆಂದು ಮತ್ತು ಸಾಮಾನ್ಯ ಶಿಕ್ಷಣಕ್ಕೆ ಬಾಧೆ ಬರುವುದೆಂದು ಕೆಲವು ಶಿಕ್ಷಣತಜ್ಞರು ಆಕ್ಷೇಪಿಸುತ್ತಾರೆ. ಸಾಮಾನ್ಯ ಶಿಕ್ಷಣವು ಮಕ್ಕಳ ೧೬ನೆಯ ವಯಸ್ಸಿನ ವರೆಗೆ ಕೊಡಲ್ಪಡಬೇಕು. ಇದಕ್ಕೆ ಮನಶ್ಶಾಸ್ತ್ರದ ಆಧಾರವುಂಟು. ಹುಡುಗರಿಗೆ ೧೪ನೆಯ ವರ್ಷಕ್ಕೆ, ಹುಡುಗೆ ಯರಿಗೆ ೧೨ನೆಯ ವರ್ಷಕ್ಕೆ ಪ್ರಾಯವು ಪ್ರಾಪ್ತವಾಗುವುದರಿಂದ ಆಗ ಶಿಕ್ಷಣವನ್ನು ನಿಲ್ಲಿಸುವುದು ಒಂದು ಬಗೆಯ ಅಪರಾಧವೇ ಎಂದು ರಾಸ್ಸನು ಹೇಳುತ್ತಾನೆ. ಆದುದರಿಂದ ಯಾವುದೇ ಶಿಕ್ಷಣ ಯೋಜನೆಯನ್ನು ಪ್ರಚಾರ ದಲ್ಲಿ ತರುವ ಪೂರ್ವದಲ್ಲಿ ಅದಕ್ಕೆ ಮನಶ್ಶಾಸ್ತ್ರವು ಆಧಾರವಾಗಿದೆಯೋ ಇಲ್ಲವೋ ಎಂಬುದನ್ನು ಪರಿಶೀಲಿಸಬೇಕು.

ಪ್ರಾಥಮಿಕ ಶಿಕ್ಷಣದ ಹಾಗೆ ಮಾಧ್ಯಮಿಕ ಶಿಕ್ಷಣವೂ ಎಲ್ಲರಿಗೆ ಆವಶ್ಯಕವಾದುದು. ಆ್ಯಬಟ್-ಉಡ್ ಕಮೀಟಿಯವರು ಸಾಲೆಯ ಶಿಕ್ಷಣ ದಲ್ಲಿ ಹೆಚ್ಚಾಗಿ **ವೈವಿಧ್ಯವು** ಆವಶ್ಯಕವೆಂದು ತಮ್ಮ ೧೯೩೭ನೆಯ ಇಸವಿಯ ರಿಪೋರ್ಟಿನಲ್ಲಿ ತೋರಿಸಿರುವರು. ಮೈಸೂರು ಶಿಕ್ಷಣ ಸಮಿತಿಯವರು

ಮಾಧ್ಯಮಿಕ ಶಿಕ್ಷಣದಲ್ಲಿ ಈ ತರದ ಮಾರ್ಪಾಟುಗಳು ಬೇಕೆಂಬ ಯೋಜನೆಯನ್ನು ೧೯೩೭ರಲ್ಲಿಯೇ ಸೂಚಿಸಿರುವರು. ತಾತ್ಪರ್ಯವೇನೆಂದರೆ, ಹುಡುಗರ ವಿವಿಧ ಸಾಮರ್ಥ್ಯಗಳಿಗೆ ಅನುಗುಣವಾದ ಔದ್ಯೋಗಿಕ ಶಿಕ್ಷಣವು ಆವಶ್ಯಕವಾಗಿದೆ. ಮಾಧ್ಯಮಿಕ ಶಿಕ್ಷಣವು ಹನ್ನೆರಡರಿಂದ ಹದಿನಾರನೆಯ ವರುಷದ ವರೆಗೆ ಸಾಗುವುದು. ಆಗ ಮಕ್ಕಳಲ್ಲಿ ಔದ್ಯೋಗಿಕ ವೃತ್ತಿಯನ್ನು ಬೆಳೆಯಿಸುವ ಅನೇಕ ತರದ ಸಾಲೆಗಳು ಬೇಕು. ಅಲ್ಲಿ ಪ್ರತಿನಿತ್ಯದ ಜೀವನಕ್ಕೆ ಸಂಬಂಧಿಸಿದ ಸಂಗತಿಗಳನ್ನೂ ವ್ಯಾವಹಾರಿಕ ದೃಷ್ಟಿಯಿಂದ ಕಲಿಸಬೇಕು. ಆದರೆ ಸಾಲೆಯಲ್ಲಿ ಸಾಮಾನ್ಯ ಶಿಕ್ಷಣಕ್ಕೆ ಬಾಧೆ ಬರದಂತೆ ವೃತ್ತಿಶಿಕ್ಷಣದ ಪರಿಚಯವನ್ನು ಹುಡುಗರಿಗೆ ಮಾಡಿಸಿ ಕೊಡಬೇಕು. ಕೇವಲ ಔದ್ಯೋಗಿಕ ಸಾಲೆಗಳು ಪ್ರತ್ಯೇಕವಾಗಿರಬೇಕು. ಅವುಗಳಿಗೆ ಪ್ರವೇಶವು ದೊರೆಯಬೇಕಾದರೆ ವಿದ್ಯಾರ್ಥಿಯು ಮೊದಲು 'ಪ್ರಾಥಮಿಕ' ಶಿಕ್ಷಣವನ್ನೂ 'ಮಾಧ್ಯಮಿಕ' ಶಿಕ್ಷಣವನ್ನೂ ಪಡೆದಿರಲೇಬೇಕು. ಹಿಂದುಸ್ತಾನದ ಬಾಲಕ-ಬಾಲಿಕೆಯರೆಲ್ಲರೂ ವೃತ್ತಿಶಿಕ್ಷಣವನ್ನು ಪಡೆಯುವುದು ಅಗತ್ಯ. ಆದರೆ ಅದು ಐಚ್ಛಿಕವಾಗಿರಬೇಕು. ಟಿ. ಎಸ್. ಸಿಕ್ವೇರಾ ಅವರು ಹೇಳುವಂತೆ ಪ್ರಾಥಮಿಕ ಮತ್ತು ಮಾಧ್ಯಮಿಕ ಸಾಲೆಗಳಲ್ಲಿ ಮಕ್ಕಳಿಗೆ ಸಾಮಾನ್ಯ ಶಿಕ್ಷಣದ ಜೊತೆಗೆ—**ಇದು ಈಗ** ಇಲ್ಲ—ವೃತ್ತಿಶಿಕ್ಷಣದ ಪರಿಚಯವಾಗಬೇಕು. ಈ ಬಗೆಯ ಶಿಕ್ಷಣ ಯೋಜನೆಯು ಇಂಗ್ಲಂಡ್ ಮತ್ತು ಜರ್ಮನಿಯಲ್ಲಿ ಪ್ರಚಾರದಲ್ಲಿದೆ.

ಒಟ್ಟಿನ ಮೇಲೆ ಎಲ್ಲ ಮಕ್ಕಳಿಗೆ ಮೂರರಿಂದ ಹದಿನಾರನೆಯ ವರುಷದ ವರೆಗೆ ಸಾಮಾನ್ಯ ಶಿಕ್ಷಣವನ್ನು ಕೊಡುವುದು ವಿಹಿತವು. ಏಕೆಂದರೆ ಬಾಲ್ಯದಾರಭ್ಯ "ತಾರುಣ್ಯವು ವಿದ್ಯಾಭ್ಯಾಸದ ಕಾಲವು."

೮

# ಅವಧಾನ ಮತ್ತು ಅಭಿರುಚಿ

ಮಕ್ಕಳ ಅವಧಾನವು ಅಥವಾ ಲಕ್ಷ್ಯವು ತಾನು ಕಲಿಸುವ ವಿಷಯದಲ್ಲಿ ಇರದಿದ್ದರೆ ಶಿಕ್ಷಕನ ಶ್ರಮವೆಲ್ಲ ವ್ಯರ್ಥವಾಗುತ್ತದೆ. ಶಿಕ್ಷಕನು ವಿಷಯ ನಿರೂಪಣೆಯಲ್ಲಿ ಅತ್ಯಂತ ನಿಪುಣನಾಗಿರಬಹುದು, ಶ್ರೇಷ್ಠವೆನಿಸಿದ ಹೊಸ ಪದ್ಧತಿಯನ್ನು ಅನುಸರಿಸಬಹುದು, ಆದರೆ ವಿದ್ಯಾರ್ಥಿಗಳು ಅದಕ್ಕೆ ಗಮನ ಕೊಡದಿದ್ದರೆ ಪ್ರಯೋಜನವೇನು? "ಮಕ್ಕಳ ಅವಧಾನವನ್ನು ಸ್ವಾಧೀನಕ್ಕೆ ತೆಗೆದುಕೊಂಡು ನಡೆಸುವುದು ಸಾಧ್ಯವಾದರೆ, ಪೂರ್ತಿಯಾಗಿ ವಿದ್ಯಾಭ್ಯಾಸದ ವಿಚಾರವೇ ನಮ್ಮ ಕೈವಶವಾದಂತೆ" ಎಂದು ಡಾಕ್ಟರ್ ಮೊಂಟೇಸರಿಯವರು ಹೇಳುವುದನ್ನು ಎಲ್ಲ ಉಪಾಧ್ಯಾಯರು ಒಪ್ಪಲೇಬೇಕು. ಆದುದರಿಂದ ಮಕ್ಕಳ ಮನಸ್ಸನ್ನು ವಿಷಯದ ಕಡೆಗೆ ಹೇಗೆ ಸೆಳೆಯಬೇಕು, ಅವರ ಅವಧಾನವನ್ನು ಹೇಗೆ ಆಕರ್ಷಿಸಬೇಕು ಎಂಬ ಅತ್ಯಂತ ಮಹತ್ವದ ಸಮಸ್ಯೆಯನ್ನು ಕುರಿತು ಕೂಲಂಕಷವಾಗಿ ವಿವೇಚಿಸುವುದು ಅವಶ್ಯವಾಗಿದೆ.

ಅವಧಾನವೆಂಬುದು ಮನುಷ್ಯನಲ್ಲಿರುವ ಅನೇಕ ಶಕ್ತಿಗಳಲ್ಲಿ ಒಂದು ಶಕ್ತಿಯೆಂದೂ ಆ ಶಕ್ತಿಯನ್ನು ರೂಢಿಯಿಂದ ಬಲಪಡಿಸಲು ಬರುವುದೆಂದೂ ತಿಳಿಯುವುದು ತಪ್ಪಾದುದು. ಅವಧಾನವು ಒಂದು ಶಕ್ತಿಯಲ್ಲ; ಅದು ಮನಸ್ಸಿನ ಒಂದು ಕ್ರಿಯೆ. ಮನಸ್ಸಿನ ಕ್ರಿಯೆಯಲ್ಲಿ ಬೋಧೆ, ಸಂವೇದನೆ ಮತ್ತು ಸಂಕಲ್ಪ ಎಂದು ಮೂರು ಭೇದಗಳುಂಟೆಂಬುದನ್ನು ಹಿಂದೆಯೆ ಹೇಳಿದ್ದೇವೆ. ಅವಧಾನದಲ್ಲಿ ಬೋಧೆಯು ಪ್ರಧಾನವಾಗಿರುವುದೆಂದು ಪ್ರಾಚೀನ ಮನಶ್ಶಾಸ್ತ್ರಜ್ಞರು ತಿಳಿದಿದ್ದರು. ಆದರೆ ವಿಷಯದ ಕಡೆಗೆ ನಾವು ಏಕೆ ಲಕ್ಷ್ಯಗೊಡುತ್ತೇವೆ? ಎಂಬ ಪ್ರಶ್ನೆಯನ್ನು ಅವರು ಬಿಡಿಸಲಾರರು. ನಾವು ಸಾವಧಾನಚಿತ್ತರಾಗಬೇಕಾದರೆ ನಮ್ಮಲ್ಲಿ

ಒಂದು ಪ್ರೇರಣೆಯು ಬೇಕು. ಆ ಪ್ರೇರಣೆಯು ನಮ್ಮ ಮನೋಭಾವದಲ್ಲಿ ಮತ್ತು ಪ್ರಯತ್ನದಲ್ಲಿ ಉದ್ಭವಿಸುತ್ತದೆ. ಅವಧಾನದ ಈ ದೃಷ್ಟಿಯನ್ನು ಆಧುನಿಕ ಮನೋವೈಜ್ಞಾನಿಕರು ಹೆಚ್ಚು ಮಾನ್ಯಮಾಡುತ್ತಾರೆ. ಸ್ಟಾವುಟ್ ಎಂಬವನ ಮತದ ಪ್ರಕಾರ "ವಸ್ತುವಿನ ಸಂಪೂರ್ಣ ಜ್ಞಾನಮಾಡಿಕೊಳ್ಳ ಬೇಕೆಂಬ ಪ್ರಯತ್ನವೇ ಅವಧಾನವು." ನಾವು ಒಂದು ದೊಡ್ಡ ಬಂಡೆ ಯನ್ನಾಗಲಿ ಗಿಡವನ್ನಾಗಲಿ ಏರಬೇಕೆಂದು ಇಚ್ಛಿಸುವಾಗ ಅದನ್ನು ಲಕ್ಷಗೊಟ್ಟು ಎಲ್ಲ ಕಡೆಯಿಂದಲೂ ಪರೀಕ್ಷಿಸುತ್ತೇವೆ. ಮ್ಯಾಕ್‌ಡೂಗಲ್ಲನು ಹೇಳುವುದಾದರೂ ಇದೇ: "ತಿಳಿದುಕೊಳ್ಳಲು ಪ್ರಯತ್ನಿಸುವುದೇ" ಅವಧಾನವು. ಈ ಪ್ರಯತ್ನವು ಹೆಚ್ಚಿದ ಹಾಗೆಲ್ಲ ಅವಧಾನವು ತೀಕ್ಷ್ಣವಾಗು ತ್ತದೆ. ಚತುರನಾದ ಶಿಕ್ಷಕನು ಮನಸ್ಸಿನ ಈ ಕ್ರಿಯೆಗೆ ಗಮನ ಕೊಡುತ್ತಾನೆ.

ಮನಸ್ಸು ಒಂದಿಲ್ಲೊಂದು ವಿಚಾರದಲ್ಲಿ ಮಗ್ನವಾಗಿರುತ್ತದೆ. ನಮ್ಮ ಲಕ್ಷ್ಯವು ಯಾವಾಗಲಾದರೂ ಒಂದು ವಿಷಯದಲ್ಲಿ ಅಥವಾ ಒಂದು ವಸ್ತುವಿನಲ್ಲಿ ನೆಟ್ಟಿರುತ್ತದೆ. ಆದುದರಿಂದ ನಾವು ಯಾವ ವಸ್ತುವಿನ ಕಡೆಗೆ ಲಕ್ಷ್ಯಕೊಡುತ್ತೇವೆಂಬುದನ್ನು ತಿಳಿದುಕೊಳ್ಳಬೇಕು. ನಮ್ಮ ಇಂದ್ರಿಯಗಳ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡುವ ವಸ್ತುಗಳ ಕಡೆಗೆ ನಮ್ಮ ಲಕ್ಷ್ಯವು ಹೋಗುತ್ತದೆಂಬುದು ಸಾಮಾನ್ಯವಾದ ಕಲ್ಪನೆ. ಗುಡುಗು, ಮಿಂಚು ಮೊದಲಾದುವು ನಮ್ಮ ಮನಸ್ಸನ್ನು ಸಹಜವಾಗಿ ಎಳೆಯುತ್ತ ವೆಂಬುದೇನೊ ನಿಜ. ಇಲ್ಲಿ ನಮ್ಮ ಚಿತ್ತವನ್ನು ಆಕರ್ಷಿಸುವುದು ಇಂದ್ರಿಯಗಳ ಮೇಲೆ ಆಘಾತವನ್ನುಂಟುಮಾಡುವ ದೊಡ್ಡ ಸಪ್ಪಳ ಅಥವಾ ಪ್ರಕಾಶವಲ್ಲ; ಆದರೆ ಅವುಗಳಿಂದ ಪ್ರೇರಿತವಾದ ಆಶ್ಚರ್ಯ ಅಥವಾ ಭಯ. ಅಂದರೆ ಅವಧಾನವು ಮಾನಸಿಕ ಕ್ರಿಯೆಯು, ಇಂದ್ರಿಯಪರ ಕ್ರಿಯೆಯಲ್ಲ. ಅವಧಾನಕ್ಕೆ ಇಂದ್ರಿಯವೇ ಮೂಲವಾದಲ್ಲಿ ಜ್ಞಾನಮಗ್ನನಾದವನು ಹೊರಗೆ ಬೇಕಾದುದು ನಡೆದರೂ ಅದನ್ನು ಅವನು ಗಮನಿಸನೇಕೆ? ಇಂಥ ವಸ್ತುವನ್ನೇ ನಾವು ಅನುಲಕ್ಷಿಸುವೆವೆಂದು ಇಂದ್ರಿಯ ಪರಿಣಾಮವು ನಿರ್ಧರಿಸುವುದಿಲ್ಲ; ನಮ್ಮ ಪ್ರವೃತ್ತಿಗಳು ನಿರ್ಧರಿಸುತ್ತವೆ. ನಮ್ಮ ಪ್ರವೃತ್ತಿಗಳನ್ನು ಜಾಗ್ರತಗೊಳಿಸುವ—ಅಭಿರುಚಿಗೆ ಆಸ್ಪದವಾದ—ವಸ್ತುಗಳಿಗೆ ನಾವು ಲಕ್ಷ್ಯವೀಯುತ್ತೇವೆ. ವಸ್ತುವಿನಲ್ಲಿ

ಕಾಮುಬಲವನ್ನು ಹಿಂಗಿಸಬಹುದೆಂದು ಕೆಲವರು ತಿಳಿಯುತ್ತಾರೆ. ಆದರೆ ಅವರ ಈ ತಿಳಿವಳಿಕೆಯು ಸರಿಯಾಗಿರುವುದಿಲ್ಲ. ಕಾಮನು ಅನಂಗನು; ಕಾಮನು ಮನಸಿಜನು; ಕಾಮುಕತೆಯು ಮಾನಸಿಕ ಬಲವು. ಆದುದರಿಂದ ತರುಣನ ಮನಸ್ಸನ್ನು ಉತ್ಪಾದಕ ಚಟುವಟಿಕೆಗಳಲ್ಲಿ ತೊಡಗಿಸಿ ಕಾಮುಪ್ರವೃತ್ತಿಯನ್ನು ಉದಾತ್ತಗೊಳಿಸಬೇಕು. ಕಾಮಶಾಸ್ತ್ರದ ಅಭ್ಯಾಸವೂ ಅತ್ಯಾವಶ್ಯಕವಾದುದು. ಅದರ ವಿಷಯಕ್ಕೆ ಎಷ್ಟೋ ಜನರು ಮೌನವನ್ನು ಧರಿಸುತ್ತಾರೆ. ಆದರೆ ಅದು ಸರಿಯಲ್ಲ. ಕಾಮಶಾಸ್ತ್ರದ ಪರಿಚಯವಿಲ್ಲದ್ದರಿಂದ ಎಷ್ಟೋ ಯುವಕರೂ ಯುವತಿಯರೂ ತಮ್ಮ ಆಯುಷ್ಯನ್ನೇ ಹಾಳುಮಾಡಿಕೊಂಡಿದ್ದಾರೆ, ಹಾಳುಮಾಡಿಕೊಳ್ಳುತ್ತಿದ್ದಾರೆ. ತಾರುಣ್ಯದ ಮುಬ್ಬು ತಲೆಗೇರಿ ಹುಚ್ಚರಂತೆ ವರ್ತಿಸುತ್ತಾರೆ. ತಮ್ಮ ನಡತೆಯು ಸಮತೋಲವಾಗಿರಬೇಕೆಂದೂ ಚೆನ್ನಾಗಿರಬೇಕೆಂದೂ ಬಯಸುತ್ತಿದ್ದರೆ ತರುಣರು ಶರೀರೇಂದ್ರಿಯಗಳ ನಿಜವಾದ ಸಂಗತಿಗಳನ್ನು ಶಾಸ್ತ್ರೀಯ ದೃಷ್ಟಿಯಿಂದ ಅರಿತುಕೊಳ್ಳಬೇಕು. ನಂಬಿಗೆಯುಳ್ಳ ಹಿರಿಯರಿಂದ ತರುಣರಿಗೆ ಈ ವಿಷಯದಲ್ಲಿ ಪ್ರತ್ಯೇಕವಾಗಿ ಬೋಧೆಯನ್ನು ಕೊಡಿಸುವುದು ಉತ್ತಮ. ಅವರಿಗೆ ಶರೀರಶಾಸ್ತ್ರದ ಕೂಡ ನೈತಿಕ ಶಿಕ್ಷಣವನ್ನೂ ಕೊಡಬೇಕು; ಜೀವನದ ಧ್ಯೇಯಗಳ ಕಲ್ಪನೆಯನ್ನೂ ಮಾಡಿಕೊಡಬೇಕು.

**ಪರಾವಲಂಬನ.—** ಬಾಲಕನಂತೆ ತರುಣನೂ ಪರಾವಲಂಬಿಯು. ಬಾಲಕರು ತಂದೆತಾಯಂದಿರನ್ನು ಆಶ್ರಯಿಸುತ್ತಾರೆ, ಆದರೆ ತರುಣರು ಮಹಾತ್ಮರನ್ನು ಆಶ್ರಯಿಸುತ್ತಾರೆ. ಪ್ರಪಂಚದಲ್ಲಿ ಜೀವಿಸುವ ಮಹಾಪುರುಷರಾಗಲಿ, ಇತಿಹಾಸ ಮತ್ತು ಸಾಹಿತ್ಯಸಾಮ್ರಾಜ್ಯದಲ್ಲಿ ಹೆಸರುಗೊಂಡ ಮಹಾಪುರುಷರಾಗಲಿ ತರುಣರ ಮನಸ್ಸನ್ನು ಆಕರ್ಷಿಸುತ್ತಾರೆ. ಪ್ರಾಯದ ಶಿಕ್ಷಿಕೆಯರೂ ಶಿಕ್ಷಕರೂ ಅವರಿಗೆ ಆದರ್ಶ ಸ್ತ್ರೀ-ಪುರುಷರಾಗಬಹುದು. ವೀರವ್ಯಕ್ತಿಗಳು ಯಾವ ಕ್ಷೇತ್ರದವರೇ ಆಗಿರಲಿ ಯಾರೇ ಆಗಿರಲಿ ಅವರಲ್ಲಿ ಇರುವ ಆದರ್ಶಭೂತವಾದ ಶ್ರೇಷ್ಠ ಗುಣಗಳ ಕಡೆಗೆ ತರುಣರ ದೃಷ್ಟಿಯನ್ನು ತಿರುಗಿಸುವುದು ಉಪಾಧ್ಯಾಯರ ಪರಮ ಕರ್ತವ್ಯಕರ್ಮ. ವ್ಯಕ್ತಿಯ ಆರಾಧನೆಗಿಂತ ವ್ಯಕ್ತಿಯಲ್ಲಿರುವ ಶ್ರೇಷ್ಠ ಗುಣಗಳ ಆರಾಧನೆಯು ಶ್ರೇಯಸ್ಕರವಾದುದು.

ಧಾರ್ಮಿಕ ಭಾವನೆಯು ತರುಣನಲ್ಲಿ ಅದೇ ಒಡಮೂಡಿರುತ್ತದೆ. ಆಗ ಅವನು ದೇವರು ಸೃಷ್ಟಿಕರ್ತನೆಂದು ಆತನಲ್ಲಿ ಪೂಜ್ಯಬುದ್ಧಿಯನ್ನಿಡುತ್ತಾನೆ. ಅಲ್ಲದೆ ಧರ್ಮಾಚರಣೆಯು ಅವನ ಕಾಮಬಾಧೆಯನ್ನು ತೊಲಗಿಸಲು ಸಹಾಯವಾಗುತ್ತದೆ. ಆದರೆ ಧರ್ಮದ ಆಚಾರ-ವಿಚಾರಗಳು ತರ್ಕಬುದ್ಧಿಗೆ ಸರಿದೋರದಿದ್ದಲ್ಲಿ ತರುಣನು ನಿರೀಶ್ವರವಾದಿಯಾಗುವುದೂ ಉಂಟು. ಆಗ ಭೌತಿಕಶಾಸ್ತ್ರ, ತತ್ವಜ್ಞಾನ, ಕಲೆ, ಸರಲ ಜೀವನ, ಪವಿತ್ರ ಆಚರಣೆ ಮೊದಲಾದುವುಗಳಲ್ಲಿ ತನ್ನ ಆತ್ಮವಿಕಾಸವನ್ನು ಹೊಂದಲು ಯತ್ನಿಸುತ್ತಾನೆ.

ಬಾಲಕನಂತೆ ಯುವಕನೂ ಆತ್ಮಸಂಯಮನವನ್ನು ಕಲಿಯಬೇಕಾಗುತ್ತದೆ. ಇಂದ್ರಿಯ ನಿಗ್ರಹವನ್ನು ಸಾಧಿಸಲು ಉದಾತ್ತಧ್ಯೇಯಗಳು ಅವನಿಗೆ ನೆರವಾಗುತ್ತವೆ. ತರುಣನ ವೀರೋಪಾಸನೆಯ ವೃತ್ತಿಯನ್ನು ವೀರರ ನೈತಿಕ ಗುಣಗಳ ಅನುರಾಗದಲ್ಲಿ ಪರಿವರ್ತಿಸಬೇಕು. ಈ ಗುಣಗಳು ತರುಣರ ಆದರ್ಶವ್ಯಕ್ತಿತ್ವದಲ್ಲಿ ಬೆರೆಯಬೇಕು. ಆಗ ಅವರ ವ್ಯಕ್ತಿತ್ವವು ಒಂದು ಸ್ಥಿರವಾದ ರೂಪವನ್ನು ಹೊಂದುವುದು. ಈ ತಾರುಣ್ಯದಲ್ಲಿ ಅದು ಸ್ಥಿರಗೊಂಡಹಾಗೆ ಇಚ್ಛಾಶಕ್ತಿಯು ಬಲಪಡುತ್ತದೆ. ಸಾಮಾಜಿಕ ಸ್ತುತಿ ನಿಂದೆಗಳಿಗಿಂತ ಉದಾತ್ತಧ್ಯೇಯಗಳಿಂದ ನಿರ್ದೇಶಿಸಲ್ಪಟ್ಟ ವರ್ತನವು ಅತ್ಯಂತ ಶ್ರೇಷ್ಠತರಗತಿಯ ನೈತಿಕಾಚರಣೆಯು. "ಆರು ಮುನಿದು ಎಮ್ಮನೇನು ಮಾಡುವರು? ಊರುಮುನಿದು ಎಮ್ಮನೆಂತು ಮಾಡುವುದು? ........ಲೋಕವಿರೋಧಿ, ಶರಣನಾರಿಗಂಜುವನಲ್ಲ. ಕೂಡಲಸಂಗಮದೇವನ ರಾಜತೇಜದಲ್ಲಿಪ್ಪನಾಗಿ" ಎಂದು ಬಸವೇಶ್ವರನು ಸಾರುವಾಗ ಅವನು ಒಂದು ಧ್ಯೇಯವನ್ನೇ ಗುರಿಯಾಗಿಟ್ಟುಕೊಂಡಿದ್ದನು. ಸಾಮಾಜಿಕ ಪರಿಣಾಮಗಳನ್ನು ಲೆಕ್ಕಿಸದೆ ಧೈರ್ಯದಿಂದ ತಮ್ಮಲ್ಲಿಯ ಅಂತರ್ಜ್ಯೋತಿಯನ್ನು ಹಿಂಬಾಲಿಸುವವರು ಅತಿ ವಿರಳ. ಆದರೆ ಅವರೇ ಜಗತ್ತಿನ ಮಹಾ ವಿಭೂತಿಗಳು.

**ಸಾಮಾಜಿಕ ಜೀವನ.—** ಸಂಘಪ್ರವೃತ್ತಿಯು ಉದಾತ್ತತೆಯನ್ನು ಹೊಂದಿ ಸಾಮಾಜಿಕ ನಡತೆಯ ರೂಪವನ್ನು ತಾಳುತ್ತದೆ. ಪರೋಪಕಾರ ಬುದ್ಧಿಯು ತಾರುಣ್ಯದಲ್ಲಿ ಉದಯವಾಗುತ್ತದೆ. ಸಮಾಜಸೇವೆ, ಪರರ

ಹಿತಕ್ಕಾಗಿ ಸ್ವಾರ್ಥತ್ಯಾಗ ಎಂಬ ಧ್ಯೇಯಗಳಿಂದ ತರುಣನ ಹೃದಯವು ಕುದಿಯುತ್ತಿರುತ್ತದೆ. ಆದರ್ಶ ಸಮಾಜವನ್ನು ನಿರ್ಮಿಸಬೇಕೆಂಬ ಹಂಬಲವು ಅವನಲ್ಲಿ ಬಲವಾಗಿರುತ್ತದೆ. ಯುವಕನು ಸ್ವಭಾವತಃ ಸುಧಾರಕನು. ಕರ್ನಾಟಕದಲ್ಲಿ ಊರೂರಿಗೆ "ತರುಣ ಸಂಘ"ಗಳೆಂಬ ಸಂಸ್ಥೆಗಳು ಸ್ಥಾಪಿಸಲ್ಪಟ್ಟಿರುವುದು ನಮ್ಮ ನಿದರ್ಶನಕ್ಕೆ ಬರುತ್ತದೆ. ಸಮಾಜದಲ್ಲಿಯ ಕುಂದುಕೊರತೆಗಳನ್ನು ಹೋಗಲಾಡಿಸಬೇಕೆಂಬುದೇ ಈ ಸಂಘಗಳ ಸದಸ್ಯ ರಾದ ತರುಣರ ಜೀವನದ ಧ್ಯೇಯ. ಜಾಣನಾದ ಶಿಕ್ಷಕನು ತರುಣರ ಈ ಬಗೆಯ ಪರೋಪಕಾರದ ಪ್ರವೃತ್ತಿಗಳಿಗೆ ಯೋಗ್ಯವಾದ ದಾರಿಯನ್ನು ತೋರಿಸಬೇಕು; ಮಹತ್ವಾಕಾಂಕ್ಷಿಗಳಾದ ತರುಣರನ್ನು ಕರುಣೆಯಿಂದಲೂ ಸಹಾನುಭೂತಿಯಿಂದಲೂ ಕಾಣಬೇಕು.

## ಪ್ರೌಢಾವಸ್ಥೆ: ೧೮ ರಿಂದ ಮುಂದೆ

ತಾರುಣ್ಯಾವಸ್ಥೆಯು ಮುಗಿದು ಮುಗುವಿಗೆ ಪ್ರೌಢಾವಸ್ಥೆಯು ಪ್ರಾಪ್ತ ವಾಗುತ್ತದೆ. ಆಗ ಅವನು ಪುನಃ ಬಾಹ್ಯಪ್ರಪಂಚದಲ್ಲಿ ಆಸಕ್ತನಾಗುತ್ತಾನೆ. ಜಗತ್ತಿನ ಜಂಜಾಟದಲ್ಲಿ ಮನೋಭ್ರಮೆಯು ಮಾಯವಾಗುತ್ತದೆ; ವ್ಯಾವಹಾರಿಕ ದೃಷ್ಟಿಯು ಬಲಗೊಳ್ಳುತ್ತದೆ. ಸಂಸಾರವನ್ನು ಸಾಗಿಸಲಿಕ್ಕೆ ಅವನು ಯಾವುದಾದರೊಂದು ಕಾಯಕವನ್ನು ಕೈಕೊಳ್ಳುತ್ತಾನೆ; ತನ್ನ ಕಾರ್ಯಗಳಲ್ಲಿ ಕೌಶಲ್ಯವನ್ನು ತೋರಿಸಲು ಹೆಮ್ಮೆಪಡುತ್ತಾನೆ. ಅಧಿಕಾರ ಪ್ರೀತಿಯೂ ಇತರರನ್ನು ಮೀರಬೇಕೆಂಬ ಲಾಲಸೆಯೂ ದೊಡ್ಡವರಲ್ಲಿ ಒಡೆದು ಕಾಣುತ್ತದೆ. ಸಮಾಜದಲ್ಲಿ ಮುಂದರಿಯಬೇಕು, ತನ್ನ ಕಾಯಕ ವನ್ನು ಉತ್ತಮ ರೀತಿಯಿಂದ ಸಾಗಿಸಬೇಕು, ನೌಕರಿಯಲ್ಲಿ ಶ್ರೇಷ್ಠ ಸ್ಥಾನವನ್ನು ಸಂಪಾದಿಸಬೇಕು ಮುಂತಾಗಿ ಇವರು ಬಯಸುವರು. ಪ್ರೌಢಾವಸ್ಥೆಯಲ್ಲಿ ಶೀಲವು ಸ್ಥಿರತೆಯನ್ನು ಹೊಂದುವುದೆಂದು ಅನ್ನುವರು. ಅನೇಕ ಜನರು ತಮ್ಮ ಯೌವನ ಕಾಲದಲ್ಲಿ ತಮಗೆ ಆದರ್ಶಪುರುಷರಾಗಿದ್ದ ವರ ಜೀವನಮಾರ್ಗವನ್ನೇ ಈಗಲೂ ಅನುಸರಿಸುತ್ತ ಇಹಲೋಕದ ಯಾತ್ರೆಯನ್ನು ಮುಗಿಸುತ್ತಾರೆ.

# ಬೆಳವಣಿಗೆಗೆ ತಕ್ಕ ಶಿಕ್ಷಣಯೋಜನೆ

ಹಿಂದುಸ್ಥಾನದ ಶಿಕ್ಷಣ ಯೋಜನೆಯಲ್ಲಿ, ಹೊಸ ದೃಷ್ಟಿಯಿಂದ ಮಾರ್ಪಾಟುಗಳು ಆಗಬೇಕೆಂದು ಎಲ್ಲರೂ ಹಂಬಲಿಸುತ್ತಿರುವರು. ದೇಶದ ಮುಂದಾಳುಗಳೂ ಅದಕ್ಕಾಗಿ ಪ್ರಯತ್ನವನ್ನು ಮಾಡುತ್ತಿರುವರು. ಇದು ಶುಭಲಕ್ಷಣ. ಆದರೆ ಆ ಸುಧಾರಕರು ಹೊಸ ಶಿಕ್ಷಣವನ್ನು ಬಾಲಕರ ಬೆಳವಣಿಗೆಯ ಮೆಟ್ಟುಗಳಿಗೆ ಸರಿಹೋಗುವಂತೆ ಏರ್ಪಡಿಸುವುರೆಂದು ಆಶಿಸಲಾಗಿದೆ.

ನಮ್ಮ ಮಕ್ಕಳು ಏಳನೆಯ ವರ್ಷಕ್ಕೆ ಪ್ರಾಥಮಿಕ ಸಾಲೆಗಳಿಗೆ ಹೋಗಲು ಪ್ರಾರಂಭಿಸುತ್ತಾರೆ. ಆದರೆ ಈ ಪೂರ್ವದಲ್ಲಿಯ ಬಾಲ್ಯಶಿಕ್ಷಣದ ವ್ಯವಸ್ಥೆಯು ನಮ್ಮ ದೇಶದಲ್ಲಿ ಇಲ್ಲವೆಂದು ಹೇಳಲು ವಿಷಾದವೆನಿಸುತ್ತದೆ. ಮೊಂಟೇಸರಿ ಪದ್ಧತಿಯು ಯುರೋಪಖಂಡದ ಪ್ರತಿಯೊಂದು ದೇಶದಲ್ಲಿಯೂ ಪ್ರಚಾರದಲ್ಲಿದೆ. ಆದರೆ ಹಿಂದುಸ್ಥಾನದಲ್ಲಿ ಮಾತ್ರ ಅದು ಅಷ್ಟು ಪ್ರಚಾರದಲ್ಲಿ ಇರುವುದಿಲ್ಲ. ಮೈಸೂರು, ಕಾಶಿ, ಮದ್ರಾಸ, ಕಲಕತ್ತದಂಥ ಕೆಲವು ದೊಡ್ಡ ಪಟ್ಟಣಗಳಲ್ಲಿ ಮಾತ್ರ ಮೊಂಟೇಸರಿ ಸಾಲೆಗಳು ಇವೆ. ಆದರೆ ಅವು ಕೇವಲ ಶ್ರೀಮಂತರ ಮಕ್ಕಳಿಗಾಗಿ. ಆದರೆ ಪರದೇಶಗಳಲ್ಲಿಯ ಮಾತು ಹಾಗಿರುವುದಿಲ್ಲ. ಇಂಗ್ಲಂಡದಲ್ಲಿ ಬೆಳವಣಿಗೆಗೆ ತಕ್ಕಂತೆ ಶಿಕ್ಷಣ ಕ್ರಮವು ಏರ್ಪಟ್ಟಿದೆ. ಐದು ವರ್ಷಕ್ಕಿಂತ ಚಿಕ್ಕವರಿದ್ದ ಮಕ್ಕಳು 'ನರ್ಸರಿ' ಸಾಲೆಗಳಿಗೆ ಹೋಗುತ್ತಾರೆ; ಬಳಿಕ ಎರಡು ವರ್ಷಗಳ ಕಾಲ ಶಿಶುಸಾಲೆಗಳಲ್ಲಿ ಶಿಕ್ಷಣ ಪಡೆಯುತ್ತಾರೆ; ಅನಂತರ ಏಳನೆಯ ವರ್ಷಕ್ಕೆ ಪ್ರಾಥಮಿಕ ಸಾಲೆಗಳನ್ನು ಸೇರುತ್ತಾರೆ. ಹನ್ನೆರಡನೆಯ ವರ್ಷಕ್ಕೆ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿಕೊಂಡು ಮಾಧ್ಯಮಿಕ ಸಾಲೆಗಳನ್ನು ಅವರು ಪ್ರವೇಶಿಸುತ್ತಾರೆ. ಇಂಗ್ಲಂಡದ ಪ್ರತಿಯೊಬ್ಬ ಪ್ರಜೆಗೆ ಮಾಧ್ಯಮಿಕ ಶಿಕ್ಷಣವು ದೊರೆಯಲೇಬೇಕೆಂಬ ಧ್ಯೇಯವನ್ನು ಇಂಗ್ಲಂಡವು ಇಟ್ಟುಕೊಂಡಿದೆ. ಹ್ಯಾಡೋ ಕಮೀಟಿಯ ರಿಪೋರ್ಟಿನಲ್ಲಿ ಸೂಚಿಸಿದ ಪ್ರಕಾರ ಮಕ್ಕಳಿಗೆ ಹದಿನೈದು ವರ್ಷ ತುಂಬುವ ವರೆಗೆ ಶಿಕ್ಷಣವು ಕೊಡಲ್ಪಡಬೇಕು. ವರ್ಧಾಶಿಕ್ಷಣವು ಏಳರಿಂದ ಹದಿನಾಲ್ಕನೆಯ ವರ್ಷದ ವರೆಗೆ ಪ್ರತಿಯೊಬ್ಬರಿಗೂ ಶಿಕ್ಷಣ ದೊರೆಯುವ

ಅಭಿರುಚಿಯಿಲ್ಲದೆ ಅವಧಾನವು ಉಂಟಾಗಲಾರದು. ಅಭಿರುಚಿಯು ಅವಧಾನವನ್ನು ನಿಶ್ಚಯಿಸುತ್ತದೆ ಎಂದು ಇದರಿಂದ ಹೇಳಿದಂತಾಯಿತು. ಹಾಗಾದರೆ ಅಭಿರುಚಿಯೆಂದರೇನು? ಯಾವ ವಸ್ತುವು ನಮಗೆ ಕೇವಲ ಸಂಬಂಧಪಟ್ಟಿರುತ್ತದೊ ಅದರಲ್ಲಿಯೆ ನಮಗೆ ಅಭಿರುಚಿಯು ಹುಟ್ಟುತ್ತದೆ. ಕೇವಲ ವಸ್ತುವಿನ ದೃಷ್ಟಿಯಿಂದ ನೋಡಿದರೆ ಅಭಿರುಚಿಯ ಸಂಕುಚಿತಾರ್ಥ ವನ್ನು ಗ್ರಹಿಸಿದಂತಾಗುವುದು. ಒಂದೇ ವಸ್ತುವು ಒಮ್ಮೆ ಅಭಿರುಚಿ ಯುಳ್ಳದಾಗಬಹುದು, ಮತ್ತೊಮ್ಮೆ ಅದೇ ನೀರಸವಾಗಬಹುದು. ವ್ಯಕ್ತಿಯ ಅಥವಾ ವಿಷಯಿಯ ದೃಷ್ಟಿಯಿಂದ ನೋಡಿದರೆ ಅಭಿರುಚಿಯ ಯೋಗ್ಯ ಮತ್ತು ವ್ಯಾಪಕ ಅರ್ಥವು ಗೊತ್ತಾಗುವುದು ಒಬ್ಬನನಿಗೆ ಚಿತ್ರಲೇಖನ ದಲ್ಲಿ ಅಭಿರುಚಿಯುಂಟೆಂದು ಎನ್ನುತ್ತೇವೆ ಆದರೆ ಅದು ಅವನು ಚಿತ್ರ ತೆಗೆಯುವಾಗ ಮಾತ್ರ ಇರುತ್ತದೆ, ಉಳಿದ ವೇಳೆಯಲ್ಲಿ ಇರುವುದಿಲ್ಲವೆಂದು ಅರ್ಥವಲ್ಲ ಅವನಲ್ಲಿರುವ ಈ ಅಭಿರುಚಿಯು ಪ್ರಸಂಗಾನುಸಾರ ವ್ಯಕ್ತ ವಾಗುತ್ತದೆ. ಅಭಿರುಚಿಯು ಸ್ಥಿರವಾದ ಒಂದು ಮನೋಭಾವವೆಂದು ಮ್ಯಾಕ್‌ಡೂಗಲ್, ಡ್ರಿವರ್, ರಾಸ್ ಮೊದಲಾದವರು ಹೇಳುತ್ತಾರೆ. ನಮ್ಮ ಚಿತ್ರಲೇಖಕನ ಮನಸ್ಸಿನ ರಚನೆಯಲ್ಲಿ ಚಿತ್ರಲೇಖನ ಎಂಬ ವಿಚಾರದ ಸುತ್ತಲೂ ಬೆಳೆದ ಮನೋಭಾವವು ನೇರಿ ಹೋಗಿದೆ.

ಹೀಗೆ ಪ್ರವೃತ್ತಿಯನ್ನು ಪ್ರಚೋದನಗೊಳಿಸುವ ವಸ್ತುಗಳೇ ಮನುಷ್ಯನ ಅಭಿರುಚಿಗಳಿಗೆ ಆಧಾರವಾಗಿರುತ್ತವೆ. ಆದರೆ ಈ ಸ್ವಾಭಾವಿಕ ಪ್ರವೃತ್ತಿಗಳ ಹೊರತಾಗಿ ನಮ್ಮಲ್ಲಿ ಅಭ್ಯಾಸದಿಂದ ಬಂದ ಮನೋಭಾವ ಗಳೂ ಇರುತ್ತವೆ ಇವುಗಳಿಗೆ ಸ್ಥಿರವೃತ್ತಿಗಳು, ರಸಗಳು ಅಥವಾ ಅನುರಾಗ ಗಳು ( Sentiments ) ಎಂದು ಕರೆಯಬಹುದು. ನಮಗೆ ರುಚಿಸುವ ಒಂದು ವಸ್ತುವಾಗಲಿ ವಿಷಯವಾಗಲಿ ಅದು ಒಂದು ಸ್ಥಿರವೃತ್ತಿಗೆ ಕೇಂದ್ರವಾ ಗಿರುತ್ತದೆ .ಈ ಸ್ಥಿರವೃತ್ತಿಗಳೂ ಕೂಡ ನಮ್ಮ ಅಭಿರುಚಿಗಳೇ ನನಗೆ ಪರಿಚಿತ ನಾದ ಒಬ್ಬ ಹತ್ತು ವರ್ಷದ ಬಾಲಕನಿಗೆ ಮಣ್ಣಿನ ಗೊಂಬೆಗಳನ್ನು ಮಾಡುವು ದರಲ್ಲಿ ಅಭಿರುಚಿಯು ಇದ್ದಿತು. ಅವನು ಮಣ್ಣೆತ್ತಿನ ಅಮಾವಾಸ್ಯ ಮತ್ತು ಗಣೇಶಚತುರ್ಥಿಯ ದಿವಸ ಮಣ್ಣಿನ ಬಸವಣ್ಣಗಳನ್ನೂ ಗಣಪತಿಗಳನ್ನೂ ಮಾಡುತ್ತಾನೆ. ಮಣ್ಣಿನ ಕೃತಿಗಳ ಬಗ್ಗೆ ಅವನಲ್ಲಿ ಅನುರಾಗವು ಉಂಟಾದುದ

ರಿಂದಲೆ ಅವನು ಹಾಗೆ ಮಾಡುತ್ತಾನೆ ಆ ಹುಡುಗನಲ್ಲಿ ಮಣ್ಣಿನ ಕೃತಿಗಳ ಬಗ್ಗೆ ಅಭಿರುಚಿಯು ಉಂಟಾಗಿದೆ. ಮನುಷ್ಯನ ಸ್ಥಿರವೃತ್ತಿ ಅಥವಾ ಅನುರಾಗಗಳಲ್ಲಿ ಒಂದು ಪ್ರಧಾನವಾದುದು ಇರುತ್ತದೆ. ಅದು ಅವನ ಮುಖ್ಯ ಅಭಿರುಚಿಗೆ ಸಂಬಂಧಪಟ್ಟುದಾಗಿರುತ್ತದೆ. ಇದಕ್ಕೆ ನಾವು ಪ್ರಧಾನವೃತ್ತಿ ಅಥವಾ ಪ್ರಧಾನ ಅನುರಾಗ (Master Sentiment) ಎಂದೆನ್ನಬಹುದು ಇನ್ನೊಂದು ಮಾತು--ಒಬ್ಬನಸಿಗೆ ಯಾವುದಾದರೊಂದು ವಿಷಯದ ಬಗ್ಗೆ ಜ್ಞಾನವಿದ್ದ ಮಾತ್ರಕ್ಕೆ ಅದರಲ್ಲಿ ಅವನಿಗೆ ಅಭಿರುಚಿಯು ಉಂಟೆಂದು ಹೇಳಲಿಕ್ಕಾಗದು.

ಅವಧಾನ ಮತ್ತು ಅಭಿರುಚಿ ಇವು ಒಂದಕ್ಕೊಂದು ಸಂಬಂಧಪಟ್ಟ ವಿಷಯಗಳು ಅವು ಒಂದೇ ಸಂಗತಿಯನ್ನು ನೋಡುವ ಎರಡು ದೃಷ್ಟಿಗಳು. ಮನಸ್ಸಿನ ರಚನೆಯ ದೃಷ್ಟಿಯಿಂದ ಮಾತಾಡುವಾಗ 'ಅಭಿರುಚಿ' ಎಂಬ ಶಬ್ದವನ್ನೂ ಮನಸ್ಸಿನ ಕ್ರಿಯೆ ಅಥವಾ ಅನುಭವದ ದೃಷ್ಟಿಯಿಂದ ಮಾತನಾಡುವಾಗ 'ಅವಧಾನ' ಎಂಬ ಪದವನ್ನೂ ಉಪಯೋಗಿಸುತ್ತೇವೆ. ಅಭಿರುಚಿಯು ಸ್ಥಿರವಾಗಿರುತ್ತದೆ ಅವಧಾನವು ತಾತ್ಕಾಲಿಕವಾಗಿರುತ್ತದೆ. ಅಭಿರುಚಿಯಿದ್ದ ವಿಷಯದ ಕಡೆಗೆ ಲಕ್ಷ್ಯಗೊಡಲು ನಾವು ಸಿದ್ಧರಿರುತ್ತೇವೆ ಮತ್ತು ಅವಧಾನವಿದ್ದಲ್ಲಿ ಅಭಿರುಚಿಯು ಅದರ ಹಿನ್ನೆಲೆಯಾಗಿರುತ್ತದೆ. **"ಅಭಿರುಚಿಯು ಗುಪ್ತವಾದ ಅವಧಾನವು; ಅವಧಾನವು ಕಾರ್ಯದಲ್ಲಿದ್ದ ಅಭಿರುಚಿಯು"** ಎಂದು ಮ್ಯಾಕ್‌ಡೂಗಲ್ಲನು ಹೇಳುತ್ತಾನೆ.

ನಮ್ಮ ಸಹಜ ಪ್ರವೃತ್ತಿಗಳು ಅಥವಾ ಸಂಪಾದಿಸಿದ ಅಭಿರುಚಿಗಳಾದ ಅನುರಾಗಗಳು ಉತ್ತೇಜನಗೊಂಡಲ್ಲಿ ನಾವು ಸಹಜವಾಗಿ ಅವಧಾನವನ್ನೀಯುವೆವು. ಆಗ ನಮ್ಮ ಮನಸ್ಸನ್ನು ಬೇರೆ ವಿಷಯದ ಕಡೆಗೆ ತಿರುಗಿಸಲಿಕ್ಕೆ ಆಗುವುದಿಲ್ಲ. ಒಮ್ಮೊಮ್ಮೆ ನಿದ್ರೆಯು ಕೂಡ ಹತ್ತುವುದಿಲ್ಲ. ನಮ್ಮ ಅನುರಾಗವನ್ನು ಪ್ರಚೋದನಗೊಳಿಸಿದ ವಿಷಯವು ಕನಸಿನಲ್ಲಿಯೂ ಬಂದುಹೋಗಬಹುದು. ಒಳ್ಳೇ ಭರದಿಂದ ಆಟವು ಸಾಗಿದಾಗ ಎದುರಿಗೆ ಮೃಷ್ಟಾನ್ನವಿದ್ದರೂ ಅದಕ್ಕೆ ಅವಧಾನಗೊಡುವುದಿಲ್ಲ. ಮಕ್ಕಳು ಆಟದಲ್ಲಿ ಊಟವನ್ನೇ ಮರೆಯುತ್ತಾರೆಂಬುದು ಎಲ್ಲ

ತಂದೆತಾಯಿಗಳಿಗೂ ಅಧ್ಯಾಪಕರಿಗೂ ಅನುಭವಕ್ಕೆ ಬಂದ ಮಾತಾಗಿದೆ. ಆಸಕ್ತಿಯಿಂದ ಲೆಕ್ಕವನ್ನು ಬಿಡಿಸುವಾಗ ಸಿಪ್ಪೆಯೂ ಹಾರಿಹೋಗುತ್ತದೆ. ಇಂಥ ಅವಧಾನಕ್ಕೆ (೧) "**ಅನೈಚ್ಛಿಕ**" (Non-Volitional) ಅವಧಾನವೆನ್ನುತ್ತಾರೆ. ಇದು ಸ್ವಾಭಾವಿಕವಾದುದು ಇದಲ್ಲದೆ ನಾವು ಪ್ರಯತ್ನಪೂರ್ವಕವಾಗಿ ಕೊಡುವ ಎರಡನೆಯ ಬಗೆಯ ಅವಧಾನವೂ ಉಂಟು. ಅದಕ್ಕೆ (೨) "**ಐಚ್ಛಿಕ**" (Volitional) ಅವಧಾನವೆನ್ನುತ್ತಾರೆ. ಇದು ಬುದ್ಧಿಪೂರ್ವಕವಾದುದು ಎಷ್ಟೋ ಅಪ್ರಿಯವಾದ ವಿಷಯಗಳಿಗೆ ಕೂಡ ನಾವು ಅವಧಾನವನ್ನೀಯುವುದು ಕಂಡುಬರುತ್ತದೆ. ಕೇವಲ ರೈಲು ಟಿಕೇಟಿನಲ್ಲಿ ನಮಗೆ ಅಭಿರುಚಿಯಿರುವುದಿಲ್ಲ, ಆದರೆ ಅದು ಕಳೆದರೆ ಅದನ್ನು ಲಕ್ಷ್ಯಪೂರ್ವಕವಾಗಿ ಹುಡುಕುತ್ತೇವೆ ಒಬ್ಬ ವಿದ್ಯಾರ್ಥಿಯು ಪರೀಕ್ಷೆಗೋಸ್ಕರ ತನಗೆ ಅಪ್ರಿಯವಾದ ಒಂದು ವಿಷಯವಿದ್ದರೂ ಅದಕ್ಕೆ ಅವನು ಅವಧಾನವನ್ನು ಕೊಡಲೇಬೇಕಾಗುತ್ತದೆ. ಅದು ಅವನ ಪ್ರವೃತ್ತಿಯನ್ನು ಅಥವಾ ಅನುರಾಗವನ್ನು ಜಾಗ್ರತಗೊಳಿಸದ ವಿಷಯವಿದ್ದರೂ ಅದನ್ನು ತಿಳಿದುಕೊಳ್ಳಲಿಕ್ಕೆ ಅವನು ಪ್ರಯತ್ನಿಸುತ್ತಾನೆ. ಇಂಥ ಸಂದರ್ಭಗಳಲ್ಲಿ ನಾವು ಅವಧಾನವೀಯುವ ವಸ್ತುಗಳು ಅಥವಾ ವಿಷಯಗಳು ನಮಗೆ ಒಂದಿಲ್ಲೊಂದು ರೀತಿಯಿಂದ ಸಂಬಂಧಪಟ್ಟವೇ ಇರುತ್ತವೆ. ಎಂದರೆ ಪರೋಕ್ಷ ರೀತಿಯಿಂದ ಅವು ನಮಗೆ ಅಭಿರುಚಿಯುಳ್ಳವುಗಳೇ. ಟಿಕೆಟ್ಟನ್ನು ಕಳೆದುಕೊಂಡಲ್ಲಿ ಆತ್ಮಗೌರವಕ್ಕೆ ಹಾನಿಯು ಬರುತ್ತದೆ; ಇಲ್ಲವೆ ಹೆಚ್ಚು ಹಣವು ಕೈಬಿಡುತ್ತದೆ. ವಿದ್ಯಾರ್ಥಿಗೆ ತಾನು ಉತ್ತೀರ್ಣನಾಗಬೇಕೆಂದು ಇಚ್ಛಿಸುವ ಪರೀಕ್ಷೆಗೆ ಅವನ ನೀರಸವಾದ ವಿಷಯವು ಅವಶ್ಯವಿರುತ್ತದೆ; ಇಲ್ಲವೆ ಅದು ಅವನ ಜೀವನೋಪಾಯವನ್ನು ಮುಂದುವರಿಸುತ್ತದೆ. ಅಥವಾ ಅದು ಅವನ ಆತ್ಮಗೌರವವನ್ನು ಕಾಯುತ್ತದೆ. ಎಂದ ಬಳಿಕ ಐಚ್ಛಿಕ ಅವಧಾನಕ್ಕೆ ಆಧಾರವಾದ ಅಭಿರುಚಿಯು ಯಾವುದಾದರೊಂದು ಪ್ರವೃತ್ತಿ ಅಥವಾ ಸ್ಥಿರವೃತ್ತಿಯಾಗಿರದೆ ಅದು ಇಡಿ ವ್ಯಕ್ತಿಯನ್ನೇ ಒಳಗೊಂಡಿರುವ ಪ್ರಧಾನ ಸ್ಥಿರವೃತ್ತಿ ಅಥವಾ ಪ್ರಧಾನ ಅನುರಾಗವಾಗಿರುತ್ತದೆ. ಈ ಪ್ರಧಾನ ವೃತ್ತಿಯು ಆತ್ಮಗೌರವವು ಅಥವಾ ಸ್ವಾಭಿಮಾನವು ಆಗಿರುತ್ತದೆ. ಐಚ್ಛಿಕ ಅವಧಾನವನ್ನು ಕುರಿತು ಮ್ಯಾಕ್‍ಡೂಗಲ್ಲನು

ಒಂದೆಡೆಗೆ ಹೀಗೆ ಬರೆದಿರುತ್ತಾನೆ. "ಅವಧಾನದ ಐಚ್ಛಿಕ ಏಕಾಗ್ರತೆಯನ್ನು ಅಭ್ಯಾಸದ ಬಲದಿಂದ ಅಭಿವೃದ್ಧಿಗೊಳಿಸುವುದು ನಿಸ್ಸಂದೇಹವಾಗಿ ಶಕ್ಯವಿದೆ. ಇಂಥ ಅಭಿವೃದ್ಧಿಯೇ ಔಪಚಾರಿಕ ಶಿಕ್ಷಣದ ಮುಖ್ಯ ಫಲಿತಾಂಶವೆಂದು ತೋರುತ್ತದೆ ಯಾವುದೇ ಉದ್ದೇಶದಿಂದಾಗಲಿ (ಚಿತ್ತದ ಭಯ, ತಾನು ಸುಧಾರಿಸಬೇಕೆಂಬ ಇಚ್ಛೆ, ಇತರರನ್ನು ಮೀರಬೇಕೆಂಬ ಇಚ್ಛೆ, ಬಹುಮಾನವನ್ನು ಪಡೆಯಬೇಕೆಂಬ ಇಚ್ಛೆ, ಹೊಟ್ಟೆಹೊರಕೊಳ್ಳುವ ಇಚ್ಛೆ, ಯಶವಡೆಯುವ ಇಚ್ಛೆ, ಅಥವಾ ಉಪಾಧ್ಯಾಯನನ್ನು ಸಂತೋಷಗೊಳಿಸುವ ಇಚ್ಛೆ) ಸ್ವಾಭಾವಿಕವಾಗಿ ಮನೋರಂಜಕವಲ್ಲದ ಪಾಠಗಳಲ್ಲಿ ಏಕಾಗ್ರತೆಯ ಬಹುಕಾಲದ ಅಭ್ಯಾಸವು ನಿರ್ವಿವಾದವಾಗಿ ಚಿತ್ತದ ಏಕಾಗ್ರತೆಯನ್ನು ಬಲವಡಿಸುವಂತೆ ತೋರುತ್ತದೆ."

ಮೇಲೆ ವಿವರಿಸಿದಂತೆ ಅವಧಾನದಲ್ಲಿ ಎರಡು ಪ್ರಕಾರಗಳುಂಟು. (೧) ಅನೈಚ್ಛಿಕ ಮತ್ತು (೨) ಐಚ್ಛಿಕ ಅನೈಚ್ಛಿಕ ಅವಧಾನದಲ್ಲಿ ಮತ್ತೆ (ಅ) **ಪ್ರವೃತ್ತ್ಯಾತ್ಮಕ,** (ಬ) **ಅನುರಾಗಾತ್ಮಕ** ಎಂಬ ಎರಡು ಪ್ರಭೇಧಗಳಿವೆ. ಕುತೂಹಲ, ಭಯ ಮೊದಲಾದ ಸಹಜಪ್ರವೃತ್ತಿಗಳಿಂದ ನಿಯಂತ್ರಿತವಾದ ಅವಧಾನವು ಪ್ರವೃತ್ತ್ಯಾತ್ಮಕ ಅನೈಚ್ಛಿಕ ಅವಧಾನವು. ಸಂಪಾದಿಸಿದ ಅಭಿರುಚಿಗಳಿಂದ ಅಥವಾ ಅನುರಾಗಗಳಿಂದ ನಿಯಂತ್ರಿತವಾದ ಅವಧಾನವು ಅನುರಾಗಾತ್ಮಕ ಅನೈಚ್ಛಿಕ ಅವಧಾನವು ಐಚ್ಛಿಕ ಅವಧಾನದಲ್ಲಿಯೂ ಎರಡು ಪ್ರಭೇದಗಳನ್ನು ಕಲ್ಪಿಸುವುದುಂಟು. (ಅ) **ಏಕ ಕ್ರಿಯಾತ್ಮಕ** (ಬ) **ಬಹು ಕ್ರಿಯಾತ್ಮಕ.** ದೀರ್ಘಕಾಲದ ವರೆಗೆ ಪ್ರಯತ್ನಪೂರ್ವಕವಾಗಿ ಅವಧಾನವನ್ನಿಡುವುದು ಏಕ ಕ್ರಿಯಾತ್ಮಕವು. ಇಚ್ಛೆಯನ್ನು ಬಾರಿಬಾರಿಗೂ ವಿಷಯದ ಕಡೆಗೆ ಹೊರಳಿಸುವುದು ಬಹು ಕ್ರಿಯಾತ್ಮಕ ಐಚ್ಛಿಕ ಅವಧಾನವು ಅವಧಾನ ಮತ್ತು ಅಭಿರುಚಿ ಇವುಗಳಲ್ಲಿ ನಿಕಟ ಸಂಬಂಧ ಉಂಟೆಂಬ ಸಿದ್ಧಾಂತವನ್ನು ಐಚ್ಛಿಕ ಅವಧಾನವು ಅಲ್ಲಗಳೆಯುವುದೆಂದು ಭಾವಿಸಕೂಡದು. ಯಾಕೆಂದರೆ ಐಚ್ಛಿಕ ಅವಧಾನದಲ್ಲಿ ಪ್ರಯತ್ನಪೂರ್ವಕವಾಗಿ ಲಕ್ಷ್ಯವನ್ನೀಯಬೇಕಾದ ವಿಷಯವು ವ್ಯಕ್ತಿಯ ಆತ್ಮಗೌರವಕ್ಕೆ ಸಂಬಂಧಿಸಿರುತ್ತದೆ ಅಂದರೆ ಆ ವಿಷಯವು ಅವನಿಗೆ ಅಪ್ರತ್ಯಕ್ಷ ರೀತಿಯಿಂದ 'ಅಭಿರುಚಿ'. ಉಳ್ಳುದುದೇ ಆಗಿರುತ್ತದೆ.

ಇನ್ನು ಪ್ರಾಯೋಗಿಕ ಮನಶ್ಶಾಸ್ತ್ರವು ಅವಧಾನದ ವಿಷಯಕ್ಕೆ ಹೆಚ್ಚು ಪರಿಚಯವನ್ನು ಮಾಡಿಕೊಡುತ್ತದೆ. ಅವಧಾನದ ವಿಸ್ತಾರ, ಅವಿಚ್ಛಿನ್ನತೆ, ವಿಭಾಗ, ಬಾಲಕನ ಅವಧಾನ, ಪ್ರೌಢನ ಅವಧಾನ ಮುಂತಾದ ವಿಷಯಗಳನ್ನು ಅದು ವಿವೇಚಿಸುವುದು. ಅವಧಾನಪ್ರಭೇದಗಳಲ್ಲಿ ಏಕಾಂಗ, ವಿವಿಧಾಂಗ; ನಿಶ್ಚಿತ, ಅನಿಶ್ಚಿತ; ಸ್ಥಿರ ಮತ್ತು ಅಸ್ಥಿರ ಎಂಬ ಪ್ರಕಾರಗಳುಂಟು. ಈ ಎಲ್ಲ ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸುವುದು ಅನಾವಶ್ಯಕವೆಂದು ತೋರುತ್ತದೆ. ಆದರೆ ಮುಖ್ಯ ಪ್ರಭೇದಗಳಾದ ಏಕಾಗ್ರ ಅವಧಾನ, ವಿವಿಧಾಗ್ರ ಅವಧಾನಗಳ ಬಗ್ಗೆ ಎರಡು ಮಾತುಗಳನ್ನು ಹೇಳುವಾ. ಕೆಲವು ಜನರು ಯಾವುದಾದರೊಂದು ನಿಯತ ವಸ್ತುವಿನ ಕಡೆಗೆ ಅವಧಾನ ಕೊಡುತ್ತಾರೆ. ಅವರು ಒಂದೇ ವಿಷಯದಲ್ಲಿ ಹೆಚ್ಚು ಮನಸ್ಸನ್ನು ಹಾಕುತ್ತಾರೆ. ಅವರಿಗೆ ಏಕಾಗ್ರಚಿತ್ತರೆನ್ನಬಹುದು. ವೈಜ್ಞಾನಿಕರು ಇಂಥವರ ಪಂಗಡಕ್ಕೆ ಸೇರುತ್ತಾರೆ. ಆದರೆ ಬೇರೆ ಕೆಲವರು ವಿವಿಧ ವಿಷಯಗಳಿಗೆ ಗಮನಕೊಡುತ್ತಾರೆ. ಇವರು ಏಕಕಾಲಕ್ಕೆ ಮೂರು ನಾಲ್ಕು ವಿಷಯಗಳಲ್ಲಿ ತಮ್ಮ ಲಕ್ಷ್ಯವನ್ನು ಪೂರೈಸುತ್ತಾರೆ. ಇಂಥವರಿಗೆ ವಿವಿಧಾಗ್ರಚಿತ್ತರೆನ್ನಬಹುದು. ವ್ಯಾಪಾರಸ್ಥರೂ ದಂಡನಾಯಕರೂ ಈ ಪಂಗಡಕ್ಕೆ ಸೇರುತ್ತಾರೆ. ಸೀಝರ್ ಎಂಬ ಪ್ರಸಿದ್ಧ ರಾಜನು ಒಂದೇ ಸಮಯದಲ್ಲಿ ನಾಲ್ಕು ಪತ್ರಗಳನ್ನು ಹೇಳಿ ಬರೆಯಿಸುತ್ತಿದ್ದನು. ಅಲ್ಲದೆ ಐದನೆಯದನ್ನು ತಾನೇ ಬರೆಯುತ್ತಿದ್ದನೆಂದು ಹೇಳುತ್ತಾರೆ. ಮಕ್ಕಳಲ್ಲಿ ಈ ಎರಡೂ ಬಗೆಯವರೂ ಸಿಕ್ಕುತ್ತಾರೆ. ಮತ್ತು ಅವರು ಬೇರೆ ಬೇರೆ ತರದ ಕೆಲಸಗಳನ್ನು ಸ್ವಾಭಾವಿಕವಾಗಿ ಕೈಕೊಳ್ಳುತ್ತಾರೆ. ಇದರಿಂದ ಶಾಲೆಯಲ್ಲಿಯ ಬಹುಭಾಗ ಕಾರ್ಯವು ವೈಯಕ್ತಿಕವಾಗಿ ನಡೆಯಬೇಕೆಂಬುದು ಸ್ಪಷ್ಟವಾಗುತ್ತದೆ.

ಮಕ್ಕಳು ಯಾವುದರಲ್ಲಿ ಅಭಿರುಚಿಯುಳ್ಳವರಾಗಿರುತ್ತಾರೆ? ಅವರ ಅವಧಾನವನ್ನು ವಿಷಯದ ಕಡೆಗೆ ಹೇಗೆ ಆಕರ್ಷಿಸಬೇಕು? ಎಂಬುದು ಶಿಕ್ಷಕನಿಗೆ ಅವಶ್ಯವಾಗಿ ತಿಳಿದಿರಬೇಕಾದ ವಿಷಯ. ವಿದ್ಯಾಭ್ಯಾಸದಲ್ಲಿ ಅಭಿರುಚಿ ತತ್ವದಂತೆ ನಡೆಯಬೇಕೆಂದು ಹೇಳಿದರೆ "ಮೃದುವಾದ ಶಿಕ್ಷಣ ಶಾಸ್ತ್ರವನ್ನು" ಪ್ರತಿಪಾದಿಸಿದಂತೆ ಆಗುವುದಿಲ್ಲ. 'ಅಭಿರುಚಿ' ಎಂದರೆ 'ವಿನೋದ' ಅಥವಾ 'ಸುಖ' ಅಲ್ಲ. ಅಭಿರುಚಿಯುಳ್ಳ ವಿಷಯವೆಂದರೆ

ನಮಗೆ ಸಂಬಂಧಪಟ್ಟ ವಿಷಯ. ಮೇಲೆ ಉದಾಹರಿಸಿದಂತೆ ಅಭಿರುಚಿಯ ಈ ವಿಶಾಲಾರ್ಥವನ್ನು ಶಿಕ್ಷಣದಲ್ಲಿ ಸ್ವೀಕರಿಸಬೇಕು. ಅಭಿರುಚಿಯು ಕಾರ್ಯಶೀಲವಾದ ಒಂದು ಮನೋಭಾವವು. ಅದು ಒಂದು ಪ್ರವೃತ್ತಿಯಾಗಿರಬಹುದು, ಅನುರಾಗವಾಗಿರಬಹುದು, ಇಲ್ಲವೆ ಸಂಪೂರ್ಣವಾಗಿ ಸುಸಂಘಟಿತವಾದ ಆತ್ಮವಾಗಿರಬಹುದು. ಸಾಲೆಯಲ್ಲಿ ಕೆಲವೊಂದು ಇಷ್ಟವಿಲ್ಲದ ಕೆಲಸವನ್ನು ನಾವು ಮಾಡಲೇಬೇಕಾಗುತ್ತದೆ. ಆದರೆ ವಿದ್ಯಾರ್ಥಿಗೆ ಸಂಬಂಧವಾಗುವಂತೆ ಅದನ್ನು ಮಾಡಬೇಕು. ಇಲ್ಲಿ ಆತ್ಮಗೌರವವನ್ನು ಕಾಯಬೇಕೆಂಬ ಉದ್ದೇಶದಿಂದ ಅವನನ್ನು ಉತ್ತೇಜನಗೊಳಿಸಬೇಕು. ಮಕ್ಕಳು ನೀರಸವಾದದ್ದನ್ನು ಎದುರಿಸಲು ಕಲಿಯಬೇಕೆಂಬ ತತ್ವವು ಅತಿ ಶ್ರೇಷ್ಠವಾದುದೆಂಬುದು ನಿಜ. ಆದರ ಅಷ್ಟೇ ಕಠಿನವಾದ ಅಭಿರುಚಿ ತತ್ವವು ಅದರಿಂದ ಭಿನ್ನವಾದುದೇನೂ ಅಲ್ಲ.

ಯಾವ ವಿಧಾನದಿಂದ ಮಕ್ಕಳ ಅವಧಾನವನ್ನು ವಿಷಯದ ಕಡೆಗೆ ಎಳೆಯಬೇಕೆಂಬುದು ಈಗಾಗಲೆ ಶಿಕ್ಷಕನಿಗೆ ತಿಳಿದಿರಬಹುದು. ಶಿಶುಗಳ ವ್ಯವಹಾರದಲ್ಲಿ ಕೇವಲ ಪ್ರವೃತ್ತಿಗಳೇ ಪ್ರಬಲವಾಗಿರುವುದರಿಂದ ಬಾಲಕರ ವರ್ಗದ ಶಿಕ್ಷಕನು ಅಸಂಸ್ಕೃತವಾದ ಕುತೂಹಲ, ಆತ್ಮಪ್ರತಿಷ್ಠೆ, ಯುದ್ಧ ಮೊದಲಾದ ಪ್ರವೃತ್ತಿಗಳನ್ನು ಪ್ರಚೋದನಗೊಳಿಸಿ ತಾನು ಕಲಿಸುವ ವಿಷಯದ ಕಡೆಗೆ ಅವರ ಲಕ್ಷ್ಯವನ್ನು ಎಳೆಯಬೇಕು. ಆದರೆ ಕ್ರಮೇಣ ಶ್ರೇಷ್ಠತರವಾದ ಅವಧಾನೋಪಾಯಗಳನ್ನು ಅಂದರೆ ಸಂಪಾದಿಸಿದ ಅಭಿರುಚಿಗಳನ್ನು ಅಥವಾ ಅನುರಾಗಗಳನ್ನು ಉಪಯೋಗಿಸಬೇಕೆಂಬುದನ್ನು ಶಿಕ್ಷಕನು ಮರೆಯಬಾರದು. ಇನ್ನೊಂದು ಮಾತು: ಬಾಲಕರು ತಾವು ನೋಡಬಲ್ಲ ಮತ್ತು ಕೇಳಬಲ್ಲ ಸ್ಥೂಲವಸ್ತುಗಳ ಕಡೆಗೆ ಗಮನಕೊಡುತ್ತಾರೆ. ದೊಡ್ಡವರಂತೆ ಅಮೂರ್ತವಾದ ಭಾವನೆಗಳಿಗೆ ಲಕ್ಷ್ಯಗೊಡಲಾರರು. ಆದ್ದರಿಂದ ಬಾಲಕರ ಪಾಠಗಳಲ್ಲಿ ಪ್ರತ್ಯಕ್ಷ ವಸ್ತುಗಳನ್ನು ಮತ್ತು ಚಿತ್ರಗಳನ್ನು ಹೆಚ್ಚಾಗಿ ಉಪಯೋಗಿಸಬೇಕು. ಕೇವಲ ಮಾತಿನ ಪ್ರವಾಹವನ್ನು ಹರಿಯಿಸಬಾರದು. ಪ್ರೌಢ ವಿದ್ಯಾರ್ಥಿಗಳ ಶಿಕ್ಷಕನು ಅವರ ಚಿತ್ತವನ್ನು ಆಕರ್ಷಿಸಲಿಕ್ಕೆ ಚಮತ್ಕಾರಕ ಪದ್ಧತಿಗಳನ್ನು ಉಪಯೋಗಿಸಬಾರದು: ಮೇಜು ಬಾರಿಸುವುದು ನಕಲಿಮಾಡುವುದು, ಗದರಿಸಿ ಶಿಸ್ತುಕಾಯುವುದು, ಅವಧಾನವನ್ನು

ಬೇಡುವ್ರದು, ವಿಷಯವು ಮಹತ್ವವಿದ್ದೆಂದು ಹೇಳುವುದು ಇವೆಲ್ಲವು ನಿಷ್ಪ್ರಯೋಜಕವಾದ ಉಪಾಯಗಳು. ಅಂತಃಪ್ರೇರಣೆಯಿಂದ ಚಿತ್ತಗೊಡು ವಂತೆ ಮಾಡಿದರೆ ಶಿಕ್ಷಕನು ಯಶಸ್ವಿಯಾಗುವನು.

ಬಾಲಕರ ಅವಧಾನದ ಬಗ್ಗೆ ಇನ್ನೊಂದು ಮಾತನ್ನು ಇಲ್ಲಿ ಹೇಳಬೇಕಾಗಿದೆ. ಚಿಕ್ಕ ಮಕ್ಕಳ ಚಿತ್ತವು ಬಹಳ ಚಂಚಲವಾದುದು. ಕಾರಣ ಅವರ ಪಾಠಗಳ ಅವಧಿಯು ಅಲ್ಪವಾಗಿರಬೇಕು. ಒಂದೇ ವಿಷಯು ವನ್ನು ಹೆಚ್ಚು ವೇಳೆ ಹೇಳಹತ್ತಿದರೆ ಅವರಲ್ಲಿ ಅಲಕ್ಷ್ಯವೂ ಬೇಸರವೂ ಉಂಟಾಗುವುದು. ದೊಡ್ಡವರ ಮಾತು ಹಾಗಲ್ಲ. ಅವರು ಅಭ್ಯಾಸದ ಬಲದಿಂದ ವಿಷಯದ ಕಡೆಗೆ ಬಹಳ ಹೊತ್ತಿನ ವರೆಗೆ ಲಕ್ಷ್ಯವನ್ನು ಪೂರೈಸ ಬಹುದು. ಮಾನಸಿಕ ಶ್ರಮವು ಮಕ್ಕಳಂತೆ ಅವರಲ್ಲಿ ಬೇಗ ಉಂಟಾಗದು. ಆದುದರಿಂದ ಚಿಕ್ಕ ಮಕ್ಕಳ ಪಾಠಗಳ ಅವಧಿಯು ೨೦–೩೦ ಮಿನಿಟುಗಳನ್ನು ಮೀರಕೂಡದು, ಆದರ ದೊಡ್ಡವರ ಪಾಠಗಳ ಅವಧಿಯು ೪೦–೫೦ ಮಿನಿಟು ಗಳ ವರೆಗೆ ಇದ್ದರೂ ನಡೆಯುವುದು.

ಬೌದ್ಧಿಕ ಶಿಕ್ಷಣದಲ್ಲಿ ಅಭಿರುಚಿ, ಅನುರಾಗ ಮತ್ತು ಅಸ್ವೈಚ್ಛಿಕ ಅವಧಾನಗಳು ಅತ್ಯಂತ ಮಹತ್ವವಾದವುಗಳು. ವಿವೇಕಿಯಾದ ಶಿಕ್ಷಕನು ವಿದ್ಯಾರ್ಥಿಗಳಲ್ಲುಂಟಾದ ಅನುರಾಗಗಳ ಅಥವಾ ಅವರ ಹವ್ಯಾಸಗಳ ಸಹಾಯವನ್ನು ತಕ್ಕೊಳ್ಳಬೇಕು. ತನ್ನ ಬೋಧನಕ್ರಮವನ್ನು ಪ್ರಬಲವಾದ ಅಭಿರುಚಿಗಳ ಮಾರ್ಗದಿಂದಲೇ ಸಾಗಿಸಬೇಕು. ಆದರೆ ಇಷ್ಟಕ್ಕೇ ಅವನ ಕಾರ್ಯವು ಪೂರ್ತಿಯಾದಂತಾಗಲಿಲ್ಲ. ಅಭ್ಯಾಸದ ವಿವಿಧ ವಿಷಯಗಳಲ್ಲಿ ಅನುರಾಗವನ್ನು ಹುಟ್ಟಿಸಿ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಬೇಕು. ವಿಷಯದಲ್ಲಿ ಆಸ್ಥೆಯು ಹೆಚ್ಚಾದ ಹಾಗೆಲ್ಲ ಆ ವಿಷಯವನ್ನು ಕೈವಶಮಾಡಿ ಕೊಳ್ಳಬೇಕೆಂಬ ಪ್ರಯತ್ನವೂ ಹೆಚ್ಚುವುದು. ಈ ಪ್ರಯತ್ನವನ್ನು ಬಾಲಕನು ಸ್ವಯಂಪ್ರೇರಣೆಯಿಂದಲೂ ಆತ್ಮಸಂತೋಷದಿಂದಲೂ ಮಾಡುವನು. ಆಗ ಕಲಿಯುವುದು ಕಠಿನವೆನಿಸುವ ಕೆಲಸವಾಗದೆ ಆನಂದದಾಯಕ ಆಟವಾಗುತ್ತದೆ. ವಿದ್ಯಾರ್ಥಿಯಲ್ಲಿ ಗಣಿತ-ಪ್ರೇಮವನ್ನು ಹುಟ್ಟಿಸಿದರೆ ಆ ವಿದ್ಯಾರ್ಥಿಯು ಗಣಿತ ಮಾಡುವುದು ಕಷ್ಟದ ಕಾರ್ಯವೆಂದು ತಿಳಿಯದೆ. ಅದು ತನ್ನ ಜ್ಞಾನಾಮೃತದ ಸಾಧನೆಯೆಂದು ತಿಳಿಯುತ್ತಾನೆ. ತಾನು

ಅಭ್ಯಾಸಿಸುವ ವಿಷಯುಗಳ ಬಗೆಗೆ ವಿದ್ಯಾರ್ಥಿಯಲ್ಲಿ ಹೀಗೆ ಅನುರಾಗವು ಉಂಟಾದಲ್ಲಿ ಅವನು ತನ್ನ ಶಿಕ್ಷಣವನ್ನು ತನ್ನ ಕೈಯಲ್ಲಿಯೆ ತಕ್ಕೊಳ್ಳುತ್ತಾನೆ; ಅಂದರೆ ತನ್ನ ವಿದ್ಯಾರ್ಜನೆಯನ್ನು ತಾನೇ ಮುಂದುವರಿಸುತ್ತಾನೆ. ಶಿಕ್ಷಕನು ತನ್ನನ್ನು ದುಡಿಸಿಕೊಳ್ಳುವ ಮೇಲಧಿಕಾರಿಯೆಂದು ಗ್ರಹಿಸದೆ ಅವನು ತನ್ನ ಮಿತ್ರನೆಂದೂ ಮಾರ್ಗದರ್ಶಕನೆಂದೂ ತಿಳಿಯುತ್ತಾನೆ.

ಇನ್ನು ಐಚ್ಛಿಕ ಅವಧಾನದ ವಿಷಯ. ವಿದ್ಯಾರ್ಥಿಗಳು ತಮ್ಮ ಅಭ್ಯಾಸದಲ್ಲಿ ನಿರತರಾಗಲಿಕ್ಕೆ ನಾವು ಅವರನ್ನು ಎಲ್ಲ ರೀತಿಯಿಂದ ಪ್ರೋತ್ಸಾಹಿಸಬೇಕು; ಅವರಲ್ಲಿ ಸ್ವಾಭಿಮಾನವನ್ನು ಬೆಳೆಯಿಸಬೇಕು. ಕಷ್ಟಗಳಿಗೆ ಸೋತು ಹೋಗಬಾರದೆಂದು ಅವರನ್ನು ಹುರಿದುಂಬಿಸಬೇಕು. ಐಚ್ಛಿಕ ಅವಧಾನದ ಮಹತ್ವವು ಬೌದ್ಧಿಕ ಶಿಕ್ಷಣಕ್ಕಿಂತ ನೈತಿಕ ಶಿಕ್ಷಣದಲ್ಲಿ ಅಧಿಕವಾಗಿದೆ. ದುರ್ಮಾರ್ಗಕ್ಕೆ ಹಾತೊರೆಯುವ ಮನಸ್ಸನ್ನು ಎಳೆದು ಸನ್ಮಾರ್ಗಕ್ಕೆ ಹಚ್ಚುವುದು ನೈತಿಕ ಶಿಕ್ಷಣದ ಧ್ಯೇಯ. ಅತ್ತಿತ್ತ ಹರಿದಾಡುವ ಮನಸ್ಸನ್ನು ಇಚ್ಛಾಶಕ್ತಿಯಿಂದ ಯೋಗ್ಯವಾದ ಒಂದೇ ವಸ್ತುವಿನಲ್ಲಿ ಅಥವಾ ವಿಷಯದಲ್ಲಿ ನಿಯೋಗಿಸುವುದು ನೈತಿಕ ಶಿಕ್ಷಣದ ಅಥವಾ ಧಾರ್ಮಿಕ ಶಿಕ್ಷಣದ ಫಲಿತಾಂಶವು. ಇದುವೇ ಧ್ಯಾನ ಅಥವಾ ಯೋಗ (योगश्चित्तवृत्ति निरोधः).

ಸಾರಾಂಶವೇನೆಂದರೆ— ಮಕ್ಕಳ ಅವಧಾನವನ್ನು ಎಳೆಯಲಿಕ್ಕೆ ಪ್ರವೃತ್ತಿಗಳನ್ನೂ ಅನುರಾಗಗಳನ್ನೂ ಸ್ವಾಭಿಮಾನವನ್ನೂ ಜಾಗ್ರತಗೊಳಿಸಬೇಕು. ಚಿತ್ತವು ಏಕಾಗ್ರವಾಗಲಿಕ್ಕೆ ಆರಂಭದಲ್ಲಿ ಪಾಠದ ಉದ್ದೇಶವನ್ನು ಸ್ಪಷ್ಟವಾಗಿ ಹೇಳಬೇಕು. ಕೊನೆಯದಾಗಿ ಶೀಲಸಂವರ್ಧನೆಯೂ ಐಚ್ಛಿಕ ಅವಧಾನವೂ ಜೊತೆಜೊತೆಯಾಗಿ ಸಾಗುವುವೆಂಬುವನ್ನು ಮರೆಯಲಾಗದು.

೯

# ಸ್ಮೃತಿ

**ಸ್ಮೃತಿ ಅಂದರೇನು ?.**— ಅನುಭವಗಳ ಅವಶೇಷಗಳನ್ನು ಸಂಗ್ರಹಿಸುವುದು ಮನಸ್ಸಿನ ಒಂದು ಮೂಲಲಕ್ಷಣವೆಂದೂ ಈ ಸಂಸ್ಕಾರದ ಪರಿಣಾಮವು ನಮ್ಮ ಪ್ರತಿನಿತ್ಯದ ಅನುಭವಗಳಲ್ಲಿ ವ್ಯಕ್ತವಾಗುವುದೆಂದೂ ನಾವು ಹಿಂದೆಯೆ ಹೇಳಿದ್ದೇವೆ ಪ್ರವೃತ್ತಿಗಳು, ಮನೋವ್ಯಾಪಾರ, ಪರಂಪರೆ, ಮತ್ತು ಬೆಳವಣಿಗೆ ಇವೆಲ್ಲವು ಆನುವಂಶಿಕ ಸ್ಮೃತಿಯೆಂದು ಸೀಮನ್, ರಿಗ್‌ನ್ಯಾನೋ, ಬ್ಲ್ಯೂಲರ್, ಮೊದಲಾದ ಆಧುನಿಕ ಜೀವ ವೈಜ್ಞಾನಿಕರ ಮತವಾಗಿದೆ ಸಂಸ್ಕಾರವು ಅಥವಾ ಆನುವಂಶಿಕ ಸ್ಮೃತಿಯು ಪೂರ್ವದ ಅನುಭವವೆಂಬ ಕಲ್ಪನೆಯು ಪ್ರಾಣಿಗಳಿಗೆ ಎಳ್ಳಷ್ಟೂ ಇರುವುದಿಲ್ಲ. ಆದರೆ ನಾವು ಯಾವುದಕ್ಕೆ ಸ್ಮೃತಿಯೆಂದು ಎನ್ನುತ್ತೇವೊ ಅದರಲ್ಲಿ ಆಗಿಹೋದ ಅನುಭವದ ಸ್ಪಷ್ಟ ಜ್ಞಾನವಿರುತ್ತದೆ. ಮುಂಜಾವಿನಲ್ಲಿ ನಾನು ಯಾವ ಪದಾರ್ಥಗಳನ್ನು ಊಟಮಾಡಿದೆನೆಂಬುದನ್ನು ನೆನಪುಮಾಡಿಕೊಳ್ಳುವಾಗ ನನಗೆ ಊಟದ ಸ್ಮೃತಿಯು ಬರುತ್ತದೆ. ಅದರಂತೆಯೆ ಕೋರ್ಟಿನಲ್ಲಿ ಸಾಕ್ಷಿ ಹೇಳುವವನು ತನ್ನ ಅನುಭವಗಳನ್ನು ಜ್ಞಾಪಕಕ್ಕೆ ತಂದುಕೊಳ್ಳುತ್ತಾನೆ. ಗತಾನುಭವವನ್ನು ಗುರುತಿಸುವುದೇ ಸ್ಮೃತಿಯ ಮುಖ್ಯ ಲಕ್ಷಣವು.

ಕೆಲವರು ಸ್ಮೃತಿಯಲ್ಲಿ ಶಾರೀರಿಕ ಸ್ಮೃತಿ ಮತ್ತು ಮಾನಸಿಕ ಸ್ಮೃತಿ ಎಂದು ಎರಡು ಭೇದಗಳನ್ನು ಮಾಡುತ್ತಾರೆ. ಶಾರೀರಿಕ ಸ್ಮೃತಿ ಎಂದರೆ ರೂಢಿ (Habit) . ಅರ್ಥ ತಿಳಿಯದಲೆ ಗಣಿತದ ಸೂತ್ರಗಳನ್ನು, ಮಗ್ಗಿಗಳನ್ನು, ಕೋಷ್ಟಕಗಳನ್ನು ಕಂಠಪಾಠ ಮಾಡುವುದು ಒಂದು ರೂಢಿ ಇಂತಹ ರೂಢಿಯಿಂದ ಮಿದುಳಿನಲ್ಲಿ ಕೆಲವು ಗುರುತುಗಳು ಅಥವಾ ಹೆಜ್ಜೆಗಳು ಉಂಟಾಗುತ್ತವೆ. ಮೇಲಿಂದ ಮೇಲೆ ರೂಢಿ ಮಾಡುವಾಗ್ಗೆ ಈ ಗುರುತುಗಳು ತೀಡಿದಂತಾಗುತ್ತವೆ; ಕಲಿತದ್ದನ್ನು ಪುನಃ ಹೇಳಲಿಕ್ಕೆ ಸುಲಭ

ವಾಗುತ್ತದೆ. ಇದು ನಿಜವಾದ ಸ್ಮೃತಿಯಲ್ಲವೆಂದು ಬರ್ಗಸಾನ್‌ನು ಅಭಿಪ್ರಾಯಪಡುತ್ತಾನೆ. 'ನಿಜವಾದ ಸ್ಮೃತಿಯೆಂದರೆ ಮಾನಸಿಕ ಸ್ಮೃತಿ. ಒಂದು ಗದ್ಯಭಾಗವನ್ನು ಅರ್ಥ ತಿಳಿದು ಬಾಯಪಾಠಮಾಡುವಲ್ಲಿ ಇದು ಕಂಡುಬರುತ್ತದೆ. ಈ ಸ್ಮೃತಿಯಲ್ಲಿ ಮಾನಸಿಕ ಕ್ರಿಯೆಯು ಅಡಕವಾಗಿರುತ್ತದೆ ಸ್ಮೃತಿಗೆ ಮಿದುಳಿನ ಅವಶ್ಯಕತೆಯುಂಟು. ಆದರೆ ಅದು ಒಂದು ಸಾಧನ ಮಾತ್ರ. ಒಬ್ಬ ಮನುಷ್ಯನು ತಾನು ಕಲಿತುದನ್ನು ಇದ್ದಂತೆ ಹೇಳುವುದಕ್ಕೆ ಪುನರುಕ್ತಿಗಿಂತ ಅರ್ಥವು ಅತ್ಯಂತ ಫಲದಾಯಕವಾಗುವುದು ಅರವತ್ತು ಶಬ್ದಗಳ ಒಂದು ಕವಿತೆಯನ್ನು ಆರೇಳು ಬಾರಿ ಓದಿಕೊಂಡು ಮನನ ಮಾಡಬಹುದು. ಆದರೆ ಅರ್ಥವಿಲ್ಲದ ಅರವತ್ತು ಅಕ್ಷರಗಳನ್ನು ನೂರಾರು ಬಾರಿ ಓದಿದರೂ ನೆನಪಿನಲ್ಲಿ ನಿಲ್ಲುವುದಿಲ್ಲ ಈ ಮಾತು ಪ್ರಯೋಗದಿಂದ ಸಿದ್ಧವಾಗಿದೆ "ಅರ್ಥವಿಲ್ಲದ ಅಕ್ಷರಗಳಿಗಿಂತ ಅರ್ಥವುಳ್ಳ ಪದ್ಯಗಳನ್ನು ತಾನು ಎಂಟು, ಒಂಬತ್ತು ಪಟ್ಟು ತೀವ್ರ ಕಲಿಯಬಲ್ಲ"ನೆಂದು ಎಬಿನ್‌ಘಾಸ್ ಎಂಬವನು ಪ್ರಯೋಗದ ಮುಖಾಂತರ ಕಂಡುಹಿಡಿದಿದ್ದಾನೆ.

ನೆನಪಿನಲ್ಲಿಡಬೇಕಾದ ವಿಷಯವು ಮೊದಲು ನಮ್ಮ ಮನದಲ್ಲಿ ಬಿಂಬಿಸಬೇಕು. ಮನಸ್ಸಿನಲ್ಲಿ ಮೂಡಿದುದನ್ನು ಗ್ರಾಮಾಫೋನ್ ರೆಕಾರ್ಡಿಗೆ ಹೋಲಿಸುವುದು ಉಚಿತವಲ್ಲ. ಮನಸ್ಸು ಗ್ರಾಮಾಫೋನ್ ರೆಕಾರ್ಡಿನಂತೆ ಒಂದು ಯಾಂತ್ರಿಕ ಕ್ರಿಯೆಯುಳ್ಳದಲ್ಲ. ಪ್ರತಿಯೊಬ್ಬನ ಮನಸ್ಸಿನಲ್ಲಿ ಮುದ್ರಿಸಲ್ಪಡುವ ವಿಷಯವು ಅವನವನ ಮನೋವೃತ್ತಿ, ಅಭಿರುಚಿ, ಸ್ವಭಾವ ವೈಚಿತ್ರ್ಯ ಇವುಗಳನ್ನು ಅವಲಂಬಿಸಿರುತ್ತದೆ. ಮನಃಪೂರ್ವಕವಾಗಿ ಕಲಿತ ವಿಷಯವು ಮಾತ್ರ ಸ್ಮೃತಿಯಲ್ಲಿ ಉಳಿಯಬಲ್ಲದು. ಕೇವಲ ಕೇಳುವುದರಿಂದ ಮತ್ತು ನೋಡುವುದರಿಂದ ಅದು ನಮ್ಮ ನೆನಪಿನಲ್ಲಿ ನಿಲ್ಲುವುದೆಂಬುದು ಸುಳ್ಳು. ಅನುರಾಗಯುಕ್ತ ಪ್ರಯತ್ನವಿಲ್ಲದಲೆ ಏನೊಂದನ್ನೂ ನೆನಪಿನಲ್ಲಿಡುವುದು ಶಕ್ಯವಿಲ್ಲ. ಎಂದರೆ ಕಲಿಯುವವನ ಉತ್ಸಾಹಭರಿತ ಸಹಕಾರವಿಲ್ಲದೆ ವಿದ್ಯಾರ್ಜನೆಯು ಅಸಾಧ್ಯವಾದ ಮಾತು. ವ್ಯಕ್ತಿಯ ಅಭಿರುಚಿಗಳಿಗೆ ಸಂಬಂಧಪಟ್ಟ ವಿಷಯವಿದ್ದರೆ ಅದು ಅವನಲ್ಲಿ ಸ್ಥಿರವಾಗಿ ನಿಲ್ಲುತ್ತದೆ.

**ಸ್ಮೃತಿ ಮತ್ತು ಅಭಿರುಚಿ.—** "ಅಭಿರುಚಿಯು ಅವಧಾನದ ತಾಯಿ; ಅವಧಾನವು ಸ್ಮೃತಿಯ ತಾಯಿ. ನೀವು ನಿಮ್ಮ ಸ್ಮರಣಶಕ್ತಿಯನ್ನು ನಿಮ್ಮ ವಶಕ್ಕೆ ತೆಗೆದುಕೊಳ್ಳಬೇಕಾದರೆ ಅದರ ತಾಯಿಯನ್ನೂ ಅಜ್ಜಿಯನ್ನೂ ಮೊದಲು ವಶಪಡಿಸಿಕೊಳ್ಳಬೇಕು," ಎಂದು ಒಬ್ಬ ಲೇಖಕನು ಈ ಮೂರಕ್ಕೂ ಇರುವ ಸಂಬಂಧವನ್ನು ಬಹು ಚೆನ್ನಾಗಿ ಹೇಳಿದ್ದಾನೆ. ಯಾವ ಪದ್ಯವು ವಿದ್ಯಾರ್ಥಿಗೆ ಸೇರುತ್ತದೆಯೊ ಅದನ್ನು ಅವನು ಹೆಚ್ಚು ತೀವ್ರ ಜ್ಞಾಪಕಕ್ಕೆ ತಂದುಕೊಳ್ಳಬಲ್ಲನೆಂಬುದನ್ನು ಪ್ರಯೋಗದಿಂದ ಸಿದ್ಧಗೊಳಿಸಿದ್ದಾರೆ ಕೇವಲ ಕುರುಡು-ವಾರ ಮಾಡಲಿಕ್ಕೆ ಮಕ್ಕಳನ್ನು ಒತ್ತಾಯಪಡಿಸುವುದು ತಪ್ಪು ಪದ್ಧತಿಯು. ಚಿಕ್ಕಮಕ್ಕಳು ಬಿಡಿಬಿಡಿಯಾದ ಅಕ್ಷರಗಳನ್ನು ಎಷ್ಟೋ ಸಾರ ತೀಡಿದರೂ ಅವು ಅವರ ಜ್ಞಾಪಕದಲ್ಲಿ ನಿಲ್ಲುವುದೇ ಇಲ್ಲ ಇದು ಬಾಲಕವರ್ಗದ ಉಪಾಧ್ಯಾಯರ ಅನುಭವಕ್ಕೆ ಬಂದ ಮಾತು. ನೆನಪಿಡಲು ಅರ್ಹವಾದ ವಿಷಯಗಳಲ್ಲಿ ಮಗುವು ಅಭಿರುಚಿಯನ್ನು ಪಡೆಯುವಂತೆ ಮೊದಲು ಯತ್ನಿಸಬೇಕು ಅಭಿರುಚಿಯು ಸ್ಮೃತಿಯ ಮೂಲವೆಂಬುದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು. "ತಮ್ಮ ಉದ್ಯೋಗಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಎಷ್ಟೋ ಜನರು ಚೆನ್ನಾಗಿ ನೆನಪಿನಲ್ಲಿ ಇಡುತ್ತಾರೆ ಕಾಲೇಜಿನ ಜಟ್ಟಿಯು ಪುಸ್ತಕಗಳ ಅಭ್ಯಾಸದಲ್ಲಿ ದಡ್ಡನಿದ್ದರೂ ವಿವಿಧ ಆಟಗಳಲ್ಲಿ ಮತ್ತು ಕಸರತ್ತುಗಳಲ್ಲಿಯ ತನಗಿಹ 'ರೆಕಾರ್ಡು'ಗಳ ಜ್ಞಾನದಿಂದ ನಿಮ್ಮನ್ನು ದಂಗುಬಡಿಸಬಹುದು. ಇದೇ ಮೇರೆಗ ವ್ಯಾಪಾರಿಯು ಸಾಮಾನುಗಳ ಬೆಲೆಗಳನ್ನೂ ರಾಜನೀತಿಜ್ಞನು ಅನ್ಯ ರಾಜನೀತಿಜ್ಞರ ಭಾಷಣ ಮತ್ತು ಮತಗಳನ್ನೂ ವಿಪುಲವಾಗಿ ನೆನಪಿನಲ್ಲಿಡುವುದು ಬೇರೆಯವರಿಗೆ ಅಗಾಧದ ಸಂಗತಿಯಾಗಿರುತ್ತದೆ. ಅವರು ತಮ್ಮ ವಿಷಯವನ್ನು ಮನಸ್ಸಿನಲ್ಲಿ ಮೇಲಿಂದ ಮೇಲೆ ಆಲೋಚಿಸುತ್ತಿರುವುದೇ ಇದಕ್ಕೆ ಕಾರಣ" ಎಂದು ವಿಲಿಯಮ್ ಜೇಮ್ಸನು ಹೇಳುತ್ತಾನೆ

ಒಬ್ಬ ವ್ಯಕ್ತಿಯು ತನಗೆ ಇಷ್ಟವಿದ್ದ ಸಂಗತಿಯನ್ನು ವಿಚಾರಿಸುತ್ತಿದ್ದರೆ ಅದರಲ್ಲಿ ಅವನಿಗೆ ಅಭಿರುಚಿಯು ಇದ್ದಂತೆಯೇ ಸರಿ. ಅಭಿರುರುಚಿಯುಳ್ಳ ವಸ್ತುವು ಇದ್ದರೆ ಅದನ್ನು ತಿಳಿದುಕೊಳ್ಳಬೇಕೆಂಬ ಉತ್ಸಾಹವೂ ಇಚ್ಛೆಯೂ

ಉಂಟಾಗುತ್ತವೆ. ಕಲಿಯಬೇಕೆಂಬ ಅಭಿಲಾಷೆಯು ಅಥವಾ ನೆನಪಿನಲ್ಲಿಡ ಬೇಕೆಂಬ ಇಚ್ಛೆಯು ಸ್ಮೃತಿಯ ಮೂಲ ಸಾಧನವು. ಶಿಕ್ಷಕನು ಮಕ್ಕಳಲ್ಲಿಯ ಪ್ರವೃತ್ತಿಗಳ, ಸ್ಥಿರವೃತ್ತಿಗಳ, ಮತ್ತು ಪ್ರಧಾನವೃತ್ತಿಗಳ ಸಹಾಯವನ್ನು ಕೋರದೆ ಗತ್ಯಂತರವಿಲ್ಲೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಏಕೆಂದರೆ ಸ್ಮೃತಿಗೆ ಅಭಿರುಚಿಯು ಆಧಾರ, ಅಭಿರುಚಿಗೆ ಪ್ರವೃತ್ತಿಗಳು ಆಧಾರ.

**ಕಲಿಯುವ ಪದ್ಧತಿಗಳು.**— ಯಾವ ಪದ್ಧತಿಯಿಂದ ಕಲಿತರೆ ವಿಷಯವು ನೆನಪಿನಲ್ಲಿ ಹೆಚ್ಚು ಕಾಲ ನಿಲ್ಲುವುದೆಂಬುದನ್ನು ಪ್ರಯೋಗದಿಂದ ಹುಡುಕಿ ತೆಗೆದಿದ್ದಾರೆ. ಕಾಲದ ದೃಷ್ಟಿಯಿಂದ ನೋಡಿದರೆ ಕಲಿಸುವ ಪದ್ಧತಿಯಲ್ಲಿ ಎರಡು ಬಗೆಗಳುಂಟು. (೧) **ನಿರಂತರ ಪದ್ಧತಿ;** ಮತ್ತು (೨) **ವಿಭಾಗ ಪದ್ಧತಿ.** ಒಂದು ಕವಿತೆಯನ್ನು ಒಂದೇ ಕಾಲಕ್ಕೆ ಏಳು ಸಾರೆ ಓದುವುದು ನಿರಂತರ ಪದ್ಧತಿಯೆನಿಸುತ್ತದೆ. ಆದರೆ ಅದನ್ನೇ ದಿವಸಕ್ಕೊಂದಾವರ್ತಿಯಂತೆ ಏಳು ದಿವಸ ಓದುವುದು ವಿಭಾಗ ಪದ್ಧತಿ ಯೆನಿಸುತ್ತದೆ. ನಿರಂತರ ಪದ್ಧತಿಗಿಂತ ವಿಭಾಗ ಪದ್ಧತಿಯು ಶ್ರೇಷ್ಠವಾದದ್ದು. ಏಕೆಂದರೆ ಆ ರೀತಿಯಿಂದ ಕಲಿತ ವಿಷಯವು ಹೆಚ್ಚು ಕಾಲ ನೆನಪಿನಲ್ಲಿ ಉಳಿಯುತ್ತದೆ. ಕಲಿತ ವಿಷಯವು ವಿರಾಮಕಾಲದಲ್ಲಿ ದೃಢವಾಗುತ್ತದೆ. ಇದೇ ವಿಭಾಗ ಪದ್ಧತಿಯ ಲಾಭ. ಓದುವುದು ಆದಷ್ಟು ದೀರ್ಘ ಅವಧಿಯ ವರೆಗೆ ಸಾಗಬೇಕು. ಇಪ್ಪತ್ತು ನುಡಿಗಳ ಒಂದು ಕವಿತೆಯನ್ನು ಕೆಳಗೆ ಕೊಟ್ಟ ಕ್ರಮದಂತೆ ಓದಿದ್ದರಿಂದ ಅದನ್ನು ಚೆನ್ನಾಗಿ ಜ್ಞಾಪಕದಲ್ಲಿಡಲು ಒಬ್ಬವನಿಗೆ ಸಾಧ್ಯವಾಯಿತು. ಎಂದರೆ ಆ ಕವಿತೆಯನ್ನು ಅವನು ೨ ತಾಸು, ೮ ತಾಸು, ೧ ದಿವಸ, ಹೀಗೆಯೆ ೨ ದಿವಸ, ೪ ದಿವಸ, ೧೬ ದಿವಸಗಳ ನಂತರ ಒಮ್ಮೊಮ್ಮೆ ಓದಿದ್ದರಿಂದ ಅದು ಅವನ ಜ್ಞಾಪಕದಲ್ಲಿ ಚೆನ್ನಾಗಿ ಉಳಿಯಿತು. "ಸ್ಮೃತಿಯು ಬಾಡುವ ಕಾಲಕ್ಕೆ ಅದನ್ನು ಚೇತರಿಸುವುದು ಮರೆವಿಗೆ ತಡೆಹಾಕುವ ಉತ್ತಮವಾದ ಉಪಾಯವು" ಎಂದು ಲಾಯನ್ ಎಂಬವನು ಕಂಡುಹಿಡಿದಿರುವನು.

ವಿಷಯದ ದೃಷ್ಟಿಯಿಂದ ನೋಡಿದರೆ ಬಾಯಿಪಾಠ ಮಾಡುವ ಬೇರೆ ಮೂರು ಪದ್ಧತಿಗಳುಂಟು: (೧) **ಅಖಂಡ ಪದ್ಧತಿ,** (೨) **ಖಂಡ ಪದ್ಧತಿ,**

(೩) **ಮಿಶ್ರ ಪದ್ಧತಿ.** ಒಂದು ಕವಿತೆಯನ್ನು ಸಾದ್ಯಂತ ಓದಿ ಪಾಠಮಾಡುವ ಅಖಂಡ ಪದ್ಧತಿ ಉತ್ತಮವೋ, ಅಥವಾ ಒಂದೊಂದೇ ನುಡಿಯನ್ನು ಪಾಠ ಮಾಡುತ್ತ ಹೋಗುವ ಖಂಡ ಪದ್ಧತಿಯು ಉತ್ತಮವೋ ಎಂದು ವಿಚಾರಿಸಿ ದರೆ ಬೇರೆ ಬೇರೆ ಜನರು ಭಿನ್ನ ಭಿನ್ನ ಅಭಿಪ್ರಾಯಪಡುವರು. ಆದರೆ ಈ ಎರಡೂ ಪದ್ಧತಿಗಳಿಗಿಂತ 'ಮಿಶ್ರ ಪದ್ಧತಿ'ಯು ಒಳ್ಳೆಯದೆಂದು ಬಹು ಜನರ ಮತ. 'ಅಖಂಡ ಪದ್ಧತಿ'ಯಲ್ಲಿ ಕಲಿಯಬೇಕಾದ ಪಾಠವನ್ನು ಮೊದಲಿನಿಂದ ಕಡೆಯ ವರೆಗೆ ಓದಬೇಕಾಗುತ್ತದೆ. 'ಖಂಡ ಪದ್ಧತಿ'ಯಲ್ಲಿ ಪಾಠದೊಳಗೆ ಅನೇಕ ಭಾಗಗಳನ್ನು ಮಾಡಿ ಪ್ರತಿಯೊಂದು ಭಾಗವನ್ನು ಕಲಿತ ನಂತರ ಮತ್ತೆ ಪಾಠವನ್ನು ಆರಂಭದಿಂದ ಕಲಿಯಬೇಕಾಗುತ್ತದೆ. ವಿಂಚ್ ಎಂಬವನ ಮತದ ಪ್ರಕಾರ ಬಾಲಕರಿಗೆ "ಖಂಡ ಪದ್ಧತಿ"ಯು ಶ್ರೇಷ್ಠವಾದುದು. ಏಕೆಂದರೆ ಅವರು ದೊಡ್ಡ ಕೆಲಸವನ್ನು ಮಾಡಲು ನಿರುತ್ಸಾಹಗೊಳ್ಳುತ್ತಾರೆ. ಮತ್ತು ಒಂದೊಂದೇ ಪದ್ಯವನ್ನು ಚೆನ್ನಾಗಿ ಕಲಿತಲ್ಲಿ ಅವರಿಗೆ ಸಣ್ಣ ಸಣ್ಣ ಭಾಗಗಳನ್ನು ನೆನಪಿನಲ್ಲಿಡಲಿಕ್ಕೆ ಸುಲಭವಾಗುತ್ತದೆ. ಅಷ್ಟಷ್ಟೇ ಬಾಯಿಪಾಠ ಹೇಳಲಿಕ್ಕೆ ಬರುತ್ತದೆಂಬ ಅಭಿಮಾನವೂ ಆನಂದವೂ ಉಂಟಾಗುತ್ತವೆ. 'ಮಿಶ್ರ ಪದ್ಧತಿ'ಯಲ್ಲಿ ಎರಡೂ ಪದ್ಧತಿಗಳ ಉತ್ತಮ ಅಂಶಗಳು ಕೂಡಿರುತ್ತವೆ. ಪ್ರೌಢರಿಗೆ ಆದಷ್ಟು ದೊಡ್ಡ ಭಾಗಗಳುಳ್ಳ 'ಮಿಶ್ರ ಪದ್ಧತಿ'ಯು ಒಳ್ಳೆಯದು. ನಾಲೆಯ ಹುಡುಗರಿಗೂ 'ಮಿಶ್ರ ಪದ್ಧತಿ'ಯು ಚೆನ್ನಾದದ್ದು ಎಂದು ಫಾಕ್ಸನು ಅಭಿಪ್ರಾಯಪಡುತ್ತಾನೆ. ನಿಜವಾಗಿ ನೋಡಿದಲ್ಲಿ ಪಾಠದೊಳಗೆ ಅಭಿರುಚಿಯು ಉಂಟಾದರೆ ಯಾವ ಪದ್ಧತಿಯಾದರೇನು?

**ವಿಸ್ಮೃತಿ ಅಥವಾ ಮರೆವು.**— ಸ್ಮೃತಿಯನ್ನು ಕುರಿತು ವಿಚಾರಿಸು ವಾಗ "ನಾವು ಏಕೆ ಮರೆಯುತ್ತೇವೆ?" ಎಂಬ ಪ್ರಶ್ನೆಯು ಸಹಜವಾಗಿ ಹೊರಡುತ್ತದೆ. ಮರೆಯಲಿಕ್ಕೆ ಮುಖ್ಯವಾಗಿ ಎರಡು ಕಾರಣಗಳು ಉಂಟು. (೧) ಕಾಲದ ವ್ಯಯ. (೨) ಅಭಿರುಚಿಯ ಅಭಾವ. ಎಬಿನ್ ಘಾಸ್ ಮತ್ತು ಬ್ಯಲಾರ್ಡ್ ಎಂಬವರು ಕಲಿತದ್ದು ಹೇಗೆ ಮರೆಯುತ್ತ ಹೋಗುತ್ತದೆ ಮತ್ತು ನೆನಪಿನಲ್ಲಿ ಎಷ್ಟು ನಿಲ್ಲುತ್ತದೆ ಎಂಬುದನ್ನು ಪ್ರಾಯೋಗಿಕ ರೀತಿಯಿಂದ

ಕಂಡುಹಿಡಿದಿದ್ದಾರೆ. ಕೆಲವೊಂದು ಸಿದ್ಧಾಂತಕ್ಕೂ ಅವರು ಬಂದಿದ್ದಾರೆ. ಕಲಿತ ನಂತರವೇ ಮರೆಯುವುದು ಬಹಳ ತೀವ್ರ. ಒಂದು ತಿಂಗಳ ನಂತರ ಓದಿದುದರಲ್ಲಿ ಇನ್ನೂ ಉಳಿದಿರುತ್ತದೆ; ಕೆಲವೊಂದು ಅಂಶವು ಕಡೆತನಕ ಉಳಿದಿರುತ್ತದೆ. ಅದರಿಂದ ಪುನಃ ಕಲಿಯುವುದು ಸುಲಭವಾಗುತ್ತದೆ. ಬಾಯಿಪಾಠ ಮಾಡುವ ವಿಷಯವನ್ನು ಕಲಿಯುವುದು ಮುಗಿದ ಕೂಡಲೆ ಅದರ ಪುನರವಲೋಕನ ಮಾಡುವುದು ಲಾಭದಾಯಕವು. ಡಾಕ್ಟರ್ ಬ್ಯಲಾರ್ಡ್‌ನ ಸಿದ್ಧಾಂತದ ಪ್ರಕಾರ ಕಲಿತುದು ಎರಡು ದಿನಗಳ ನಂತರ ಚೆನ್ನಾಗಿ ನೆನಪಿಗೆ ಬರುತ್ತದೆ. ನಮಗೆ ಅಪ್ರಿಯವಾದದ್ದನ್ನು ನಾವು ಮರೆಯುತ್ತೇವೆಂಬ ಫ್ರೂಡನ ತತ್ವವನ್ನು ಈಗಿನ ಪ್ರಾಯೋಗಿಕ ಮನಶ್ಶಾಸ್ತ್ರಜ್ಞರು ಒಪ್ಪುವುದಿಲ್ಲ. ಆದರೆ ನಮಗೆ ಪ್ರಿಯವುಳ್ಳ ಅಥವಾ ಅಭಿರುಚಿಯುಳ್ಳ ಸಂಗತಿಗಳನ್ನು ಬಹುಕಾಲ ನೆನಪಿಡುತ್ತೇವೆಂಬ ಮಾತು ಸುಳ್ಳಲ್ಲ.

**ಸ್ಮೃತಿಯನ್ನು ಬಲಪಡಿಸುವುದು ಶಕ್ಯವಿದೆಯೆ** — ಸ್ಮೃತಿಯಲ್ಲಿ ಕಂಡುಬರುವ ಮುಖ್ಯ ಅಂಶಗಳು ಮೂರು: (೧) ಧಾರಣಶಕ್ತಿ ಅಥವಾ ಮನಸ್ಸಿನಲ್ಲಿ ಸ್ಥಿರವಾಗಿ ಇಟ್ಟುಕೊಳ್ಳುವ ಸಾಮರ್ಥ್ಯ. (೨) ಬಾಯಿಪಾಠ ಮಾಡುವ ಶಕ್ತಿ. (೩) ಸ್ಮರಣಶಕ್ತಿ ಅಥವಾ ಬಾಯಿಪಾಠಮಾಡಿದುದನ್ನು ನೆನಪಿಗೆ ತಂದುಕೊಳ್ಳುವ ಶಕ್ತಿ. ಧಾರಣಾಶಕ್ತಿಯು ಮಾನವನು ಹುಟ್ಟಿದಾಗಲೇ ಪಡೆದುದೆಂದೂ ಅದನ್ನು ಶಿಕ್ಷಣದಿಂದ ಸುಧಾರಿಸುವುದು ಸಾಧ್ಯವಿಲ್ಲೆಂದೂ ಜೇಮ್ಸ್ ಮೊದಲಾದವರು ಹೇಳುತ್ತಾರೆ. ಆದರೆ ಡಾಕ್ಟರ್ ಕಾರ್ಪೆಂಟರ್, ಮ್ಯಾಕ್‌ಡೂಗಲ್ಲ್ ಇವರು ಧಾರಣಾಶಕ್ತಿಯನ್ನು ಬಲಪಡಿಸುವುದು ಶಕ್ಯವಿದೆಯೆಂದು ಅಭಿಪ್ರಾಯಪಡುತ್ತಾರೆ. ಸ್ಮೃತಿಶಕ್ತಿಯು ಕೇವಲ ದೈಹಿಕವಿರದೆ ಮುಖ್ಯವಾಗಿ ಮಾನಸಿಕಕ್ರಿಯೆ ಇರುವುದೆಂದು ಗ್ರಹಿಸಿದರೆ ಇದು ನಿಜವೆಂದು ತೋರುವುದು. "ಜ್ಞಾನಸಂಪಾದನೆಯಲ್ಲಿ ಭಾವನೆಗಳ ಅಥವಾ ಕಲ್ಪನೆಗಳ ಅನುಮಾನ ಸಂಬಂಧಗಳು ಹೆಚ್ಚು ಪ್ರಯೋಜನವುಳ್ಳವುಗಳು" ಎಂದು ಡಾಕ್ಟರ್ ಕಾರ್ಪೆಂಟರ್ ಅವರು ಹೇಳುತ್ತಾರೆ. ಸ್ಮೃತಿಗೆ ಆಧಾರವಾದ ಈ ಸಂಬಂಧಗಳನ್ನು ತಿದ್ದಲಿಕ್ಕೆ ಬರುವಂತಿದೆ. ಉಪಯೋಗಕ್ಕೆ ಬಾರದ ಕೇವಲ ಧಾರಣ ಶಕ್ತಿಯಿಂದ ಪ್ರಯೋಜನವಾದರೂ ಏನು? ಒಬ್ಬ ವಿದ್ಯಾರ್ಥಿಗೆ

“ ಶಿವಾಜಿಯು ಎಂದು ಹುಟ್ಟಿದನು? ” ಎಂದು ಕೇಳಿದರೆ “ ೧೬೨೭ರಲ್ಲಿ ” ಎಂದು ಕೂಡಲೆ ಅವನು ಉತ್ತರ ಕೊಡಬಹುದು. ಆದರೆ “ ಶಿವಾಜಿಯು ಹುಟ್ಟಿದಾಗ ಶಾಹಜಹಾನನು ಬದುಕಿದ್ದನೆ? ” ಎಂದು ಪ್ರಶ್ನಿಸಿದರೆ ಅವನು ಗಾಬರಿಗೊಳ್ಳಬಹುದು. ಜ್ಞಾನವನ್ನು ವಿಚಾರಾತ್ಮಕ ಸಂಬಂಧದಿಂದ ಸುಸಂಘಟಿತಮಾಡುವುದು ನಮಗೆ ಬೇಕಾದ ಶಿಕ್ಷಣ. “ ಸ್ಮೃತಿಯು ಉತ್ಕೃಷ್ಟವಾಗಿರಬೇಕಾದರೆ ಮನಸ್ಸು ಸುವ್ಯವಸ್ಥಿತವಾಗಿರಬೇಕು. ” ನಮಗೆ ಅಭಿರುಚಿಯುಳ್ಳ ವಿಷಯವನ್ನು ಅನೇಕ ರೀತಿಯಿಂದ ವಿಚಾರಿಸುತ್ತೇವೆ; ಅನೇಕ ಸಂಗತಿಗಳಿಗೆ ಸಂಬಂಧಿಸುತ್ತೇವೆ. ಹೀಗಾಗುವುದರಿಂದ ಆ ವಿಷಯವು ನಮ್ಮ ಮನಸ್ಸಿನಲ್ಲಿ ಸುವ್ಯವಸ್ಥಿತ ಅಥವಾ ಸುಸಂಬದ್ಧವಾಗುತ್ತದೆ. ಈ ರೀತಿಯಾಗಿ ವಿಷಯವನ್ನು ಧಾರಣಮಾಡುವುದು ಸುಲಭವಾಗಿರುತ್ತದೆ. ಒಳ್ಳೆಯ ಸ್ಮೃತಿಯ ರಹಸ್ಯವನ್ನು ಕುರಿತು ಜೇಮ್ಸನು ಹೇಳುವುದೇನೆಂದರೆ— “ ನೆನಪಿನಲ್ಲಿಡಬೇಕಾದುದನ್ನು ನಾವು ವಿವಿಧ ರೀತಿಯಾಗಿ ಸಂಬಂಧಿಸಬೇಕು .......**ತನ್ನ ಅನುಭವಗಳನ್ನು ಹೆಚ್ಚು ಹೆಚ್ಚು ವಿಚಾರಿಸುವವನು** ಅತ್ಯುತ್ತಮ ಸ್ಮೃತಿಯುಳ್ಳವನಾಗುತ್ತಾನೆ. ”

ಬಾಯಿಪಾಠ ಮಾಡುವ ಶಕ್ತಿಯು ಅಭ್ಯಾಸದಿಂದ ಬಲಗೊಳ್ಳುವುದೆಂಬುದನ್ನು ಮೇಲೆ ವಿವೇಚಿಸಿದ್ದೇವೆ. ಉತ್ತಮವಾದ ಪದ್ಧತಿಗಳಿಂದ ಇದು ಸಾಧ್ಯವಾಗುತ್ತದೆ. ಕಲಿಯಬೇಕೆಂಬ ಅಭಿಲಾಷೆ, ಅವಧಾನ ಪೂರಿತ ಪರಿಪಾಠ, ಸಂಪಾದಿಸಿದ ಅಭಿರುಚಿ ಇವು ಬಾಯಿಪಾಠಮಾಡುವುದಕ್ಕೆ ಸಹಾಯವಾಗುತ್ತವೆ. ಜ್ಞಾಪಕಶಕ್ತಿಯು ಕಲಿಯಬೇಕೆಂಬ ಉತ್ಕಟೇಚ್ಛೆಯನ್ನು ಅವಲಂಬಿಸಿರುತ್ತದೆ. ಕಾಲೇಜಿನ ಬಾಹುವೀರ, ವ್ಯಾಪಾರಿ ಮತ್ತು ರಾಜನೀತಿಜ್ಞನ ನೆನಪಿನ ಶಕ್ತಿಗಳು ಬಲಪಡಬೇಕಾದರೆ ಅವರವರ ವ್ಯವಸಾಯದಲ್ಲಿದ್ದ ಅವರವರ ಸಂಪಾದಿತ ಅಭಿರುಚಿಯ ಮೂಲಕವಾದ ಅನೈಚ್ಛಿಕ ಅವಧಾನವೇ ಮುಖ್ಯ ಕಾರಣವು. ಸ್ವಲ್ಪದರಲ್ಲಿ ಹೇಳಬೇಕೆಂದರೆ ಸ್ಮೃತಿಯನ್ನು ಅಭಿವೃದ್ಧಿಗೊಳಿಸುವ ರಹಸ್ಯವು ಕಲಿಯಬೇಕೆಂಬ ಇಚ್ಛೆಯಲ್ಲಿ ಮತ್ತು ನಮ್ಮ ಜ್ಞಾನವನ್ನು ಸುಸಂಘಟಿತ ಮಾಡುವಲ್ಲಿ ಇರುತ್ತದೆ. ಆದ್ದರಿಂದ ಶಿಕ್ಷಕನು ಬಾಲಕರು ಕಲಿಯಬೇಕಾದ ವಿಷಯಗಳಲ್ಲಿ

ಅವರ ಅಭಿಲಾಷೆಯನ್ನು ಚೇತರಿಸಬೇಕು; ಅಭ್ಯಾಸವನ್ನು ಒಳ್ಳೆಯ ವ್ಯವಸ್ಥಿತ ರೀತಿಯಿಂದ ಸಾಗಿಸಬೇಕು. ಗುರಿಯನ್ನು ಮುಟ್ಟುವ ಯೋಗ್ಯವಾದ ಮಾರ್ಗವು ಇದೇ.

ಸ್ಮೃತಿಯ ಬಗ್ಗೆ ಪ್ರಯೋಗದಿಂದ ಕಂಡುಬಂದ ಕೆಲವು ನಿರ್ಣಯಗಳು :—ವಿರಾಮಕಾಲದಲ್ಲಿ ವಿಷಯಿಯು ತಾನು ಕಲಿತ ಸಂಗತಿಗಳಿಗೆ ಗಮನಕೊಡದಿದ್ದರೂ ಸುಧಾರಣೆಯು ಅಥವಾ ಪ್ರಗತಿಯು ನಡೆದೇ ಇರುತ್ತದೆ. ಆದರೆ ನಡುನಡುವೆ ವಿಷಯವನ್ನು ವಿಚಾರಿಸುತ್ತಿದ್ದರೆ ಅದೇ ಸುಧಾರಣೆಯು ಹೆಚ್ಚು ಭರದಿಂದ ಸಾಗುತ್ತದೆ; ಸುಧಾರಣೆಯ ಪ್ರಮಾಣವು ಅಭಿರುಚಿಯನ್ನು ಅವಲಂಬಿಸಿರುತ್ತದೆ. ವ್ಯಕ್ತಿಯ ವಯಸ್ಸಿಗೆ ತಕ್ಕಂತೆ ಸುಧಾರಣೆಯು ಹೆಚ್ಚುಕಡಿಮೆಯಾಗುತ್ತದೆ. ಅಂದರೆ ಅದು ಬಾಲಕರಲ್ಲಿ ಅತ್ಯಧಿಕ ಪ್ರಮಾಣದಲ್ಲಿಯೂ ಪ್ರೌಢರಲ್ಲಿ ಕಡಮೆ ಪ್ರಮಾಣದಲ್ಲಿಯೂ ಇರುತ್ತದೆ. ಮರೆವು ಹೆಚ್ಚಿದ ಹಾಗೆಲ್ಲ ಸ್ಮೃತಿಯು ಕಡಮೆಯಾಗುತ್ತ ಹೋಗುತ್ತದೆ ಮತ್ತು ಕಲಿತ ವಿಷಯವು ಮೊದಲಿನ ಎರಡು ದಿವಸಗಳವರೆಗೆ ಅಷ್ಟೊಂದು ನೆನಪಿನಲ್ಲಿ ನಿಲ್ಲುವುದಿಲ್ಲ.

ಪೂರ್ವಕಾಲದಲ್ಲಿ ಬಾಯಿಪಾಠ ಮಾಡುವುದೇ ಕಲಿಯುವ ಮುಖ್ಯ ಪದ್ಧತಿಯಾಗಿತ್ತು. ಪಠ್ಯಪುಸ್ತಕಗಳ ಅಭಾವದ ಮೂಲಕ ಉಪಾಧ್ಯಾಯರು ಬಾಲಕರ ಜ್ಞಾಪಕಶಕ್ತಿಯನ್ನು ಬಲಪಡಿಸಬೇಕೆಂಬ ಅಭಿಪ್ರಾಯದವರೇ ಇದ್ದರು. ಬಾಲ್ಯದಲ್ಲಿ ಸ್ಮೃತಿಯು ಅತಿ ತೀಕ್ಷ್ಣವಾಗಿರುತ್ತದೆಂದು ಅವರ ಗ್ರಹಿಕೆ. ಇದು ನಿಜ. ಏಕೆಂದರೆ ಬಾಲಕನ ಬುದ್ಧಿಶಕ್ತಿಗಳು ಇನ್ನೂ ಬೆಳೆಯದೆ ಇರುವುದರಿಂದ ಅವನ ಸ್ಮೃತಿಯು ಬಲವಾಗಿ ತೋರುತ್ತದೆ; ಮತ್ತು ಬಾಲಕನಿಗೆ ತಿಳಿದುಕೊಂಡು ಕಲಿಯುವುದಕ್ಕಿಂತ ಬಾಯಿಪಾಠ ಮಾಡಿ ಕಲಿಯುವುದು ಸುಲಭವೆನಿಸುತ್ತದೆ. ಮೇಲಾಗಿ ಎಂಟು ಇಲ್ಲವೆ ಒಂಬತ್ತು ವರ್ಷ ಆಗುವ ವರೆಗೆ ಬಾಲಕರು ಯಾಂತ್ರಿಕ ಪುನರುಕ್ತಿ [illegible] ಹೆಚು. ಆಸಕ್ತಿಯುಳ್ಳವರು

ಆಗಿರುತ್ತಾರೆ. ಆದ್ದರಿಂದ ಓದು-ಬರೆಹ ಮತ್ತು ಗಣಿತದಲ್ಲಿಯ ಯಾಂತ್ರಿಕ ಅಂಶಗಳನ್ನು ಚಿಕ್ಕ ವಯಸ್ಸಿನಲ್ಲಿ ಬಾಯಿಪಾಠ ಮಾಡಿಸುವುದು ಲಾಭ ದಾಯಕವಾದುದು. ಆದರೆ ಅಭಿರುಚಿಯನ್ನುಂಟುಮಾಡುವ ಕ್ರೀಡಾಪದ್ಧತಿ ಯನ್ನೂ ಪುನರಾವೃತ್ತಿಯ ಪ್ರೇಮವನ್ನೂ ಉಪಯೋಗಿಸಬೇಕು. ನಿರ್ಜೀವ ವಾದ ಪುನರುಕ್ತಿಯಿಂದ ಪ್ರಯೋಜನವಿಲ್ಲ.

ಸಾರಾಂಶ— ಸ್ಮೃತಿಯನ್ನು ಬಲಪಡಿಸಬೇಕಾದರೆ ಅರ್ಥಾತ್ ಕಲಿತದ್ದು ಮಕ್ಕಳ ಮನಸ್ಸಿನಲ್ಲಿ ಹೆಚ್ಚುಕಾಲ ಉಳಿಯಬೇಕಾದರೆ ವಿಷಯ ದಲ್ಲಿ ಅಭಿರುಚಿಯನ್ನು ಹುಟ್ಟಿಸಬೇಕು; ವಿಷಯವನ್ನು ಅರ್ಥವುಳ್ಳದ್ದನ್ನಾಗಿ ಮಾಡಬೇಕು; ಮಕ್ಕಳ ಸಾಹಸವನ್ನು ಪ್ರೋತ್ಸಾಹಿಸಬೇಕು ಮತ್ತು ಕಲಿತ ವಿಷಯವನ್ನು ಪುನರಾವಲೋಕನ ಮಾಡುತ್ತಿರಬೇಕು. ಸಮಯೋಚಿತವಾಗಿ ವಿಷಯವನ್ನು ಪುನರಾವಲೋಕನ ಮಾಡುವುದರಿಂದ ಅದು ಮನದಲ್ಲಿ ದೃಢೀಕರಣ ಹೊಂದಿ ನೆನಪಿನಲ್ಲಿಡಲಿಕ್ಕೆ ಸುಲಭವಾಗುತ್ತದೆ. ಕ್ರೀಡಾಪದ್ಧತಿ ಯನ್ನು ಅನುಸರಿಸಿ ಕಲಿಸಿದರೆ ಇವೆಲ್ಲವೂ ಸಾಧ್ಯವಾಗುತ್ತವೆ.

೧೦

# ಪರಂಪರೆ ಮತ್ತು ಪರಿಸ್ಥಿತಿ

ಪ್ರವೃತ್ತಿಗಳು ಮತ್ತು ಸಾಮರ್ಥ್ಯಗಳು ಅನುವಂಶೀಯವಾಗಿರುತ್ತವೆಂದು ನಾಲ್ಕನೆಯ ಪ್ರಕರಣದಲ್ಲಿ ನಾವು ಹೇಳಿದ್ದೇವೆ ಸ್ವಭಾವವನ್ನೇ ಪರೀಕ್ಷಿಸಲಿ, ಬುದ್ಧಿಯನ್ನೇ ಪರೀಕ್ಷಿಸಲಿ ಮನುಷ್ಯರಲ್ಲಿ ತಾರತಮ್ಯವು ಕಂಡು ಬರುತ್ತದೆ. ಶಾಲೆಯ ಹುಡುಗರಲ್ಲಿ ಕೆಲವರು ಜಾಣರು, ಕೆಲವರು ದಡ್ಡರು, ಕೆಲವರು ಸದ್ಗುಣಿಗಳು, ಕೆಲವರು ದುರ್ಗುಣಿಗಳು, ಕೆಲವರು ಸುಸ್ವರದವರು, ಕೆಲವರು ಕರ್ಕಶ ಸ್ವರದವರು, ಕೆಲವರು ಭಾಷಾಶಾಸ್ತ್ರದಲ್ಲಿ ನಿಪುಣರು, ಕೆಲವರು ಗಣಿತಶಾಸ್ತ್ರದಲ್ಲಿ ನಿಪುಣರು ಇರುತ್ತಾರೆ. ಇದಕ್ಕೆ ಕಾರಣವೇನು? ಪರಂಪರೆಯೇ ಇದಕ್ಕೆ ಕಾರಣವೆಂದು ಕೆಲವರು, ಪರಿಸ್ಥಿತಿಯೇ ಇದಕ್ಕೆ ಕಾರಣವೆಂದು ಕೆಲವರು ವಾದಿಸುವರು. ''ತಂದೆಯಂತೆ ಮಗ," ''ಇವನು ತಾಯಿಯನ್ನು ಹೋಲುತ್ತಾನೆ" ಎಂದು ಸಾಮಾನ್ಯವಾಗಿ ಜನರು ಎನ್ನುವುದನ್ನು ನಾವು ಕೇಳುತ್ತೇವೆ. ಎಂದರೆ ಶಾರೀರಿಕ ಗುಣಗಳನ್ನೂ ಮಾನಸಿಕ ಗುಣಗಳನ್ನೂ ಮಕ್ಕಳು ತಮ್ಮ ತಂದೆತಾಯ್ಗಳಿಂದ್ಲ ಪಡೆಯುತ್ತಾರೆಂಬುದು ಜನರ ನಂಬಿಗೆ. ಆದರೆ ಇಂಥ ಭೇದಗಳಿಗೆ ಪರಂಪರೆಯೊಂದೇ ಆಗಲಿ ಅಥವಾ ಪರಿಸ್ಥಿತಿ ಅರ್ಥಾತ್ ಶಿಕ್ಷಣವೊಂದೇ ಆಗಲಿ ಕಾರಣವಾಗಿರುವುದಿಲ್ಲ. ಆದುದರಿಂದ ಪರಂಪರೆಯ ಪ್ರಭಾವವು ಎಷ್ಟರ ಮಟ್ಟಿಗೆ ಮತ್ತು ಪರಿಸ್ಥಿತಿಯ ವರ್ಚಸ್ಸು ಎಷ್ಟರ ಮಟ್ಟಿಗೆ ಕಾರಣವಾಗಿರುತ್ತದೆಂಬುದನ್ನು ನಾವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಪರಂಪರೆ ಮತ್ತು ಪರಿಸ್ಥಿತಿ ಇವು ಒಂದಕ್ಕೊಂದು ವಿರೋಧವಾಗಿರದೆ ಅನ್ಯೋನ್ಯ ಸಂಬಂಧವುಳ್ಳವಾಗಿರುತ್ತವೆ.

## ಪರಂಪರೆ

**ಅನುವಂಶೀಯತೆ:—**ಜನರು ತಮ್ಮ ಪೂರ್ವಜರ ಗುಣವಿಶೇಷವನ್ನು ಹುಟ್ಟುವಾಗಲೇ ಪಡೆಯುವರು ಎಂಬುದು ಫ್ರಾನ್ಸಿಸ್ ಗಾಲ್ಟನ್‌ನ

ಸಿದ್ಧಾಂತ. ಅವನು ಕೆಲವು ವಂಶಾವಳಿಗಳನ್ನು ಪರೀಕ್ಷಿಸಿ ಪ್ರಸಿದ್ಧ ಮನೆತನಗಳಲ್ಲಿ ಶ್ರೇಷ್ಠಮನುಷ್ಯರೇ ಹುಟ್ಟುತ್ತ ಬಂದಿರುವರೆಂದು ಹೇಳುತ್ತಾನೆ. ಪ್ರೊ|| ಪಿಯರ್ಸನ್ ಮೊದಲಾದವರು ಶಾಲೆಯ ಹುಡುಗರನ್ನು ಪರೀಕ್ಷಿಸಿ ಮನುಷ್ಯರಲ್ಲಿರುವ ವ್ಯತ್ಯಾಸಕ್ಕೆ ಆನುವಂಶೀಯತೆಯು ಕಾರಣವೆಂಬ ಅಭಿಪ್ರಾಯಕ್ಕೆ ಬಂದಿರುವರು. ಆದರೆ ಹರ್ಬಾರ್ಟ್ ಮತ್ತು ಅವನ ಅನುಯಾಯಿಗಳು ಆನುವಂಶೀಯತೆಯನ್ನು ನಂಬುವುದಿಲ್ಲ ಒಂದೇ ಮನೆತನದ ಮಕ್ಕಳಲ್ಲಿಯ ಹೋಲಿಕೆಯು ಆ ಮನೆತನದ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆಂದು ಅವರು ಪ್ರತಿಪಾದಿಸುತ್ತಾರೆ. ವೈಯಕ್ತಿಕ ಭೇದಗಳು ನಿಶ್ಚಯವಾಗಿಯೂ ಆನುವಂಶಿಕವೆಂದು ತಿಳಿಯುವುದು ತಪ್ಪು. ಮಹಾತ್ಮರ ಹೊಟ್ಟೆಯಲ್ಲಿ ಯಾವಾಗಲೂ ಮಹಾತ್ಮರೇ ಹುಟ್ಟುವುದಿಲ್ಲ. ಬುದ್ಧ, ಬಸವ, ಕಾಲಿದಾಸ, ನ್ಯೂಟನ್, ಬೋಸ್, ನೆಪೋಲಿಯನ್, ಶಿವಾಜಿ ಮುಂತಾದ ಮಹಾಪುರುಷರು ಅವರಷ್ಟೇ ಪ್ರಖ್ಯಾತರಾದ ತಂದೆತಾಯ್ಗಳಿಂದ ಉದ್ಭವಿಸಿಲ್ಲ. ಅಲ್ಲದೆ ಹಿಂದುಳಿದವರ ಉದರದಿಂದಲೇ ಮಂದಮತಿಗಳೂ ಅನೀತಿವಂತರೂ ಜನಿಸುವರೆಂದು ತಿಳಿಯುವುದು ಜೀವಶಾಸ್ತ್ರಜ್ಞರ ಮತದ ವಿರುದ್ಧವಾಗಿರುತ್ತದೆ. ಮೇಧಾವಿಗಳನ್ನು ತಯಾರಿಸುವುದು ಪರಿಸ್ಥಿತಿಯೇ ಎಂದು ಡಿ. ಕ್ಯಾಂಡೋಲ್ಸ್ ಎಂಬವನು ಗಾಲ್ಟನ್ ನಿಗೆ ಉತ್ತರರೂಪವಾಗಿ ಒಂದು ಪುಸ್ತಕವನ್ನು ಬರೆದಿರುವನು. ಅವನಾದರೂ ಅನೇಕ ವೈಜ್ಞಾನಿಕರ ಚರಿತ್ರೆಯನ್ನು ಪರಿಶೀಲಿಸಿ ಅವರು ಹಾಗೆ ಆಗಲಿಕ್ಕೆ ಅವರ ಅನುಕೂಲ ಪರಿಸ್ಥಿತಿಯೇ ಕಾರಣವೆಂದು ಹೇಳುತ್ತಾನೆ. ಮನುಷ್ಯರ ಯೋಗ್ಯತೆಯಲ್ಲಿ ವ್ಯತ್ಯಾಸವುಂಟು. ಆದರೆ ಪರಿಸ್ಥಿತಿಯ ಪರಿಣಾಮವಾಗಿ ಉಂಟಾದ ಭಿನ್ನತೆಯು ಹೆಚ್ಚು ಮಹತ್ವವುಳ್ಳದ್ದು. ಉಪಾಧ್ಯಾಯನು ಆನುವಂಶೀಯತೆಯನ್ನು ನಂಬುವ ಮೊದಲು ಸಾರಾಸಾರ ವಿಚಾರ ಮಾಡಬೇಕು. ಶಿಕ್ಷಕನು ಪ್ರಯಾಸಪಟ್ಟು ಕಲಿಸಿದರೂ ಕೆಲವು ವಿದ್ಯಾರ್ಥಿಗಳು ಪ್ರಗತಿಯನ್ನು ತೋರಿಸದಿದ್ದರೆ ಆ ನ್ಯೂನತೆಗೆ ಆನುವಂಶೀಯತೆಯು ಕಾರಣವೆಂದು ತಿಳಿಯಬಹುದು. ಗಾಯನ ವಿದ್ಯೆಯನ್ನು ಎಷ್ಟೇ ಹೇಳಿಸಿಕೊಂಡರೂ ಒಬ್ಬೊಬ್ಬರಿಗೆ ಅದು ಹತ್ತುವುದಿಲ್ಲ. ಆದರೆ ವ್ಯಕ್ತಿಗಳಲ್ಲಿ ಕಂಡುಬರುವ ಎಲ್ಲ ವ್ಯತ್ಯಾಸಗಳಿಗೆ ವಂಶಪರಂಪರೆಯೊಂದೇ ಕಾರಣವೆಂದು ತಿಳಿಯಕೂಡದು.

ವಂಶಪರಂಪರೆಯನ್ನು ಸಿದ್ಧಮಾಡಿ ತೋರಿಸುವುದು ಅಸಾಧ್ಯ. ಆದರೂ ಕೆಲವು ಪ್ರಮಾಣಗಳ ಮೂಲಕ ಅದನ್ನು ನಂಬಬೇಕಾಗಿದೆ. ಮನುಷ್ಯನು ಗೋರಿಲ್ಲಕ್ಕಿಂತ ಶ್ರೇಷ್ಠನೆನಿಸುವುದು ಅವನ ನೈಸರ್ಗಿಕ ಗುಣದಿಂದ; ಶಿಕ್ಷಣ ಅಥವಾ ಪರಿಸ್ಥಿತಿಯಿಂದಲ್ಲ. ಕೆಲವು ಬಾಲಕರು ಚಿಕ್ಕವರಿರುವಾಗಲೇ ಅಗಾಧ ಶಕ್ತಿಗಳನ್ನು ತೋರಿಸುತ್ತಾರೆ. ಅವರು ಸಾಮಾನ್ಯ ಮಗುವಿಗಿಂತ ಭಾಷೆ, ಗಾಯನ, ಅಥವಾ ಗಣಿತದಲ್ಲಿ ಪ್ರಾವಿಣ್ಯವನ್ನು ಕಡಮೆ ವೇಳೆಯಲ್ಲಿ ಮತ್ತು ಕಡಮೆ ಪ್ರಯತ್ನದಿಂದ ಹೊಂದುತ್ತಾರ. ಬೀನೆ-ಸ್ಟ್ಯಾನಫೋರ್ಡ "ಬುದ್ಧಿಪರೀಕ್ಷಣ"ಗಳಿಂದಲೂ ಇದೇ ಮಾತು ಸಿದ್ಧವಾಗುತ್ತದೆ. ತಾತ್ಪರ್ಯ ವೇನಂದರೆ, ಬೌದ್ಧಿಕ ಮತ್ತು ನೈತಿಕ ಗುಣಗಳು ಮನೆ ಮತ್ತು ಸಾಲೆಯ ಪರಿಸ್ಥಿತಿಯಿಂದ ಪೋಷಿಸಲ್ಪಟ್ಟರೂ ಅವು ತಂದೆ ತಾಯ್ಗಳ ಮೂಲ ಸ್ವಭಾವ ದಿಂದಲೇ ಉದ್ಭವಿಸುತ್ತವೆ. ಮಗನು ಜಾಣನಾಗಬೇಕಾದರೆ ಮೊದಲು ತಂದೆಯು ಜಾಣನಾಗಿರಬೇಕು. ಪರಂಪರೆಯು ಬೀಜವಿದ್ದಂತೆ; ಪರಿಸ್ಥಿತಿಯು ಆ ಬೀಜವನ್ನು ಬೆಳೆಯಿಸುವ ಭೂಮಿಯಿದ್ದಂತೆ. ಯೋಗ್ಯ ಪರಿಸ್ಥಿತಿಯ ಪ್ರೇರಣೆ ಇಲ್ಲದಿದ್ದರೆ ಪಡೆದ ಗುಣವಿಶೇಷಗಳು ಪ್ರಕಾಶಕ್ಕೆ ಬಾರದೆ ಹಾಗೆಯೇ ಉಳಿಯುವುವು. ಪ್ರತಿಕೂಲ ಪರಿಸ್ಥಿತಿ ಅಥವಾ ಅಸಮಾಧಾನಕರವಾದ ಶಿಕ್ಷಣದ ಮೂಲಕ ಸಾಲೆಯ ಹುಡುಗರ ಎಷ್ಟೋ ಜನ್ಮಸಿದ್ಧ ಶಕ್ತಿಗಳು ಸುಪ್ತಾವಸ್ಥೆಯಲ್ಲಿಯೆ ಉಳಿಯುತ್ತವೆ.

ಪರಂಪರೆಯನ್ನು ಸಿದ್ಧಮಾಡಲು ಹವಣಿಸುವವರು ಅವಳಿಜವಳಿ ಮಕ್ಕಳ ದೃಷ್ಟಾಂತವನ್ನು ಕೊಡುತ್ತಾರೆ. ಅವಳಿಜವಳಿ ಮಕ್ಕಳು ಬೇರೆ ಬೇರೆ ಪರಿಸ್ಥಿತಿಗಳಲ್ಲಿ ಬೆಳೆದರೂ ಅವರಲ್ಲಿ ಕಂಡು ಬರುವ ವಿಶೇಷ ಗುಣಗಳಲ್ಲಿ ಅತ್ಯಂತ ಹೋಲಿಕೆಯಿರುತ್ತದೆ. ಒಂದೇ ವಂಶದಲ್ಲಿ ಹುಟ್ಟಿದವರು ಸ್ವಭಾವ ದಲ್ಲಿಯೂ ಬುದ್ಧಿಯಲ್ಲಿಯೂ ಒಂದೇ ತೆರನಾಗಿ ಇರುತ್ತಾರೆಂದು ಇದರ ಮೇಲಿಂದಲೂ ನಿರ್ಧರಿಸುತ್ತಾರೆ. ಸಾಲೆಯ ಶಿಕ್ಷಣದಿಂದ ಅವರನ್ನು ತಿದ್ದು ವುದು ಅಸಾಧ್ಯವೆಂದು ಅವರ ಮತ. "ಕಲಿಯೆ ನಾನಾ ಹೃದ್ಯ ವಿದ್ಯಂಗಳಂ ಪಡೆದವಷ್ಟಲ್ಲದೆ ಬರ್ಪುದೇ!" ಎಂದು ಅವರು ಹೇಳುವರು. ಆದರೆ ಇಷ್ಟರ ಮೇಲಿಂದ ಪರಿಸ್ಥಿತಿಯ ಪರಿಣಾಮವು ಮಹತ್ವದ್ದಲ್ಲವೆಂದು ಊಹಿಸಬಾರದು.

**ಸಂಪಾದಿಸಿದ ಗುಣಗಳ ಆನುವಂಶೀಯತೆ.—** ಸಂಪಾದಿಸಿದ ಗುಣಗಳನ್ನು ತಮ್ಮ ಪೂರ್ವಜರಿಂದ ಪ್ರಾಣಿಗಳು ಪಡೆಯುತ್ತವೆಂದು ಲ್ಯಾಮಾರ್ಕ್‌ನ ಸಿದ್ಧಾಂತ. ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳುವ ಪ್ರಾಣಿಗಳ ಅಂಗಗಳು ರೂಪಾಂತರ ಹೊಂದುತ್ತವೆಂದೂ ಆ ರೂಪಾಂತರಗಳು ಆನುವಂಶೀಯವಾಗುತ್ತವೆಂದೂ ಅವನು ನಂಬುತ್ತಾನೆ. ಇಪ್ಪತ್ತನೆಯ ಶತಮಾನದ ಪ್ರಸಿದ್ಧ ಪ್ರಾಣಿಶಾಸ್ತ್ರಜ್ಞರಾದ ಸೀಮನ್, ರಿಗ್ನಾನೊ ಮತ್ತು ಬ್ಲುಲರ್ ಇವರು ಲ್ಯಾಮಾರ್ಕ್‌ನ ತತ್ವವನ್ನೇ ಸಮರ್ಥಿಸುತ್ತಾರೆ. ವೀಜಮನ್ನ್‌ನಿಗೆ ಪಿಂಡೋತ್ಪತ್ತಿಯ ತಪ್ಪು ಕಲ್ಪನೆ ಇದ್ದುದರಿಂದ ಅದನ್ನು ಅವನು ಅಲ್ಲಗಳೆದನು. ಮ್ಯಾಕ್‌ಡೂಗಲ್ಲ್‌ನು ಇಲಿಗಳ ಪ್ರಯೋಗ ಪರೀಕ್ಷೆಗಳಿಂದ ಲ್ಯಮಾರ್ಕ್‌ನ ಸಿದ್ಧಾಂತವನ್ನೇ ಸ್ಥಿರಗೊಳಿಸುತ್ತಾನೆ. ಅವನು ನಿರ್ಣಯಿಸುವುದೇನಂದರೆ— ಉತ್ತರೋತ್ತರ ಸಂತತಿಗಳು ತಮ್ಮ ಪೂರ್ವಜರ ಕಾರ್ಯವನ್ನು ಹೆಚ್ಚು ಸುಲಭವಾಗಿ ಕಲಿಯುತ್ತವೆ. ಎಂದರೆ ಕಡಮೆ ಶಿಕ್ಷಣದಿಂದಲೇ ಕಾರ್ಯ ಸಿದ್ಧಿಯಾಗುತ್ತದೆ. ಆದರೆ ಚಾರ್ಲ್ಸ್ ಫಾಕ್ಸನು ಹೇಳುವಂತೆ ಇಲ್ಲಿ ಪರಿಸ್ಥಿತಿಯ ಪ್ರಭಾವವು ಮುಖ್ಯವಾದುದು. ಏಕೆಂದರೆ ಪೂರ್ವಜರಿಂದ ಆರಂಭಿಸಲ್ಪಟ್ಟ ಹೊಸ ಮಾರ್ಪಾಟುಗಳಿಗೆ ಯೋಗ್ಯ ಸಂದರ್ಭಗಳು ದೊರೆಯದಿದ್ದರೆ ಅವು ಅಳಿದುಹೋಗುವುವು. ಕರೇಪಟ್ಟೆಗಳುಳ್ಳ ಓತೀಕಾಟವು ಪರಿಸ್ಥಿತಿಯ ಪರಿಣಾಮವಾಗಿ ಹಳದಿಪಟ್ಟೆಗಳನ್ನು ಹೊಂದಬಹುದು. ಆದರೆ ಮುಂದಿನ ಸಂತತಿಗಳು ಹಳದೀಪಟ್ಟೆಗಳ ಓತೀಕಾಟಗಳೇ ಆಗಬೇಕಾದರೆ ಪರಿಸ್ಥಿತಿಯು ನಿರಂತರವಾಗಿ ಅನುಕೂಲವಾಗಿರಬೇಕು.

ಹೊಸ ಲಕ್ಷಣಗಳು ಹೊಸ ಪರಿಸ್ಥಿತಿಯಿಂದ ಉಂಟಾಗುತ್ತವೆ. ಆಸ್ಟ್ರೇಲಿಯಾ ಮತ್ತು ಅಮೇರಿಕೆಯ ಜನರು ಯುರೋಪದಿಂದ ಬಂದವರಾದರೂ ಯುರೋಪದವರ ವಿಶೇಷ ಗುಣಗಳನ್ನು ಕಳೆದುಕೊಂಡಿದ್ದಾರೆ. ವಿದ್ಯಾಭ್ಯಾಸಕ್ಕೆಂದು ತಂದೆತಾಯ್ಗಳನ್ನು ಬಿಟ್ಟು ನಗರಕ್ಕೆ ಬಂದ ಸಾಲೆಯ ಹುಡುಗರು ಸ್ವಭಾವದಲ್ಲಿಯೂ ಭಾಷಾಪ್ರಯೋಗದಲ್ಲಿಯೂ ಹಳ್ಳಿಯ ಅಸಂಸ್ಕೃತ ಹುಡುಗರಿಗಿಂತ ಬೇರೆಯಾಗಿ ಕಾಣುತ್ತಾರೆ. ಮುಂದೆ ಇವರ ಸಂತತಿಗಳು ಹಳ್ಳಿಯ ಇವರ ಬಾಂಧವರಿಗಿಂತ ಭಿನ್ನವಾಗಿ ಪರಿಣಮಿಸುತ್ತವೆ. ಸಂಪಾದಿಸಿದ ರೂಪಾಂತರಗಳು ಅಥವಾ ಗುಣಗಳು ಆನುವಂಶೀಯ

ವಾಗಬೇಕಾದರೆ ಸಾಮಾಜಿಕ ಪರಂಪರೆಯು ಆವಶ್ಯಕವಾಗಿದೆ. ಕಾಲಾನು ಕ್ರಮದಲ್ಲಿ ಪರಿಸ್ಥಿತಿಯೇ ಆನುವಂಶೀಯವಾಗಿ ಪರಿಣಮಿಸುತ್ತದೆಂಬುದು ಮ್ಯಾಕ್‌ಡೂಗಲ್ಲ್ ಮೊದಲಾದವರು ಮಾಡಿದ ಪ್ರಾಣಿಗಳ ಮೇಲಿನ ಪ್ರಯೋಗಗಳಿಂದ ಸಿದ್ಧವಾಗುತ್ತದೆ.

ಪೂರ್ವಜರ ಗುಣಗಳನ್ನು ನಾವು ಹುಟ್ಟುವಾಗಲೇ ಪಡೆಯುತ್ತೇವೆ ಎಂಬ ತತ್ವವನ್ನು ನಾವು ಅಂಗೀಕರಿಸಿದರೆ ಶಿಕ್ಷಣದ ಹೊಣೆಯು ಹೆಚ್ಚಾಗುತ್ತದೆ. ರಾಷ್ಟ್ರವು ಉತ್ತರೋತ್ತರ ಅಭಿವೃದ್ಧಿ ಹೊಂದಬೇಕಾದರೆ ಮೊದಲು ಶಿಕ್ಷಣದ ತಳಹದಿಯು ನಿರ್ದೋಷವಾಗಿರಬೇಕು. ಯಾಕೆಂದರೆ ಶಿಕ್ಷಣದ ಪರಿಣಾಮವು ಆನುವಂಶೀಯವಾಗುವುದು. ಬೇರೆ ಕೆಲವರು ನಂಬುವಂತೆ ಪೂರ್ವಜರು ಸಂಪಾದಿಸಿದ ಗುಣಗಳನ್ನು ಪಡೆಯಲು ಅಶಕ್ಯವೆಂದೆನಿಸಿದರೂ ಉಪಾಧ್ಯಾಯರು ನಿರಾಶರಾಗಕೂಡದು. ಯಾಕೆಂದರೆ ಪೂರ್ವಿಕರ ಕೆಟ್ಟ ಗುಣಗಳು ನಮ್ಮಲ್ಲಿ ಬಂದಿಲ್ಲವೆಂಬುದೇ ಸಮಾಧಾನದ ಸಂಗತಿಯು. ಅಲ್ಲದೆ ಶಿಕ್ಷಕನು ಪ್ರತಿಯೊಂದು ಸಂತತಿಯನ್ನು ಸುಧಾರಿಸಲು ಉತ್ಸಾಹದಿಂದ ದುಡಿಯಬೇಕಾಗುತ್ತದೆ.

**ನೈತಿಕಗುಣಗಳ ಪರಂಪರೆ.**— ಬೌದ್ಧಿಕ ಪರಂಪರೆಯಂತೆ ನೈತಿಕ ಪರಂಪರೆಯು ಇರುವುದೊ ಹೇಗೆ ? ಎಂಬ ಸಮಸ್ಯೆಯನ್ನು ಡಾ॥ ಸಿರಿಲ್ ಬರ್ಟ್‌ನು ಚೆನ್ನಾಗಿ ಪರಿಶೀಲಿಸಿ ನೋಡಿದ್ದಾನೆ. ಒಂದೇ ಪರಿಸ್ಥಿತಿಯಲ್ಲಿ ಬೆಳೆದ ಕೆಲವು ಅಪರಾಧಿ ಬಾಲಕರನ್ನೂ ಕೆಲವು ನಿರಪರಾಧಿ ಬಾಲಕರನ್ನೂ ಅವನು ಪರೀಕ್ಷಿಸಿದ್ದಾನೆ. ಆನುವಂಶೀಯವೆಂದು ತಿಳಿಯಲ್ಪಡುವ ಅಪರಾಧದ ಕಾರಣಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು— (೧) ಶಾರೀರಿಕ ರೋಗಗಳು, (೨) ಬುದ್ಧಿಮಾಂದ್ಯ (೩) ಮನಸ್ಸಿನ ಜಾಡ್ಯ ಅಥವಾ ಹುಚ್ಚು (೪) ಆತ್ಮಹತ್ಯೆ, ಕುಡುಕತನ, ಕ್ರೂರತನ ಮುಂತಾದ ದುರ್ನಡತೆಗಳು. ಆದರೆ ದುಷ್ಕಾರ್ಯ ವೃತ್ತಿಯು ರಕ್ತಸಂಬಂಧಕ್ಕಿಂತ ಹೆಚ್ಚಾಗಿ ಸಹವಾಸಜನ್ಯವೆಂದು ಬರ್ಟ್‌ನು ಎಣಿಸುತ್ತಾನೆ. ದುಷ್ಟರ ಗೆಳೆತನ, ಕೆಟ್ಟ ನೆರೆಹೊರೆ, ದುರಭ್ಯಾಸ ಮತ್ತು ಮನೆಯಲ್ಲಿಯ ಕೆಟ್ಟ ದೃಷ್ಟಾಂತಗಳು ಇವುಗಳಿಂದ ಉಂಟಾದ ಪರಿಸ್ಥಿತಿಯ

ವರ್ಚಸ್ಸು ವರ್ತನದ ಮೇಲೆ ಬಹು ವಿಧವಾಗಿ ಆಗುವುದೆಂದು ಅವನ ಮತ. 'ಜತೆಯಂತೆ ಮತಿ' ಎಂಬುದನ್ನು ನಾವೂ ಒಪ್ಪುತ್ತೇವೆ. ಶಾಲೆಯ ಹುಡುಗರಲ್ಲಿ ಕಾಣಿಸುವ ಕರ್ತವ್ಯಪರಾಙ್ಮುಖತೆಗೆ ಮುಖ್ಯವಾಗಿ ಅವರ ಪರಿಸ್ಥಿತಿಯೆ ಕಾರಣವು. ಬಡತನ, ದೋಷಯುಕ್ತ ಶರೀರಸಂಬಂಧ, ದುರ್ವ್ಯಸನ ಮತ್ತು ದುಶ್ಚಟಗಳು ಮಕ್ಕಳ ಮೇಲೆ ದುಷ್ಪರಿಣಾಮವನ್ನುಂಟುಮಾಡುತ್ತವೆ. ಇವಲ್ಲದೆ ಹೊರಗಿನ ಸಹವಾಸ, ಸಿನೇಮಾ, ನಾಟಕ ಮೊದಲಾದುವುಗಳೂ ಮಕ್ಕಳ ಸ್ವಭಾವದ ಮೇಲೆ ಪರಿಣಾಮವನ್ನುಂಟುಮಾಡುತ್ತವೆ. ಪರಿಸ್ಥಿತಿಯನ್ನು ಸುಧಾರಿಸುವುದರಿಂದ ವರ್ತನವೂ ಸುಧಾರಿಸುತ್ತದೆ. ಬರ್ಟ್‌ನ ಮತದ ಪ್ರಕಾರ ಮಕ್ಕಳ ಅಪರಾಧಕ್ಕೆ ದೋಷಯುಕ್ತ ಶಿಸ್ತೇ (Discipline) ಕಾರಣವು.

ಮನೆಯ ಮತ್ತು ನೆರೆಹೊರೆಯ ಅನೈತಿಕ ವಾತಾವರಣವೇ ದುಷ್ಕರ್ಮಗಳ ಮುಖ್ಯ ಕಾರಣವು ಆದರೆ ಪ್ರೊ॥ ನನ್ಸ್‌ನು ಹೇಳುವಂತೆ ಮನುಷ್ಯನು ಸ್ವತಂತ್ರ ಪ್ರಾಣಿಯು. ಅವನು ಕೇವಲ ಪರಿಸ್ಥಿತಿಯ ಗುಲಾಮನಲ್ಲ; ಆನುವಂಶೀಯತೆಯ ಆಹುತಿಯೂ ಅಲ್ಲ. ಅವನು ಪರಿಸ್ಥಿತಿಯನ್ನು ನಿಯಂತ್ರಿಸಬಲ್ಲನು, ಪರಂಪರೆಯನ್ನು ಪಲ್ಲಟಿಸಬಲ್ಲನು. ಸಾಮಾನ್ಯ ಪರಿಸ್ಥಿತಿಯಲ್ಲಿ ಹುಟ್ಟಿದ ಎಷ್ಟೋ ಜನರು ಮಹಾತ್ಮರಾಗಿ ಹೋಗಿದ್ದಾರೆ; ಶ್ರೇಷ್ಠ ಮನೆತನದಲ್ಲಿ ಹುಟ್ಟಿದ ಎಷ್ಟೋ ಜನರು ತಮ್ಮ ಆಯುಷ್ಯವನ್ನು ಹಾಳುಮಾಡಿಕೊಂಡ ಉದಾಹರಣೆಗಳೂ ಉಂಟು. ಇದರಿಂದ ಕಂಡುಬರುವದೇನೆಂದರೆ ಮಾನವನು ಪರಿಸ್ಥಿತಿಯನ್ನೂ ಪರಂಪರೆಯನ್ನೂ ತನ್ನ ಸಾಧನೆಗಾಗಿ ಉಪಯೋಗಿಸಬಲ್ಲನು. ಪರಿಸ್ಥಿತಿಯ ಪ್ರಭಾವವು ವ್ಯಕ್ತಿಯ ಮೇಲೂ ವ್ಯಕ್ತಿಯ ಪ್ರಭಾವವು ಪರಿಸ್ಥಿತಿಯ ಮೇಲೂ ಬೀಳುತ್ತದೆ. "ಕೆಟ್ಟ ಆವರಣಗಳು ಅಪರಾಧಿಗಳನ್ನು ತಯಾರಿಸುವದಿಲ್ಲ. ಆದರೆ ನಿರ್ಬಲಮನಸ್ಸಿನವರು ಅದಕ್ಕೆ ಎಡೆಯಾಗುವರು." ನೈತಿಕ ವಿಷಯದಲ್ಲಿಯೆ ಆಗಲಿ, ಬೌದ್ಧಿಕ ವಿಷಯದಲ್ಲಿಯೆ ಆಗಲಿ, ಪರಂಪರೆ ಮತ್ತು ಪರಸ್ಥಿತಿ ಇವು ಒಂದಕ್ಕೊಂದು ವಿರೋಧವಾದ ತತ್ವಗಳಲ್ಲ, ಆದರೆ ಯಾವುದರ ವರ್ಚಸ್ಸು ಎಷ್ಟರಮಟ್ಟಿಗೆ ಎಂಬುದನ್ನು ಮಾತ್ರ ನಾವು ಅರಿತುಕೊಳ್ಳಬೇಕು. ಬಾಲಕರ ಅಪರಾಧಗಳು ಕೆಲಮಟ್ಟಿಗೆ ಆನುವಂಶೀಯವಾಗಿರುತ್ತವೆಂಬುದೇನೊ ನಿಜ. ಆದರೆ ಪರಂಪರೆಗಿಂತ

**ಪರಿಸ್ಥಿತಿಯ ಪರಿಣಾಮವು ಹೆಚ್ಚು ಬಲವಾದದ್ದು.** ಮನೆಯು ಮತ್ತು ಸಾಲೆಯು ಸಾಮಾಜಿಕ ಸದ್ಗುಣಗಳನ್ನು ಪೋಷಿಸುವ ರಂಗಭೂಮಿಯೆಂದು ಹೇಳಬಹುದು. ಮಠಗಳಲ್ಲಿಯು, ಚರ್ಚುಗಳಲ್ಲಿಯ ಮತ್ತು ಮಸೀದೆಗಳಲ್ಲಿಯ ಧಾರ್ಮಿಕ ವಾತಾವರಣದಿಂದಲೂ ಮನುಷ್ಯನ ಸ್ವಭಾವವು ಬದಲಾಯಿಸುತ್ತದೆ. ಮನೆ ಮತ್ತು ಸಾಲೆಯಲ್ಲಿ ವಿಹಿತವಾದ ಶಿಸ್ತನ್ನು ಕಾಯ್ದರೆ ರಾಷ್ಟ್ರದ ನೈತಿಕ ಉನ್ನತಿಯು ಸಹಜವಾಗಿಯೇ ಆಗುವುದು.

ಹಿಂದೂ ತತ್ವಜ್ಞಾನಿಗಳು ಪರಂಪರೆಯ ಸಮಸ್ಯೆಯನ್ನು ಬೇರೆ ದೃಷ್ಟಿಯಿಂದ ವಿವೇಚಿಸುತ್ತಾರೆ. ಅವರು ಪ್ರತಿಪಾದಿಸುವ ಕರ್ಮವಾದವು ವಂಶಕ್ಕೆ ಸಂಬಂಧಿಸಿರದೆ ವ್ಯಕ್ತಿಗೆ ಸಂಬಂಧಿಸಿದ್ದಾಗಿದೆ. ಒಬ್ಬನಲ್ಲಿ ಕಾಣುವ ವಿಶೇಷ ಗುಣಗಳು ಅವನ ಪೂರ್ವಜನ್ಮದ ( ಪೂರ್ವ ದೇಹವಲ್ಲ ) ಸಂಸ್ಕಾರದ ಫಲವೆಂತಲೂ ಪುನರ್ಜನ್ಮದ ಕಾರಣವೆಂತಲೂ ಅವರು ಪ್ರತಿಪಾದಿಸುತ್ತಾರೆ. ಪ್ರತಿಯೊಬ್ಬ ಮನುಷ್ಯನು ತನ್ನ ಕರ್ಮಗಳಿಗೆ ತಾನೇ ಹೊಣೆಯಾಗಿರುತ್ತಾನೆ. ಗಾಲ್ಟನ್ ಮೊದಲಾದವರು ತಿಳಿಯುವಂತೆ ವ್ಯಕ್ತಿಯ ಗುಣಗಳಿಗೆ ಅವನ ಪೂರ್ವದ ವಂಶಜರು ಕಾರಣರಲ್ಲ; ಹೊಣೆಗಾರರೂ ಅಲ್ಲ. ಕರ್ಮವಾದ ಮತ್ತು ಅದಕ್ಕೆ ಸಂಬಂಧಿಸಿದ ಪೂರ್ವಜನ್ಮ ಮತ್ತು ಪುನರ್ಜನ್ಮದ ಪ್ರಶ್ನೆಗಳ ವಿವೇಚನೆಯು ತತ್ವಶಾಸ್ತ್ರದ ವಿಷಯವಾದ್ದರಿಂದ ಅದನ್ನು ಇಲ್ಲಿ ಬೆಳೆಯಿಸಿ ಹೇಳುವುದು ಅವಶ್ಯವೆಂದು ತೋರುವುದಿಲ್ಲ. ಆದರೆ ಕರ್ಮವಾದದ ದೃಷ್ಟಿಯಿಂದ ವಿಚಾರಿಸಿ ನೋಡಿದರೆ ಮನುಷ್ಯನು ಸುಶೀಲನಾಗುವುದೂ ದುಃಶೀಲನಾಗುವುದೂ ಅವನ ಪ್ರಯತ್ನವನ್ನೇ ಅವಲಂಬಿಸಿದೆಯೆಂದೂ ಸಿದ್ಧವಾಗುವುದು. ಪ್ರಾರಬ್ಧ ಅಥವಾ ಪೂರ್ವಸಂಚಿತವೆಂಬುದು ನಿಮಿತ್ತ ಮಾತ್ರ; ಪ್ರಯತ್ನವೇ ನಿಜ.

**ಸಾಮಾಜಿಕ ಪರಂಪರೆ** — ಪೂರ್ವಜರು ಸಂಪಾದಿಸಿದ ಗುಣಗಳನ್ನು ಅಥವಾ ರೂಢಿಗಳನ್ನು ಮನುಷ್ಯನು ಆನುವಂಶೀಯವಾಗಿ ಪಡೆಯಲಿ ಅಥವಾ ಪಡೆಯದೆ ಇರಲಿ, ಅವನು ಒಂದು ವಿಶಿಷ್ಟವಾದ ಸಂಪ್ರದಾಯದಲ್ಲಿ ಹುಟ್ಟುವನೆಂಬ ಮಾತನ್ನು ಎಲ್ಲರೂ ಒಪ್ಪಲೇಬೇಕು. ಪ್ರತಿಯೊಬ್ಬನು ಪಿತ್ರಾರ್ಜಿತ ಪ್ರಾಪ್ತಿಯಂತೆ ತನ್ನ ಸಮಾಜದ ಆಚಾರಗಳನ್ನೂ ನಂಬಿಗೆ

ಗಳನ್ನೂ ದೊರಕಿಸುತ್ತಾನೆ. ವಂಶಾನುಗತವಾದ ಈ ಬಾಹ್ಯ ಕಾಣಿಕೆಗೆ '**ಸಾಮಾಜಿಕ ಪರಂಪರೆ**' ಎಂದು ಎನ್ನುತ್ತಾರೆ. ಸಾಹಿತ್ಯ, ಶಾಸ್ತ್ರಗಳು, ಆಚಾರಗಳು, ರೂಢಿಗಳು, ಸಂಪ್ರದಾಯಗಳು, ಸಂಘಗಳು ಇವೆಲ್ಲವು ಒಂದು ಸಂತತಿಯಿಂದ ಮತ್ತೊಂದು ಸಂತತಿಗೆ ಬಾಹ್ಯ ಅಂದರೆ ಸಾಮಾಜಿಕ ಪರಂಪರೆಯಾಗಿ ಸಾಗುತ್ತವೆ. ಅಸಂಖ್ಯ ವಂಶಾವಳಿಗಳ ಅನುಭವಗಳು ಸಾಹಿತ್ಯ ಮತ್ತು ಕಲೆಗಳ ರೂಪದಲ್ಲಿ ಕಾದಿಡಲ್ಪಟ್ಟಿವೆ. ಇವುಗಳೇ ಮುಂದಿನ ಸಂತತಿಗೆ ಪ್ರಬಲವಾದ ಪರಿಸ್ಥಿತಿಯಾಗಿ ಪರಿಣಮಿಸುತ್ತವೆ. ನಮಗೆ ಜನ್ಮವೆತ್ತಿ ಸಮಾಜದ ಆಚಾರವಿಚಾರಗಳನ್ನು ನಾವು ಕಲಿಯುತ್ತೇವೆ. ನಮ್ಮ ಸಮಾಜವು ಸುಸಂಸ್ಕೃತವಿದ್ದರೆ ನಾವೂ ಸುಸಂಸ್ಕೃತರಾಗುತ್ತೇವೆ; ಅದು ಅಸಂಸ್ಕೃತವಿದ್ದರೆ ನಾವೂ ಅಸಂಸ್ಕೃತರಾಗುತ್ತೇವೆ. ಒಂದು ಸಮಾಜದಲ್ಲಿ ಬದಲಾವಣೆಯಾದರೆ ಅದರ ಮುಂದಿನ ಪೀಳಿಗೆಯಲ್ಲಿಯೂ ಬದಲಾವಣೆಗಳಾಗುತ್ತವೆ. ಶಿಕ್ಷಣ ವೆಂಬ ಸಾಮಾಜಿಕ ಪರಂಪರೆಯನ್ನು ಒದಗಿಸಿಕೊಡುವುದು ಶಿಕ್ಷಕರ ಕೆಲಸ. ಮಕ್ಕಳು ಒಳ್ಳೆಯ ನಾಗರಿಕರಾಗಬೇಕಾದರೆ ಮನೆಯಲ್ಲಿಯ ಮತ್ತು ಶಾಲೆ ಯಲ್ಲಿಯ ಪರಿಸ್ಥಿತಿಯು ಯೋಗ್ಯವಾಗಿರಬೇಕು.

"**ಮನುಷ್ಯನ ಶ್ರೇಷ್ಠತೆಯು ಸಮಸ್ಯೆಯು ವಂಶಪರಂಪರೆಗಿಂತ ಹೆಚ್ಚಾಗಿ ಸಮಾಜಪರಂಪರೆಯ ಸಮಸ್ಯೆಯಾಗಿರುತ್ತದೆ**" ಎಂದು ಮ್ಯಾಕ್‌ಡೂಗಲ್ಲನು ಹೇಳುತ್ತಾನೆ. ಏಕೆಂದರೆ ಸಮಾಜದ ಒಂದು ಗುಂಪಿ ನಲ್ಲಿ ಬೆಳೆಯುವಾಗ ಮನುಷ್ಯನು ಆ ಗುಂಪಿನ ಸಾಂಪ್ರದಾಯಕ ಕೌಶಲ್ಯ ವನ್ನು, ಜ್ಞಾನವನ್ನು ಮತ್ತು ರೀತಿ ನೀತಿಗಳನ್ನು ಬಹುಭಾಗವಾಗಿ ಸಂಪಾದಿಸು ತ್ತಾನೆ. 'ಅನೇಕ ಶತಮಾನಗಳಿಂದ ನಡೆದುಬಂದ ಮನುಷ್ಯನ ಸುಧಾರಣೆಯು ನೈಸರ್ಗಿಕ ಗುಣಗಳ ಸುಧಾರಣೆಗಿಂತ ಹೆಚ್ಚಾಗಿ ಸಾಂಪ್ರದಾಯದ ಸುಧಾ ರಣೆಯೆ ಆಗಿದೆ.' ಮಹಾತ್ಮರೆನಿಸಿಕೊಳ್ಳುವವರು ಸಿದ್ಧವಾದ ಸುಸ್ವಭಾವ ಸಮೇತರಾಗಿ ಹುಟ್ಟಿಬರುವುದಿಲ್ಲವೆಂದು ಮ್ಯಾಕ್‌ಡೂಗಲ್ಲನು ಹೇಳುತ್ತಾನೆ. ಸಮಾಜದ ವರ್ಚಸ್ಸು ಸ್ವಭಾವವನ್ನು ತಿದ್ದದಿದ್ದರೆ ಮನುಷ್ಯರು ಕಾಡುಮೃಗ ಗಳಂತೆಯೆ ವರ್ತಿಸುವರು. ಮನುಷ್ಯೇತರ ಪ್ರಾಣಿಗಳು ತಮ್ಮದೇ ಒಂದಾದ ಸಂಪ್ರದಾಯವನ್ನು ನಿರ್ಮಿಸಿ ಸಂಸ್ಕೃತಿಯನ್ನು ಹೊಂದಲಾರವು.

ಮನುಷ್ಯನ ಸಂಸ್ಕೃತಿಯ ಬೆಳವಣಿಗೆಗೆ ಮುಖ್ಯವಾಗಿ ಭಾಷೆಯು

ಕಾರಣವು. ಸಂಪ್ರದಾಯಗನ್ನು ಸಂಗ್ರಹಿಸಿಡಲಿಕ್ಕೆ ಮತ್ತು ಹೊಸ ಸಂಪ್ರದಾಯಗಳನ್ನು ಹಾಕಿಕೊಡಲಿಕ್ಕೆ ಭಾಷೆಯು ಒಂದು ಅತ್ಯುತ್ತಮವಾದ ಸಾಧನವು. ವಿಚಾರಸರಣಿಗೂ ಭಾಷೆಯು ಸಹಾಯಕವಾಗುತ್ತದೆ. ಅಂತೆಯೆ ಶಿಕ್ಷಣದಲ್ಲಿ ಭಾಷೆಗೆ ಪ್ರಮುಖ ಸ್ಥಾನವನ್ನು ಬುನಾದಿಯಿಂದಲೂ ಕೊಡಲಾಗಿದೆ. ಮನುಷ್ಯನು ಭಾಷೆಯ ಸಹಾಯದಿಂದಲೇ ಜನಾಂಗದ ಸಂಪ್ರದಾಯಗಳನ್ನು ಅರಿತುಕೊಳ್ಳುತ್ತಾನೆ.

## ಪರಿಸ್ಥಿತಿ

**ಪರಿಸ್ಥಿತಿಯಿಂದಾಗುವ ಪರಿಣಾಮ.—** ಮೇಲಿನ ವಿವರಣೆಯಿಂದ ಪರಿಸ್ಥಿತಿಯ ಪರಿಣಾಮವು ಮನುಷ್ಯನ ಮೇಲೆ ಆಗದೆ ಇರದೆಂಬುದು ಓದುಗರಿಗೆ ತಿಳಿದಿರಬಹುದು. ಪ್ರಾಣಿಯ ವರ್ತನವನ್ನು ಹೊರಗಿನಿಂದ ಮಾರ್ಪಡಿಸಲಿಕ್ಕೆ ಕಾರಣವಾಗಿರುವುದು ಪರಿಸ್ಥಿತಿಯೇ ಎಂದು ಎನಿಸುತ್ತದೆ. ಜೀವಕೋಶಕ್ಕೆ ತಾಯಿಯ ಗರ್ಭವೇ ಪರಿಸ್ಥಿತಿಯಾಗುತ್ತದೆ. ಜನನವಾದ ನಂತರ ಕೂಸಿಗೆ ಮನೆ, ಮಠ, ಬಳಗ, ಪ್ರದೇಶ, ಸಮಾಜ, ರಾಷ್ಟ್ರ, ಆರ್ಥಿಕ ಸ್ಥಿತಿ ಮೊದಲಾದವುಗಳು ಪರಿಸ್ಥಿತಿಯೆಂದು ಎಣಿಸಲ್ಪಡುವವು. ಗಾಲ್ಟನ್ ಮೊದಲಾದವರು ಆನುವಂಶೀಯತೆಯ ತತ್ವವನ್ನು ಸಮರ್ಥಿಸಲಿಕ್ಕೆ ಉದಾಹರಿಸುವ ಮನೆತನಗಳ ಅನೇಕ ವೈಶಿಷ್ಟ್ಯಗಳು ಆನುವಂಶಿಕವಾಗಿರದೆ ಪರಿಸ್ಥಿತಿಯ ಪರಿಣಾಮಗಳೇ ಆಗಿರುವವು. ವಂಶ ಪರಂಪರೆಗಿಂತ ಸಮಾಜ ಪರಂಪರೆಯು ಹೆಚ್ಚು ಮಹತ್ವ ಉಳ್ಳದ್ದು.

ಪರಿಸ್ಥಿತಿ ಮತ್ತು ಪರಂಪರೆಯನ್ನು ಪ್ರತ್ಯೇಕಿಸಿ ವಿಚಾರಿಸತೊಡಗಿದರೆ ನಾವು ಅಡ್ಡದಾರಿಯನ್ನು ಹಿಡಿಯುತ್ತೇವೆ. ಪರಿಸ್ಥಿತಿಯು ಅನುಕೂಲವಿರದಿದ್ದರೆ ಸಹಜಶಕ್ತಿಗಳು ವಿಕಾಸಹೊಂದದೇ ಹಾಗೇ ಉಳಿಯುವವು. ಅನಾರೋಗ್ಯ ಸ್ಥಳದಲ್ಲಿ ವಾಸಿಸುವುದರಿಂದ ಸಶಕ್ತನೂ ತನ್ನ ಶರೀರಸಂಪತ್ತನ್ನು ಕಳೆದುಕೊಳ್ಳುತ್ತಾನೆ. ದೇಹದ ಬೆಳವಣಿಗೆಗೆ ಯೋಗ್ಯ ಪೋಷಣೆಯು ಅವಶ್ಯವಿರುವಂತೆ ಹುಟ್ಟುಗುಣಗಳ ವಿಕಾಸಕ್ಕೆ ಯೋಗ್ಯವಾದ ಪರಿಸ್ಥಿತಿಯು ಆವಶ್ಯಕ. ವ್ಯಾಯಾಮದಿಂದ ಸ್ನಾಯುಗಳು ಬಲಪಡುವಂತೆ ಅಭ್ಯಾಸದಿಂದ ಹುಡುಗರ ಅಂತಃಶಕ್ತಿಗಳು ವಿಕಾಸಹೊಂದುತ್ತವೆ. ಉತ್ತಮ ಆಹಾರ,

ಸ್ವಚ್ಛ ಹವೆ, ಮುಂತಾದ ಸೌಕರ್ಯಗಳನ್ನು ಒದಗಿಸದಿದ್ದರೆ ಮಕ್ಕಳ ಬೆಳವಣಿಗೆಯು ಕುಂಠಿತವಾಗುತ್ತದೆ. ಬೌದ್ಧಿಕ ಮತ್ತು ನೈತಿಕ ಬೆಳವಣಿಗೆಗೆ ಇದೇ ಮಾತು ಅನ್ವಯಿಸುತ್ತದೆ. ಪರಿಸ್ಥಿತಿಯ ಪರಿಣಾಮವು ಮನುಷ್ಯನ ಶರೀರದ ಮೇಲೂ ಮನಸ್ಸಿನ ಮೇಲೂ ಆಗುತ್ತದೆ. ಮಕ್ಕಳ ಮನಸ್ಸು ಬಾಲ್ಯದಲ್ಲಿ ಮೃದುವಾಗಿರುತ್ತದೆ. ಅವರು ದೊಡ್ಡವರಾದಂತೆ ಅದರ ಮೃದುತ್ವವು ಕಡಿಮೆಯಾಗುತ್ತ ಹೋಗುತ್ತದೆ. ಆದುದರಿಂದ ಬಾಲ್ಯದಲ್ಲಿ ಕೊಡುವ ಶಿಕ್ಷಣಕ್ಕೆ ಮಹತ್ವವಿರುತ್ತದೆ. ಆಗ ಕೊಟ್ಟ ಜ್ಞಾನವು ಮನಸ್ಸಿನಲ್ಲಿ ನಟ್ಟು ಬಹು ದಿವಸ ಉಳಿಯುತ್ತದೆ. ಅಂತೆಯೆ 'ಮೂರು ವರ್ಷದ ಬುದ್ಧಿ ನೂರು ವರ್ಷದ ತನಕ' ಎಂಬ ನುಡಿಯು ಪ್ರಚಾರದಲ್ಲಿ ಬಂದಿದೆ.

ಶಿಕ್ಷಣದಿಂದ ವಿದ್ಯಾರ್ಥಿಯ ಬುದ್ಧಿಯನ್ನು ಹೆಚ್ಚಿಸಲು ಸಾಧ್ಯವಿಲ್ಲದಿದ್ದರೂ ಅದನ್ನು ನಾನಾರೀತಿಯಿಂದ ಬಲಿಸಬಹುದು. ಬುದ್ಧಿಯು ಹೆಚ್ಚು ಹೆಚ್ಚಾಗಿ ಅಭಿವೃದ್ಧಿ ಹೊಂದಬೇಕಾದರೆ ಪರಿಸ್ಥಿತಿಯು ಹೆಚ್ಚು ಹೆಚ್ಚು ಅನುಕೂಲವಾಗಬೇಕು. ಯೋಗ್ಯ ಪರಿಸ್ಥಿತಿಯ ಹೊರತು ಹುಟ್ಟು ಸಾಮರ್ಥ್ಯಗಳು ಪ್ರಕಾಶಕ್ಕೆ ಬರಲಾರವು. ನೈತಿಕ ಗುಣಗಳು ವಿಶೇಷವಾಗಿ ಪರಿಸ್ಥಿತಿಯನ್ನೇ ಅವಲಂಬಿಸಿರುವವೆಂದು ಸಿರಿಲ್ ಬರ್ಟನು ಹೇಳುವುದು ನಿಜ. ಮಿಸ್. ಲಾರೆನ್ಸ್ ಅವಳು ಸಾಲೆಯ ಹುಡುಗರ ಬುದ್ಧಿಪರೀಕ್ಷೆಯನ್ನು ಮಾಡಿ ತುಸು ಮಟ್ಟಿಗೆ ಇದೇ ಅಭಿಪ್ರಾಯಕ್ಕೆ ಬಂದಿದ್ದಾಳೆ. ತಂದೆ-ತಾಯ್ಗಳ ಬುದ್ಧಿಗೂ ಅವರ ಮಕ್ಕಳ ಬುದ್ಧಿಗೂ ಸ್ವಲ್ಪ ಆನುವಂಶಿಕ ಸಂಬಂಧವು ಇದ್ದರೂ ಪರಿಸ್ಥಿತಿಯ ವರ್ಚಸ್ಸೇ ಮಕ್ಕಳು ಕೊಡುವ ಉತ್ತರಗಳಿಂದ ವ್ಯಕ್ತವಾಗುವುದೆಂದು ಅವಳು ಹೇಳುತ್ತಾಳೆ.

ಒಟ್ಟಿನಲ್ಲಿ, ಪರಿಸ್ಥಿತಿಯು ಶಕ್ತಿಗಳನ್ನೂ ಗುಣಗಳನ್ನೂ ಉತ್ಪಾದನ ಮಾಡುವುದಿಲ್ಲ; ಆದರೆ ಇದ್ದವುಗಳನ್ನು ವಿಕಾಸಗೊಳಿಸುತ್ತದೆ. ಬೇರೆ ಬೇರೆ ಮಕ್ಕಳಲ್ಲಿ ಬೇರೆ ಬೇರೆ ಸಾಮರ್ಥ್ಯಗಳು ಅಡಿಗಿಕೊಂಡಿರುತ್ತವೆ. ಆದ್ದರಿಂದ ಶಿಕ್ಷಣ ಪದ್ಧತಿಯು ಫಲದಾಯಕವಾಗಬೇಕಾದರೆ ಅದು ನಾನಾ ವಿಧವಾದ ಪರಿಸ್ಥಿತಿಗಳನ್ನು ಒದಗಿಸಿಕೊಡಬೇಕು; ಅನುಕೂಲಿಸಿಕೊಡಬೇಕು. ಬೇರೆ ಬೇರೆ ಸಾಮರ್ಥ್ಯಗಳ ಅಭಿವೃದ್ಧಿಗೆ ಮತ್ತು ಉತ್ತೇಜನಕ್ಕೆ ಅನುಗುಣವಾದ ಸಾಲೆಗಳನ್ನು ಏರ್ಪಡಿಸಬೇಕು— ಭಿನ್ನ ಭಿನ್ನವಾದ

ಶಾಸ್ತ್ರಗಳನ್ನು, ಕಲೆಗಳನ್ನು, ಉದ್ಯೋಗಗಳನ್ನು ಕಲಿಸುವ ಸಾಲೆಗಳು ಸ್ಥಾಪಿಸಲ್ಪಡಬೇಕು.

ಪರಿಸ್ಥಿತಿಯನ್ನಾಗಲಿ ಪರಂಪರೆಯನ್ನಾಗಿ ನಂಬುವವರು ವ್ಯಕ್ತಿ ಸ್ವಾತಂತ್ರ್ಯವನ್ನು ಮರೆಯುತ್ತಾರೆಂದು ನನ್ನ್‌ನು ಹೇಳುವುದು ನಿಜ. ಹಳೆಯ ಪರಂಪರೆಯನ್ನು ತಗೆದೊಗೆದು ಹೊಸ ಪರಂಪರೆಯನ್ನು—ಸಂಪ್ರದಾಯವನ್ನು—ಪ್ರಾರಂಭಿಸುವ ಮತ್ತು ಸ್ಥಾಪಿಸುವ ಶಕ್ತಿಯು ಮನುಷ್ಯನಲ್ಲುಂಟು. ಇಂಥ ಸಂಪ್ರದಾಯ ಸಂಸ್ಥಾಪಕರಿಗೆ ನಾವು ಕಾರಣಿಕ ಪುರುಷರೆಂದು ಕರೆಯುತ್ತೇವೆ.

ಸ್ವಲ್ಪದರಲ್ಲಿ ಹೇಳುವುದಾದರೆ—ಪರಿಸ್ಥಿತಿಯನ್ನೂ ಪರಂಪರೆಯನ್ನೂ ಒಂದರಿಂದ ಇನ್ನೊಂದನ್ನು ಪೂರ್ಣವಾಗಿ ವಿಂಗಡಿಸಲು ಬರುವಂತಿಲ್ಲ. ಹಿಂದೆ ಉಳಿದವರಿಗೆ ವಿದ್ಯೆಯನ್ನಿತ್ತರ ಅವರೂ ಜಾಣರಾಗಿ ಮುಂದೆ ಬರುತ್ತಾರೆ. ಅದಕ್ಕೋಸುಗ ಕೇವಲ ಪರಂಪರೆಯನ್ನು ನಂಬುವುದು ತಪ್ಪಾದುದು. ಇತ್ತ ಸಾಲೆಯಲ್ಲಿ ಗಾಯನವನ್ನು ಎಲ್ಲರಿಗೂ ಕಲಿಸಿದರೆ ಎಲ್ಲರೂ ಗಾಯನಪಟುಗಳಾಗಲಾರರು, ಆದರೆ ಕೆಲವರು ಮಾತ್ರ ಆಗಬಹುದು. ಆದುದರಿಂದ ಸಂಪೂರ್ಣವಾಗಿ ಆನುವಂಶೀಯತೆಯನ್ನು ಅಲಕ್ಷಿಸುವುದೂ ತಪ್ಪೇ. ಹೀಗಿದ್ದರೂ ಪರಿಸ್ಥಿತಿಯೇ ಮಹತ್ವವುಳ್ಳದ್ದೂ ಬಲವಾದದ್ದೂ ಇದೆ. **ಆನುವಂಶೀಯತೆಯೂ ಒಂದು ಕಾಲಕ್ಕೆ ಪರಿಸ್ಥಿತಿಯಿಂದಲೇ ಉಂಟಾಗಿರುವುದು.** ಪರಂಪರೆ ಎಂಬುದು ಪೂರ್ವಸಂಸ್ಕಾರವು. ಪೂರ್ವಸಂಸ್ಕಾರವೆಂದರೆ **ಪೂರ್ವಜೀವನದ ಪರಿಸ್ಥಿತಿಯ ಪರಿಣಾಮದ ಅವಶೇಷಗಳು.** ಈ ಪೂರ್ವಜೀವನವು ಪಾಶ್ಚಾತ್ಯರು ತಿಳಿಯುವಂತೆ ಪೂರ್ವದೇಹಗಳಿಗೆ (ವಂಶಪರಂಪರೆಗೆ) ಸಂಬಂಧವಾಗಿರಬಹುದು; ಅಥವಾ ಪೌರ್ವಾತ್ಯರು ತಿಳಿಯುವಂತೆ ಪೂರ್ವಜನ್ಮಗಳಿಗೆ ಸಂಬಂಧವಾಗಿರಬಹುದು. ಆಳವಾಗಿ ಆಲೋಚಿಸಿ ನೋಡಿದರೆ **ಆನುವಂಶೀಯತೆ ಅಥವಾ ಪರಂಪರೆಯೆಂಬುದು ಪೂರ್ವಪರಿಸ್ಥಿತಿಯೇ ಹೊರತು ಬೇರೆ ಏನೂ ಅಲ್ಲ.** ಮ್ಯಾಕ್‌ಡೂಗಲ್ಲ್‌ನು ಇಲಿಗಳ ಮೇಲೆ ನಡೆಯಿಸಿದ ಪ್ರಯೋಗದಿಂದ ಈ ಮಾತು ನಿದರ್ಶನಕ್ಕೆ ಬರುತ್ತದೆ. ಲ್ಯಮಾರ್ಕ್‌ನ ಸಿದ್ಧಾಂತವಾದರೂ ಇದೇ. ಸಹಜ ಪ್ರವೃತಿಗಳು ಮತ್ತು

ಸಾಮರ್ಥ್ಯಗಳು ಪರಿಸ್ಥಿತಿಜನ್ಯವಾದ ಅನುಭವದಿಂದಲೇ ಸಂಪಾದಿತವಾಗುತ್ತವೆಂದು ಚಾರ್ಲ್ಸ್ ಫಾಕ್ಸನು ಪ್ರತಿಪಾದಿಸುತ್ತಾನೆ. ಹಿಂದೂ ತತ್ವಜ್ಞಾನಿಗಳ ಪ್ರಕಾರ ಎಲ್ಲ ಜೀವಿಗಳ ಮೂಲತತ್ವವು ಒಂದೇ ಆಗಿದ್ದಲ್ಲಿ, ಅವುಗಳಲ್ಲಿ ಕಾಣುವ ವ್ಯತ್ಯಾಸವು ಪರಿಸ್ಥಿತಿಯಿಂದ ಉಂಟಾಗಿರುವುದೆಂದು ನಂಬಬೇಕಾಗುತ್ತದೆ. ಸನ್ಮಾರ್ಗಾಚರಣೆಯಿಂದ ಎಲ್ಲರೂ ಅದೇ ಗುರಿಯನ್ನು ಸಾಧಿಸುವರೆಂದು ಹೇಳುವಲ್ಲಿ ಶಿಕ್ಷಣದ ಪರಿಣಾಮವು ಪ್ರಬಲವಾದದ್ದೆಂದು ನಾವು ನಂಬಲೇಬೇಕಾಗುತ್ತದೆ. ಪರಿಸ್ಥಿತಿಯ ಪರಿಣಾಮವು ಅಪ್ರತ್ಯಕ್ಷವಾಗಿರಬಹುದು, ಆದರೆ ಅದು ಎಂದೂ ನಾಶವಾಗಲಾರದು. ಆದುದರಿಂದ ಶಿಕ್ಷಣವು ನಿಷ್ಫಲವಾಗುವುದಿಲ್ಲ; ಶಿಕ್ಷಕನ ಶ್ರಮವು ವ್ಯರ್ಥವಾಗುವುದಿಲ್ಲ.

# ೧೧

# ಬುದ್ಧಿಮಾಪನ

**ಬುದ್ಧಿಮಾಪನ** ವಿಷಯವು ಶಿಕ್ಷಕನಿಗೆ ಅತ್ಯುಪಯುಕ್ತವಾದುದು. ಬೇರೆ ಬೇರೆ ಮಕ್ಕಳಲ್ಲಿ ಬುದ್ಧಿಯ ಬಲವು ಬೇರೆ ಬೇರೆ ಪ್ರಮಾಣದಲ್ಲಿ ಇರುತ್ತದೆ. ಕೆಲವರು ಸ್ವಾಭಾವಿಕವಾಗಿ ಮಂಕರೂ ಕೆಲವರು ಚತುರರೂ ಇರುವರೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಮನುಷ್ಯನ ಹುಟ್ಟುಬುದ್ಧಿಯನ್ನು ಅಳೆಯುವ ಹೊಸ ವಿಧಾನಗಳನ್ನು ಆಧುನಿಕ ಮನಶ್ಶಾಸ್ತ್ರಜ್ಞರು ಕಂಡುಹಿಡಿದಿರುವರು. ಅವರ ಸಿದ್ಧಾಂತಗಳನ್ನು ಚೆನ್ನಾಗಿ ಅರಿತುಕೊಂಡರೆ ವಿದ್ಯಾರ್ಥಿಗಳ ವರ್ಗೀಕರಣದಲ್ಲಿಯೂ ಕಲಿಸುವ ಕ್ರಮದಲ್ಲಿಯೂ ಯಾವ ಬಗೆಯ ಮಾರ್ಪಾಟುಗಳನ್ನು ಮಾಡಬೇಕೆಂಬುದು ಶಿಕ್ಷಕನಿಗೆ ಗೊತ್ತಾಗುವುದು. ಹಾಗಾದರೆ 'ಬುದ್ಧಿ' ಎಂದರೇನು? 'ಬುದ್ಧಿಮಾಪನ' ಎಂದರೇನು? ಈ ಪ್ರಶ್ನೆಗಳನ್ನು ಸರಿಯಾಗಿ ಬಿಡಿಸಬೇಕಾದರೆ ಮನಶ್ಶಾಸ್ತ್ರಜ್ಞರ ಅಭಿಪ್ರಾಯಗಳನ್ನು ತಿಳಿದುಕೊಳ್ಳುವುದು ಆವಶ್ಯಕ.

**ಬುದ್ಧಿಯ ಸ್ವರೂಪ:**— ಬುದ್ಧಿಯ ಸ್ವರೂಪವನ್ನು ಕುರಿತು ಬೇರೆ ಬೇರೆ ಶಾಸ್ತ್ರಜ್ಞರು ಬೇರೆ ಬೇರೆ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದಾರೆ ಅವರೆಲ್ಲರ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ನೋಡಿದರೆ ಎಲ್ಲರಿಗೂ ಒಪ್ಪಿತವಾಗಿರುವ ಬುದ್ಧಿಯ ಕೆಲವು ಸಾಮಾನ್ಯ ಲಕ್ಷಣಗಳು ಕಂಡುಬರುತ್ತವೆ:— (೧) ಹೊಸ ಸಂದರ್ಭ-ಸನ್ನಿವೇಶಗಳಿಗೆ ಹೊಂದಿಕೊಳ್ಳುವ ಸಾಮರ್ಥ್ಯ; (೨) ಸೂಕ್ಷ್ಮ ವಿಚಾರಗಳನ್ನು ಆಲೋಚಿಸುವ ಸಾಮರ್ಥ್ಯ; ಮತ್ತು (೩) ಕಲಿಯುವ ಸಾಮರ್ಥ್ಯ.

ನಮ್ಮಲ್ಲಿ 'ಓದು ಒಕ್ಕಾಲು, ಬುದ್ಧಿ ಮುಕ್ಕಾಲು' ಎಂಬುದೊಂದು ನಾಣ್ಣುಡಿಯುಂಟು. 'ಬುದ್ಧಿ' ಎಂಬ ಪದವನ್ನು ರೂಢಿಯಲ್ಲಿ 'ಜಾಣತನ' ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ. 'ಬುದ್ಧಿ' ಎಂದರೆ

' ಪಾಂಡಿತ್ಯ ' ಎಂದೂ ಹೇಳುವುದುಂಟು. ಆದರೆ ಹೊಸ ಮನಶ್ಶಾಸ್ತ್ರದ ಪ್ರಕಾರ 'ಪಾಂಡಿತ್ಯ'ಕ್ಕೆ ' ಬುದ್ಧಿ ' ಎಂಬ ಪದವನ್ನು ಉಪಯೋಗಿಸುವುದು ತಪ್ಪಾಗುತ್ತದೆ. ಬುದ್ಧಿಯು ಹುಟ್ಟುಗುಣವು. ಪಾಂಡಿತ್ಯವು ವಿಷಯ ಸಂಗ್ರಹದಿಂದ ಬರುವದು. ಕೇವಲ ವಿಷಯ ಸಂಪಾದನೆಯಿಂದ ಒಬ್ಬನು ಬುದ್ಧಿವಂತನಾಗಲಾರನು. ಸ್ವಾಭಾವಿಕವಾಗಿಯೆ ಕೆಲವರು ದಡ್ಡರೂ ಕೆಲವರು ಜಾಣರೂ ಇರುತ್ತಾರೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಕೆಲವು ಸಾಮರ್ಥ್ಯಗಳು ಹುಟ್ಟುವಾಗಲೇ ನಮ್ಮಲ್ಲಿ ಇರುತ್ತವೆಂದು ನಾಲ್ಕನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಅವುಗಳಲ್ಲಿ ಬುದ್ಧಿಯೂ ಒಂದು. ಶಿಕ್ಷಣದಲ್ಲಿ 'ಬುದ್ಧಿ' ಎಂದರೆ ' ಕಲಿಯುವ ಸಾಮರ್ಥ್ಯ ' ಎಂದು ಇಟ್ಟುಕೊಳ್ಳುವರು.

ಮನುಷ್ಯನಲ್ಲಿರುವ ಯಾವುದೇ ಸಾಮರ್ಥ್ಯವನ್ನು ಪರೀಕ್ಷಿಸಲಿ, ಅದರಲ್ಲಿ ಎರಡು ಅಂಶಗಳು ಕಂಡುಬರುತ್ತವೆಂದು ಪ್ರೊ|| ಸ್ಪಿಯರ್‌ಮನ್ ಎಂಬವನು ಹೇಳುತ್ತಾನೆ. ಅವನ ಈ ಸಿದ್ಧಾಂತವು **"ದ್ವಿಅಂಶ ವಾದ"** ಎಂದು ಪ್ರಸಿದ್ಧವಾಗಿದೆ. ಒಂದು ' ಸಾಮಾನ್ಯ ಅಂಶ, ' ಇನ್ನೊಂದು ' ವಿಶೇಷ ಅಂಶ. ' ' ಸಾಮಾನ್ಯ ಅಂಶ'ವು ಬೇರೆ ಬೇರೆ ವ್ಯಕ್ತಿಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಇರುತ್ತದೆ. ಅಂದರೆ ಅದು ಆಯಾ ವ್ಯಕ್ತಿಯಲ್ಲಿ ಅಷ್ಟೇ ಪ್ರಮಾಣದಲ್ಲಿ ಉಳಿಯುತ್ತದೆ. ' ವಿಶೇಷ ಅಂಶ'ವು ಭಿನ್ನ ಭಿನ್ನವ್ಯಕ್ತಿಗಳಲ್ಲಿ ಭಿನ್ನ ಭಿನ್ನ ಪ್ರಮಾಣದಲ್ಲಿ ಇರುವುದಲ್ಲದೆ ಒಂದೇ ವ್ಯಕ್ತಿಯಲ್ಲಿ ಕಂಡುಬರುವ ಬೇರೆ ಬೇರೆ ಸಾಮರ್ಥ್ಯಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಇರುತ್ತದೆ. ಅದು ಒಂದು ವ್ಯಕ್ತಿಯ ಗಾಯನ ಕಲೆಯಲ್ಲಿ ಕೆಲವೊಂದು ಪ್ರಮಾಣದಲ್ಲಿರಬಹುದು, ಅದೇ ವ್ಯಕ್ತಿಯ ಗಣಿತ ಸಾಮರ್ಥ್ಯದಲ್ಲಿ ಬೇರೊಂದು ಪ್ರಮಾಣದಲ್ಲಿರಬಹುದು. ಈ ಸ್ವತಂತ್ರವಾದ 'ವಿಶೇಷ ಅಂಶ'ದ ವ್ಯತ್ಯಾಸದಿಂದಲೇ ಒಬ್ಬ ವ್ಯಕ್ತಿಯು ಕೈಕೊಂಡ ಬೇರೆ ಬೇರೆ ಕಾರ್ಯಗಳಲ್ಲಿ ವೈವಿಧ್ಯವು ಕಂಡುಬರುತ್ತದೆ. ಆದರೆ ಒಬ್ಬ ಮನುಷ್ಯನ ಯಾವುದೇ ಕೆಲಸದಲ್ಲಿಯ ಯಶಸ್ಸು ಅವನ ಸಾಮಾನ್ಯ ಬುದ್ಧಿಶಕ್ತಿಯನ್ನೂ ಆ ಕಾರ್ಯವನ್ನು ನಿರ್ವಹಿಸುವ ವಿಶೇಷ ಸಾಮರ್ಥ್ಯವನ್ನೂ ಅವಲಂಬಿಸಿರುತ್ತದೆ.

ಮನುಷ್ಯನ ಬೇರೆ ಬೇರೆ ಸಾಮರ್ಥ್ಯಗಳು ಒಂದಕ್ಕೊಂದು ಸಂಬಂಧ

ವಿಲ್ಲದ ಸ್ವತಂತ್ರ ಶಕ್ತಿಗಳಾಗಿದ್ದಂತೆ ತೋರುವುದಿಲ್ಲ. ಹಾಗಿದ್ದ ಪಕ್ಷದಲ್ಲಿ ಒಬ್ಬ ಮಗುವಿನ ಒಂದು ಪದ್ಯವನ್ನು ಕಂಠಸ್ಥ ಮಾಡುವ ಶಕ್ತಿಗೂ ಒಂದು ಗದ್ಯಭಾಗವನ್ನು ಕಂಠಸ್ಥ ಮಾಡುವ ಶಕ್ತಿಗೂ ಅನ್ಯೋನ್ಯ ಸಂಬಂಧವಿಲ್ಲೆಂದು ಹೇಳಬೇಕಾಗುತ್ತದೆ. ಎಂದರೆ ಕವಿತೆಯನ್ನು ಬಾಯಿಪಾಠಮಾಡಬಲ್ಲವನು ಗದ್ಯಭಾಗವನ್ನು ಬಾಯಪಾಠ ಮಾಡಲಾರನೆಂದು ಹೇಳಿದಂತಾಗುತ್ತದೆ. ಆದರೆ ವಸ್ತುಸ್ಥಿತಿಯು ಹಾಗಿರುವುದಿಲ್ಲ. ಕವಿತೆಯನ್ನು ಮತ್ತು ಗದ್ಯವನ್ನು ಕಂಠಗತ ಮಾಡುವಲ್ಲಿ ಮಗುವು ಹೆಚ್ಚುಕಡಿಮೆ ಸಮನಾದ ಶಕ್ತಿಯನ್ನು ತೋರಿಸುತ್ತಾನೆ. ಈ ಎರಡೂ ಕಾರ್ಯಗಳಿಗೆ ಸ್ಮರಣಶಕ್ತಿಯು ಸಂಬಂಧಪಟ್ಟಿರುತ್ತದೆ ಆದರೆ ಅದೇ ಮಗುವಿನ ಗಣಿತಮಾಡುವ ಶಕ್ತಿಯಾಗಲಿ, ಯಾವುದಾದರೊಂದು ವಿಷಯವನ್ನು ಯೋಚಿಸುವ ಶಕ್ತಿಯಾಗಲಿ ಬಹುಶಃ ಅವನ ಸ್ಮರಣಶಕ್ತಿಯ ಮಟ್ಟಕ್ಕೆ ಬರಲಿಕ್ಕಿಲ್ಲ. ಆದ್ದರಿಂದ ಇತ್ತಿತ್ತಲಾಗಿ ಸ್ಪಿಯರ್‌ಮನ್‌ನು ಅನ್ಯೋನ್ಯ ಸಂಬಂಧವುಳ್ಳ ಸಾಮರ್ಥ್ಯಗಳನ್ನು ಒಂದೊಂದು ಗುಂಪಿಗೆ ಸೇರಿಸಿ, ಮನುಷ್ಯನಲ್ಲಿ ಕೆಲವು ಶಕ್ತಿಗಳ ಗುಂಪುಗಳುಂಟೆಂಬ ಕಲ್ಪನೆಗೆ ಬಂದಿದ್ದಾನೆ. ಮ್ಯಾಕ್‌ಡೂಗಲ್ಲನು ಪುರಸ್ಕರಿಸುವ ತತ್ವವಾದರೂ ಇದೇ.

ಪ್ರೊ॥ ಸಿ. ಸ್ಪಿಯರ್‌ಮನ್‌ನು ಬುದ್ಧಿಶಕ್ತಿಗೆ ಸಂಬಂಧಿಸಿದ ಎಲ್ಲ ವಾದಗಳನ್ನು ಮೂರು ವರ್ಗಗಳಾಗಿ ವಿಭಾಗಿಸಿದ್ದಾನೆ.— (೧) ಏಕರಾಜಕ ವಾದ, (೨) ಬಹುರಾಜಕ ವಾದ, (೩) ಅರಾಜಕ ವಾದ. ಪ್ರೊ॥ ಥಾರನ್‌-ಡೈಕ್ ಮತ್ತು ಪ್ರೊ॥ ಗಾಡ್‌ಪ್ರೆ ಥಾಮ್ಸನ್ ಅವರು 'ಅರಾಜಕ ವಾದ'ವನ್ನು ಎಂದರೆ ಮನುಷ್ಯನಲ್ಲಿ ಸ್ವತಂತ್ರವಾದ ಅನೇಕ ಶಕ್ತಿಗಳು ಉಂಟೆಂಬ ತತ್ವವನ್ನು ಘೋಷಿಸುತ್ತಾರೆ. ಮನುಷ್ಯನಲ್ಲಿ ಸಾಮಾನ್ಯ ಬುದ್ಧಿಯೆಂಬುದೊಂದು ಬೇರೆಯಿಲ್ಲ, ಪರಸ್ಪರ ಸಂಬಂಧವಿಲ್ಲದ ಬೇರೆ ಬೇರೆ ಶಕ್ತಿಗಳು ಉಂಟು; ಎಂಬುದು ಈ ವಾದದ ತಿರುಳು. ಒಂದು ಕಾರ್ಯಸಾಮರ್ಥ್ಯದಿಂದ ಮತ್ತೊಂದು ಕಾರ್ಯಸಾಮರ್ಥ್ಯವನ್ನು ಅಳೆಯಲಿಕ್ಕೆ ಬರುವುದಿಲ್ಲವಂತೆ, ಆದರೆ ಈ ತತ್ವವನ್ನು ಈಗ ಒಪ್ಪುವವರು ತೀರ ವಿರಳ. ಯಾಕೆಂದರೆ ಕೆಲವು ಶಕ್ತಿಗಳಲ್ಲಿ ಅನ್ಯೋನ್ಯ ಸಂಬಂಧವಿರುವುದು. ಮೇಲೆ ಕೊಟ್ಟಿರುವ ಉದಾಹರಣೆಯಿಂದ ಈ ಮಾತು ಸ್ಪಷ್ಟವಾಗುತ್ತದೆ.

ಕೆಲವರು 'ಬಹುರಾಜಕ ವಾದ'ವನ್ನು ಅಂಗೀಕರಿಸುತ್ತಾರೆ ಎಂದರೆ ಮನುಷ್ಯನಲ್ಲಿ ನಿರ್ಣಯ, ಅವಧಾನ, ಸ್ಮೃತಿ, ತರ್ಕ ಮುಂತಾದ ಕೆಲವು ಮುಖ್ಯಶಕ್ತಿಗಳು ಉಂಟೆಂದೂ ಅವುಗಳನ್ನು ಪ್ರತ್ಯೇಕವಾಗಿ ಅಳೆಯಲಿಕ್ಕೆ ಬರುವುದೆಂದೂ ಅವರ ಮತವಾಗಿದೆ. ಭಾಷೆಯಲ್ಲಿ ಜಾಣನಿದ್ದವನು ಗಣಿತ ಅಥವಾ ಗಾಯನದಲ್ಲಿ ಜಾಣನಿರಲಿಕ್ಕಿಲ್ಲ ಎಂಬ ಸಾಮಾನ್ಯ ನಂಬಿಕೆಯಿದೆ. ಮನುಷ್ಯನಲ್ಲಿ ಇಂಥ 'ಶಕ್ತಿ'ಗಳಿರುತ್ತವೆಂಬುದನ್ನು ಆಧುನಿಕ ಮನಶ್ಶಾಸ್ತ್ರವು ಒಪ್ಪುವುದಿಲ್ಲ.

ಇನ್ನು ಕೆಲವರು 'ಏಕರಾಜಕ ವಾದ'ವನ್ನು ಪ್ರತಿಪಾದಿಸುತ್ತಾರೆ. ಎಲ್ಲ ಸಾಮರ್ಥ್ಯಗಳಿಗೆ ಅಧಿಪತಿಯಾದ ಒಂದು ಬುದ್ಧಿಶಕ್ತಿಯು ಮನುಷ್ಯನಲ್ಲಿ ಉಂಟೆಂದು ಅವರ ನಂಬಿಕೆ. ಎಂದರೆ ಒಂದು ಬುದ್ಧಿವಂತಿಕೆಯ ಕಾರ್ಯವನ್ನು ಚೆನ್ನಾಗಿ ಮಾಡುವವನು ಬೇರೊಂದು ಬುದ್ಧಿವಂತಿಕೆಯ ಕಾರ್ಯವನ್ನೂ ಮಾಡಬಲ್ಲನೆಂದು ಇವರ ಮತ. ಸಿವಿಲ್ ಸರ್ವಿಸಿಗೆ ಉಮೇದವಾರರನ್ನು ಆರಿಸುವಾಗ ಗಣಿತ, ಪ್ರಾಚೀನ ಸಾಹಿತ್ಯ ಅಥವಾ ತತ್ವಶಾಸ್ತ್ರ ಮುಂತಾದ ವಿಷಯುಗಳ ಪರೀಕ್ಷೆಯನ್ನು ತೆಗೆದುಕೊಳ್ಳುವರು. ಅದಕ್ಕೆ ಈ ಗ್ರಹಿಕೆಯು ಆಧಾರವಾಗಿದೆ. ಪ್ರತಿಯೊಬ್ಬನಲ್ಲಿ ಬುದ್ಧಿಯೆಂಬ ಒಂದು ಕೇಂದ್ರ ಶಕ್ತಿಯು ಉಂಟೆಂಬುದನ್ನು ಬುದ್ಧಿಮಾಪನದವರು ಅಂಗೀಕರಿಸುತ್ತಾರೆ. ಆದರೆ ಅದರ ಸ್ವರೂಪವನ್ನು ಗೊತ್ತುಹಚ್ಚುವಾಗ ಅದನ್ನು ಒಡೆದು ಅಳೆಯುತ್ತಾರೆ.

ಮೇಲೆ ವಿವರಿಸಿದ ಸ್ಪಿಯರ್‌ಮನ್‌ನ 'ದ್ವಿ ಅಂಶ ವಾದ'ದಲ್ಲಿ ಈ ಮೂರೂ ತತ್ವಗಳೂ ಅಡಕವಾಗಿವೆ. ಆದ್ದರಿಂದ ಅವನು ತನ್ನ ವಾದವನ್ನು 'ಸಾರಸಂಗ್ರಹ'ವೆಂದು ಕರೆಯುತ್ತಾನೆ. ಸಾಮಾನ್ಯ ಅಂಶವು ಮುಖ್ಯವೆಂದು ತಿಳಿದಲ್ಲಿ ಅದು ಏಕರಾಜಕವಾಗುತ್ತದೆ; ವಿಶೇಷ ಅಂಶಗಳಿಗೆ ಪ್ರಾಧಾನ್ಯ ಕೊಟ್ಟಲ್ಲಿ ಅದೇ ಅರಾಜಕವಾಗುತ್ತದೆ; ವಿಶೇಷ ಅಂಶಗಳನ್ನು ಗುಂಪುಗುಂಪಾಗಿ ವಿಭಾಗಿಸಿದಲ್ಲಿ ಅದು ಬಹುರಾಜಕವಾಗುತ್ತದೆ. ಅದು ಏನೇ ಇರಲಿ, 'ದ್ವಿ ಅಂಶ ವಾದ'ವನ್ನೇ ಅನೇಕ ಶಾಸ್ತ್ರಜ್ಞರು ಸ್ವೀಕರಿಸುತ್ತಾರೆ.

'ಸಾಮಾನ್ಯ ಅಂಶ' ಎಂದರೇನು? ಅದು ಮನಸ್ಸಿನ ಚೈತನ್ಯವೆಂದು ಸ್ಪಿಯರ್‌ಮನ್‌ನು ಹೇಳುತ್ತಾನೆ. ಎಂದರೆ "ಅದು ಒಂದು

ಮನೋವ್ಯಾಪಾರದಿಂದ ಮತ್ತೊಂದಕ್ಕೆ ವರಿವರ್ತಿಸಲ್ಪಡಬಹುದಾದ ಒಂದು ಸಾಮರ್ಥ್ಯವು, " 'ವಿಶೇಷ ಶಕ್ತಿಗಳನ್ನು' ಕಾರಖಾನೆಯಲ್ಲಿಯ ಯಂತ್ರಗಳಿಗೂ 'ಸಾಮಾನ್ಯ ಅಂಶ' ವನ್ನು ಆ ಯಂತ್ರವನ್ನು ನಡೆಯಿಸುವ ಚೈತನ್ಯಕ್ಕೂ ಸ್ಪಿಯರ್‌ಮನ್‌ನು ಹೋಲಿಸುತ್ತಾನೆ. ಈ ಚೈತನ್ಯಕ್ಕೆ ನಾವು ಬುದ್ಧಿಯೆಂದು ಕರೆಯಬಹುದು. ಬುದ್ಧಿಯನ್ನು ಅಳೆಯುವುದು ಎಂದರೆ ಚೈತನ್ಯವನ್ನು ಅಳೆಯುವುದು. ಎಲ್ಲ ವಿದ್ಯಾಭ್ಯಾಸದ ಕ್ರಿಯೆಗಳಲ್ಲಿ ಇದೇ ಬುದ್ಧಿಯು ವ್ಯವಹರಿಸುವುದೆಂದು ಸ್ಪಿಯರ್‌ಮನ್‌ನು ಹೇಳುತ್ತಾನೆ. ಬುದ್ಧಿಯಲ್ಲಿ ಯಾವ ಲಕ್ಷಣವೇ ಅಡಕವಾಗಿರಲಿ, ಅದು ಪ್ರಾಮುಖ್ಯವಾಗಿ ಪ್ರಜ್ಞಾಕ್ರಿಯೆಯು.

ಬುದ್ಧಿಯ ಅಂತಿಮ ಸ್ವರೂಪವೇನೆಂಬುದು ಇನ್ನೂ ತಿಳಿದುಬಂದಿಲ್ಲ. ಮಹಾಜ್ಞಾನಿಯಾದ ಗೌತಮನಿಗೆ ನಾವು 'ಬುದ್ಧ' ಎಂದು ಸಂಬೋಧಿಸುತ್ತೇವೆ. ಗೌತಮನಂತಹ ಮೇಧಾವಿಗಳು ಯಾವುದಕ್ಕೆ 'ಬುದ್ಧಿ' ಅಥವಾ 'ಬೋಧಿ' ಎಂದು ಕರೆಯುತ್ತಾರೆಂಬುದು ಸಾಮಾನ್ಯ ಜನರ ಅನುಭವಕ್ಕೆ ಬಾರದ ಮಾತಾಗಿದೆ. ಆದರೆ ಇಷ್ಟು ಮಾತ್ರ ನಿಜ, ಬುದ್ಧಿಯೆಂಬುದು ಮನುಷ್ಯನ ಎಲ್ಲ ಬಗೆಯ ವರ್ತನದಲ್ಲಿ ವ್ಯಕ್ತವಾಗುತ್ತದೆ. ಮಂದಮತಿಯ ಕಾರ್ಯಗಳಲ್ಲಿ ಬುದ್ಧಿಯು ಕಡಿಮೆ ಇರುವುದೆಂದೂ ಅಸಾಧಾರಣ ಪ್ರತಿಭಾಶಾಲಿಯ ಕ್ರಿಯೆಗಳಲ್ಲಿ ಬುದ್ಧಿಯ ಪ್ರಭೆಯು ಹೆಚ್ಚಾಗಿರುವುದೆಂದೂ ನಾವೆಲ್ಲರು ಒಪ್ಪುತ್ತೇವೆ. ಪ್ರತಿಯೊಬ್ಬ ಮನುಷ್ಯನ ಬುದ್ಧಿಶಕ್ತಿಯನ್ನು ಹೇಗೆ ಗೊತ್ತುಹಚ್ಚಬೇಕೆಂಬುದೇ ಬುದ್ಧಿಮಾಪನದ ಸಮಸ್ಯೆ. ಬುದ್ಧಿಯ ಅಂಶಗಳಾದ ಅವಧಾನ, ವಿಚಾರ, ನಿರ್ಣಯ, ತಿಳಿವು ಮುಂತಾದ ಶಕ್ತಿಗಳನ್ನು ಅಳೆಯಲಿಕ್ಕೆ ಬೀನೆ, ಟರ್ಮನ್ ಮೊದಲಾದವರು ಕೆಲವೊಂದು ಪ್ರಶ್ನೆಮಾಲೆಗಳನ್ನು ಶೋಧಿಸಿದ್ದಾರೆ. ಅವಕ್ಕೆ "ಬುದ್ಧಿ ಪರೀಕ್ಷಣಗಳು" (Intelligence Tests) ಎಂಬ ಹೆಸರು.

ಬುದ್ಧಿಯು ಬೆಳೆಯುವುದೇ? ಅಹುದು. ಮಗುವು ಬೆಳೆಯುತ್ತ ಹೋದ ಹಾಗೆ ಅನುಭವದ ಮೂಲಕ ಅವನ ಬುದ್ಧಿಯೂ ವಿಕಾಸಹೊಂದುತ್ತದೆ. ಅವರ ಒಬ್ಬನಲ್ಲಿ ಹುಟ್ಟಿದಾಗ ಇದ್ದ ಬುದ್ಧಿಶಕ್ತಿಯ ಮೊತ್ತವು ಮುಂದೆ ಹೆಚ್ಚಾಗುತ್ತದೆ ಎಂದು ಅರ್ಥವಲ್ಲ ಅದು ಇದ್ದಷ್ಟೇ ಇರುವುದು. ಆದರೆ ಪರಿಸ್ಥಿತಿಯ

ಬಲದಿಂದ ಬುದ್ಧಿಯು ವಿಸ್ತೃತವಾಗುತ್ತದೆ. ರಬ್ಬರಿನ ಪೀಪಿಯಲ್ಲಿ ಗಾಳಿಯನ್ನು ತುಂಬಿ ಅದನ್ನು ಹಿಗ್ಗಿಸಬಹುದು. ಆದರೆ ಅದರಿಂದ ರಬ್ಬರಿನ ಮೊತ್ತವನ್ನು ಹೆಚ್ಚಿಸಿದಂತಾಗುವುದಿಲ್ಲ. ಇದೇ ಮಾತು ಬುದ್ಧಿಶಕ್ತಿಗೂ ಅನ್ವಯಿಸುತ್ತದೆ. ಈ ಸಂಗತಿಯನ್ನು 'ಪರಂಪರೆ ಮತ್ತು ಪರಿಸ್ಥಿತಿ' ಎಂಬ ಪ್ರಕರಣದಲ್ಲಿ ಸವಿಸ್ತಾರನಾಗಿ ವಿವರಿಸಿದೆ. ಮಗುವು ಹುಟ್ಟಿದಂದಿನಿಂದ ಹದಿನಾರು ವರ್ಷದವನು ಆಗುವ ವರೆಗೆ ಅವನ ಬುದ್ಧಿಯು ಕ್ರಮೇಣ ವಿಕಾಸ ಹೊಂದುತ್ತ ಹೋಗುತ್ತದೆಂದು ಅನೇಕ ಬುದ್ಧಿಪರೀಕ್ಷರ ಮತ. ಪ್ರಾಯವು ಪ್ರಾಪ್ತವಾದ ನಂತರ ಬುದ್ಧಿಯು ವಿಸ್ತೃತವಾಗುವದೊ ಇಲ್ಲವೊ ಎಂಬುದು ಇನ್ನೂ ತೊಡಕಿನ ವಿಷಯವಾಗಿ ಉಳಿದಿದೆ. ಬಹುತರವಾಗಿ ಬುದ್ಧಿಯ ಮಟ್ಟವು ಪ್ರೌಢಾವಸ್ಥೆಯಲ್ಲಿ ಸ್ಥಿರವಿದ್ದು ಮುಪ್ಪು ಸಮೀಪಿಸಿದಂತೆ ಕಡಿಮೆಯಾಗುತ್ತ ಹೋಗುವಂತೆ ತೋರುತ್ತದೆ. **ಬುದ್ಧಿಯು ಬೆಳೆಯಬೇಕಾದರೆ ಪ್ರೋತ್ಸಾಹವು ಆವಶ್ಯಕ. ಪರಿಸ್ಥಿತಿಯು ಪ್ರತಿಕೂಲವಿದ್ದಲ್ಲಿ ಬುದ್ಧಿಯು ವಿಕಾಸಹೊಂದದು. ಮಕ್ಕಳನ್ನು ಹೆಚ್ಚು ವಯಸ್ಕರಾಗುವ ವರೆಗೆ ಸಾಲೆಯಲ್ಲಿಡುವ ಏರ್ಪಾಡು ಇದ್ದ ದೇಶಗಳು ಉನ್ನತ ಸ್ಥಿತಿಯನ್ನು ಹೊಂದುವವು** ಎಂದು ಚಾರ್ಲ್ಸ್ ಫಾಕ್ಸನು ಹೇಳುವುದು ನಿಜ. **ಬುದ್ಧಿಯ ವಿಕಾಸಕ್ಕೆ ಶಿಕ್ಷಣವು ಸಹಾಯಕವಾಗುತ್ತದೆ.** ಲಂಡನ್ ಸಾಲೆಗಳಲ್ಲಿ ನಡೆಯಿಸಿದ ಪರಿಶೋಧನೆಯ ಆಧಾರದ ಮೇಲಿಂದ ಪ್ರೊ॥ ಫಾಕ್ಸನು ಹೇಳುವುದೇನಂದರೆ—ಮನುಷ್ಯರಲ್ಲಿ ಕಂಡು ಬರುವ ಬುದ್ಧಿಮಾನದ ವ್ಯತ್ಯಾಸವು ಪರಿಸ್ಥಿತಿ ಶಿಕ್ಷಣಗಳ ಫಲಿತಾಂಶವಾಗಿದೆ.

**ಬುದ್ಧಿ ಪರೀಕ್ಷೆಗಳ ಇತಿಹಾಸ.—** ಬುದ್ಧಿ ಪರೀಕ್ಷೆಯು ಒಂದಿಲ್ಲೊಂದು ರೀತಿಯಲ್ಲಿ ಬಹು ಪುರಾತನಕಾಲದಿಂದಲೂ ನಡೆದುಬಂದಿದೆ ವೇದಕಾಲದಲ್ಲಿ ವಟುಗಳು ತಮ್ಮ ಅಭ್ಯಾಸವನ್ನು ಪೂರೈಸಿಕೊಂಡು ಗುರುಗಳ ಆಶ್ರಮವನ್ನು ಬಿಡುವ ಮೊದಲು ಗುರುಹಿರಿಯರ ಸಮ್ಮುಖದಲ್ಲಿ ತಾವು ಕಲಿತುದನ್ನು ಒಪ್ಪಿಸುತ್ತಿದ್ದರೆಂದು ತೋರುತ್ತದೆ. ಬುದ್ಧಿ ಪರೀಕ್ಷೆಯ ಸಂದರ್ಭಗಳು ಉಪನಿಷತ್ಕಥೆಗಳನ್ನು ಓದುವಾಗ ಅಲ್ಲಲ್ಲಿ ಬರುತ್ತವೆ. ನಾಲಂದಾ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುವವರು ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕಾಗುತ್ತಿದ್ದಿತು. ಆದರೆ ಈ ಪರೀಕ್ಷೆಗಳು

ವಿಷಯ ಸಂಗ್ರಹದ ಪಾಂಡಿತ್ಯವನ್ನು ಪರೀಕ್ಷಿಸುವಂತಹವಾಗಿದ್ದುವು. ಹೊಸ ಮಾನಸ ಶಾಸ್ತ್ರವು ಈ ವಿಷಯ ಪಾಂಡಿತ್ಯವನ್ನು ಅಳೆಯದೆ ಬುದ್ಧಿಶಕ್ತಿಯನ್ನು ಅಳೆಯುವ ವಿಧಾನಗಳನ್ನು ಯೋಚಿಸಿದೆ.

ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದಲ್ಲಿ ಸಾಮುದ್ರಿಕ ಶಾಸ್ತ್ರವು ಇಂಗ್ಲಂಡ ಮೊದಲಾದ ಪಾಶ್ಚಾತ್ಯದೇಶಗಳಲ್ಲಿ ಪ್ರಸಿದ್ಧಿಗೆ ಬಂದಿತು. ಮುಖಚರ್ಯೆಯ ಮೇಲಿಂದಲೂ ಅಂಗರಚನೆಯ ಮೇಲಿಂದಲೂ ಒಬ್ಬನ ಬುದ್ಧಿಶಕ್ತಿಯನ್ನು ನಿರ್ಣಯಿಸಲು ಸಾಧ್ಯವಿರುವುದೆಂಬ ನಂಬುಗೆಯು ಪ್ರಚಾರದಲ್ಲಿ ಬಂದಿತು ಆದರೆ "ಮುಖಲಕ್ಷಣವನ್ನು ನೋಡಿ ಇವನು ಅಪರಾಧಿಯೆಂದು, ತಲೆಬುರುಡೆಯನ್ನು ನೋಡಿ ಇವನು ಮೇಧಾವಿಯೆಂದು ಮತ್ತು ಕಿವಿಯ ಉದ್ದಳತೆಯನ್ನು ನೋಡಿ ಇವನು ಮೂರ್ಖನೆಂದು ಹೇಳಲು ಬರುವಂತಿಲ್ಲ." ಬಳಿಕ, ಇಂದ್ರಿಯಗಳ ತೀಕ್ಷ್ಣತೆಯನ್ನು ಅಳೆಯುವುದರಿಂದ ಬುದ್ಧಿಯ ತೀಕ್ಷ್ಣತೆಯನ್ನು ಕಂಡುಹಿಡಿಯಲಿಕ್ಕೆ ಬರುತ್ತದೆಂದು ಕೆಲವರು ಪ್ರತಿಪಾದಿಸ ತೊಡಗಿದರು. ಅದರಂತೆ ಇಂದ್ರಿಯ ಸಾಮರ್ಥ್ಯವನ್ನು ಅಳೆಯುವ ಅನೇಕ ಉಪಕರಣಗಳನ್ನೂ ಯಂತ್ರಗಳನ್ನೂ ಯೋಚಿಸಿ, ನಿರ್ಮಿಸ ತೊಡಗಿದರು. ಆದರೆ ಮನುಷ್ಯನ ಬುದ್ಧಿಯ ಬೆಲೆಯನ್ನು ಕಟ್ಟಲಿಕ್ಕೆ ಆತನ ಇಂದ್ರಿಯ ಸಾಮರ್ಥ್ಯವು ನಮಗೆ ಸಹಾಯವಾಗಲಾರದು. ಮಂಕುಬುದ್ಧಿಯವನು ವಿಚಾರ, ತರ್ಕ ಮತ್ತು ನಿರ್ಣಯ ಸಾಮರ್ಥ್ಯಗಳಲ್ಲಿ ಬಲಹೀನನಿರುವನು. ಆದರೆ ಕಣ್ಣು, ಕಿವಿ ಮೊದಲಾದ ಇಂದ್ರಿಯಗಳ ಶಕ್ತಿಗಳಲ್ಲಿ ಅವನು ಬಲಹೀನನು ಇರುವನೆಂದು ಹೇಳಲಿಕ್ಕಾಗುವುದಿಲ್ಲ. ಬರಬರುತ್ತ ಅಂಗ ಸಾಮರ್ಥ್ಯಗಳಿಂದ ಬುದ್ಧಿಸಾಮರ್ಥ್ಯವನ್ನು ಅಳೆಯುವುದು ಅಸಾಧ್ಯವೆಂದು ತೋಚಿತು. ಆದ್ದರಿಂದ ಮನಶ್ಶಾಸ್ತ್ರಜ್ಞರು ಬುದ್ಧಿಮಾಪನದ ಹೊಸ ವಿಧಾನಗಳನ್ನು ಕಂಡುಹಿಡಿದರು.

ಫ್ರಾನ್ಸ್ ದೇಶದ ಆಲ್ಫ್ರೆಡ್ ಬೀನೆ ಎಂಬ ಮನೋವೈಜ್ಞಾನಿಕನು ಮೊಟ್ಟಮೊದಲು ೧೯೦೫ರಲ್ಲಿ ಬುದ್ಧಿಮಾಪನದ ಪ್ರಶ್ನೆ ಮಾಲಿಕೆಗಳನ್ನು ತಯಾರಿಸಿದನು. ಶಾಲೆಗೆ ಹೋಗುವ ಒಬ್ಬ ಮಗುವು ಓರಿಗೆಯ ಉಳಿದ ಮಕ್ಕಳಿಗಿಂತ ಅಭ್ಯಾಸದಲ್ಲಿ ಹಿಂದುಳಿಯುವುದರ ಕಾರಣವು ಬುದ್ಧಿಯ ದೋಷವೊ ಅಥವಾ ಪ್ರತಿಕೂಲ ಪರಿಸ್ಥಿತಿಯೊ ಎಂಬುದನ್ನು

ಬೋಧಿಸಲು ಅವನು ಪ್ರಾರಂಭಿಸಿದನು. ಶಾಲೆಯ ಶಿಕ್ಷಣವಿಲ್ಲದಿದ್ದರೂ ಪ್ರತಿಯೊಂದು ಮಗುವಿನಲ್ಲಿರುವ ಸಹಜ ತಿಳಿವಳಿಕೆಯನ್ನು ನಿರ್ಣಯಿಸುವ ಕೆಲವು ಪ್ರಶ್ನೆಗಳನ್ನು ಅವನು ಕಂಡುಹಿಡಿದನು. ಕೆಲವೊಂದು ವಯಸ್ಸಿನಲ್ಲಿ ಮಗುವು ತನ್ನ ಕಣ್ಣು, ಮೂಗು, ಕಿವಿಗಳನ್ನು ಗುರುತಿಸಲಿಕ್ಕೆ ಸಹಜವಾಗಿ ಕಲಿಯುತ್ತಾನೆ. ಇನ್ನೊಂದು ವಯಸ್ಸಿನಲ್ಲಿ ವಾರದ ಹೆಸರುಗಳನ್ನು ಹೇಳಲಿಕ್ಕೆ ಕಲಿಯುತ್ತಾನೆ. ಹೀಗೆಯೆ ಮಗುವಿನ ವಿಚಾರಶಕ್ತಿ ಮೊದಲಾದುವು ಬೆಳೆಯುತ್ತ ಹೋಗುತ್ತವೆ. ಬಾಲಕನ ಯಾವ ಯಾವ ವಯಸ್ಸಿನಲ್ಲಿ ಇಂತಹ ಯಾವ ಸಾಮಾನ್ಯ ಜ್ಞಾನವು ಪ್ರಾಪ್ತವಾಗುತ್ತದೆಂದು ನಿರ್ಣಯಿಸಲಿಕ್ಕೆ ಬೀನೆಯು ಪ್ಯಾರಿಸ್ ಪಟ್ಟಣದ ಅನೇಕ ಹುಡುಗರನ್ನು ಅವರ ವಯಸ್ಸಿಗೆ ತಕ್ಕಂತೆ ವರ್ಗೀಕರಣ ಮಾಡಿ ಪರೀಕ್ಷಿಸಿದನು. ಆರು ವರ್ಷದ ಮಕ್ಕಳಲ್ಲಿ ಒಂದು ಪ್ರಶ್ನೆಯನ್ನು ಬಹಳ ಹುಡುಗರು, ಐದು ವರ್ಷದವರಲ್ಲಿ ಕಡಮೆ ಹುಡುಗರು ಬಿಡಿಸಿದರೆ ಆ ಪ್ರಶ್ನೆಯು ಆರು ವರ್ಷದವರಿಗೆ ಯೋಗ್ಯವಾದುದೆಂದು ನಿರ್ಧರಿಸಿದನು. ಹೀಗೆ ಪ್ರತಿಯೊಂದು ವಯಸ್ಸಿಗೆ ಸಂಬಂಧಿಸಿದ ಪ್ರಶ್ನೆಮಾಲಿಕೆಯನ್ನು ಅವನು ತಯಾರಿಸಿದನು ಇದರ ಮೇಲಿಂದ 'ಬುದ್ಧಿ-ವಯ' (Mental Age) ದ ಕಲ್ಪನೆಯನ್ನು ತಂದುಕೊಟ್ಟನು. ಮಗುವು ಯಾವ ವಯಸ್ಸಿನ ಪ್ರಶ್ನೆಗಳನ್ನು ಬಿಡಿಸುತ್ತಾನೊ ಅದು ಅವನ 'ಬುದ್ಧಿ-ವಯ'ವು. ಒಬ್ಬ ಬಾಲಕನು ಹತ್ತು ವರ್ಷದ ಪ್ರಶ್ನೆಗಳನ್ನು ಬಿಡಿಸಿದರೆ ಅವನ ಬುದ್ಧಿ-ವಯ ಹತ್ತು; ಆದರೆ ಅವನು ಎಂಟು ವರ್ಷದ ಮೇಲಿನ ಪ್ರಶ್ನೆಗಳಿಗೆ ಉತ್ತರಕೊಡಲು ಅಸಮರ್ಥನಾದರೆ ಅವನ ಬುದ್ಧಿ-ವಯವು ಎಂಟಾಗುತ್ತದೆ. ಅದರಂತೆ ಅವನು ತನ್ನ 'ಕಾಲ-ವಯ' (Chronological Age) ಕ್ಕಿಂತ ಹೆಚ್ಚಿನ ವಯದ ಪ್ರಶ್ನೆಗಳನ್ನು ಬಿಡಿಸಿದರೆ ಅವನ 'ಬುದ್ಧಿ-ವಯ'ವು ಹೆಚ್ಚಾಗುತ್ತದೆ. 'ಬುದ್ಧಿ-ವಯ'ವು 'ಕಾಲ-ವಯ' ಕ್ಕಿಂತ ಹೆಚ್ಚು ಇದ್ದಲ್ಲಿ ಮಗುವು ಜಾಣನೆಂದೂ ಕಡಮೆಯಿದ್ದಲ್ಲಿ ದಡ್ಡನೆಂದೂ ನಿರ್ಧರಿಸಬಹುದು. ಎಂಟು ವರ್ಷಕ್ಕೆ ಮೇಲ್ಪಟ್ಟ ಹುಡುಗರಲ್ಲಿ ಬುದ್ಧಿ-ವಯವು ಅವರ ಕಾಲ-ವಯಕ್ಕಿಂತ ಮೂರು ವರ್ಷ ಕಡಿಮೆಯಿದ್ದರೆ, ಎಂಟು ವರ್ಷಕ್ಕಿಂತ ಕಡಮೆ ವಯಸ್ಸಿನ ಹುಡುಗರಲ್ಲಿ ಬುದ್ಧಿ-ವಯವು ಎರಡು

ವರ್ಷ ಕಡಮೆಯಿದ್ದರೆ ಅದು ಬುದ್ಧಿಮಾಂದ್ಯದ ಲಕ್ಷಣವೆಂದು ಬೀನೆ ಅವರ ಅಭಿಪ್ರಾಯವಾಗಿತ್ತು.

ಬೇರೆ ಬೇರೆ ದೇಶಗಳ ಪಂಡಿತರು ಬೀನೆ ಅವರ ಪ್ರಶ್ನೆಮಾಲಿಕೆಯನ್ನು ಪರೀಕ್ಷಿಸಿ ತಮ್ಮ ದೇಶದ ಪರಿಸ್ಥಿತಿಗೆ ಹೊಂದಿಕೆಯಾಗುವಂತೆ ತಿದ್ದಿಕೊಂಡಿರುವರು. ಅಮೇರಿಕೆಯಲ್ಲಿ ಸ್ಟ್ಯಾನ್‌ಫೋರ್ಡ್ ಯುನಿವರ್ಸಿಟಿಯ ಪ್ರೊಫೆಸರರಾದ ಎಲ್. ಎಮ್. ಟರ್ಮನ್ ಎಂಬವರು ಅದನ್ನು ಅತ್ಯಂತ ಪರಿಶುದ್ಧಗೊಳಿಸಿ ಎಲ್ಲ ದೇಶಗಳಿಗೂ ಉಪಯೋಗ ಬೀಳುವಂತೆ ಒಂದು ಪ್ರಮಾಣಕ್ಕೆ ತಂದರು. ಇದಕ್ಕೆ "ಸ್ಟ್ಯಾನ್-ಫೋರ್ಡ್ ಪರಿಷ್ಕರಣ" ಎನ್ನುವರು. ಇತ್ತೀಚೆಗಾಗಿ ಈ ಸ್ಟಾನ್ಫೋರ್ಡ್ ಸ್ಕೇಲನ್ನು ಉಪಯೋಗಿಸುವವರು ಬಹಳ. ಸ್ಕೇಲಿನ ಪ್ರತಿಯೊಂದು ಪ್ರಶ್ನೆಗೆ ವಯಸ್ಸಿನ ಬೆಲೆಯುಂಟು. ಎಂದರೆ ಮೂರರಿಂದ ಹತ್ತು ವರ್ಷದ ಪ್ರಶ್ನೆಗಳಲ್ಲಿ ಬಿಡಿಸಿದ ಪ್ರತಿಯೊಂದು ಪ್ರಶ್ನೆಗೆ ಎರಡು ತಿಂಗಳ ಗುಣಗಳು ಸಿಕ್ಕುವುವು; ಹನ್ನೆರಡು ವರ್ಷದ ಪ್ರಶ್ನೆಗೆ ಮೂರು ತಿಂಗಳ, ಹದಿನಾಲ್ಕು ವರ್ಷದ ಪ್ರಶ್ನೆಗೆ ನಾಲ್ಕು ತಿಂಗಳ, ಹದಿನಾರು ವರ್ಷದ ಪ್ರಶ್ನೆಗೆ ಐದು ತಿಂಗಳ, ಇಪ್ಪತ್ತೆರಡು ವರ್ಷದ ಪ್ರಶ್ನೆಗೆ ಆರು ತಿಂಗಳ ಗುಣಗಳು ಸಿಕ್ಕುವುವು. ಉದಾಹರಣೆಗಾಗಿ ಹನ್ನೆರಡು ವರ್ಷದ ಒಬ್ಬ ಹುಡುಗನು ಹತ್ತನೆಯ ವರ್ಷದ ಎಲ್ಲ ಪ್ರಶ್ನೆಗಳನ್ನು, ಹನ್ನೆರಡನೆಯ ವರ್ಷದ ಐದು ಪ್ರಶ್ನೆಗಳನ್ನು, ಹದಿನಾಲ್ಕನೆಯ ವರ್ಷದ ಎರಡು ಪ್ರಶ್ನೆಗಳನ್ನು ಬಿಡಿಸಿದರೆ ಅವನ 'ಬುದ್ಧಿ-ವಯ'ವು ೧೦ ವರ್ಷ + ೧೫ ತಿಂಗಳ + ೮ ತಿಂಗಳ ಅಥವಾ ೧೧ ವರ್ಷ, ೧೧ ತಿಂಗಳು ಆಗುವುದು. * ಒಬ್ಬ ವ್ಯಕ್ತಿಯ ಬುದ್ಧಿಸಾಮರ್ಥ್ಯವನ್ನು ತಿಳಿಯಬೇಕಾದರೆ ಅವನ 'ಬುದ್ಧಿ-ವಯ' ಮತ್ತು 'ಕಾಲ-ವಯ' ಇವುಗಳಲ್ಲಿಯ ಪ್ರಮಾಣವನ್ನು ತೆಗೆಯಬೇಕೆಂದು ಟರ್ಮನ್‌ನು ಪ್ರಸಿದ್ಧಮಾಡಿದನು. ಈ ಪ್ರಮಾಣಕ್ಕೆ ೧೦೦ರಿಂದ ಗುಣಿಸಿದರೆ 'ಬುದ್ಧಿಮಾನ' (Intelligence Quotient) ವು ಬರುವುದು:—

$$\text{ಬುದ್ಧಿಮಾನ} = \frac{\text{ಬುದ್ಧಿ–ವಯ}}{\text{ಕಾಲ–ವಯ}} \times ೧೦೦$$

* ಡಾ॥ ಕಾಮತ ಅವರ "ಹಿಂದಿ ಹುಡುಗರ ಬುದ್ಧಿಮಾಪನವು," ಪುಟ ೧೪—೧೬, ನೋಡಿ.

ಟರ್ಮನ್‌ನು ಹುಡುಗರನ್ನು ಅವರವರ ಬುದ್ಧಿಮಾನದ ಪ್ರಕಾರ ಕೆಳಗೆ ಕಾಣಿಸಿದಂತೆ ವರ್ಗೀಕರಿಸುತ್ತಾನೆ:—

| ವರ್ಗ | ಬುದ್ಧಿಮಾನ ( I. Q. ) |
|---|---|
| ಮೇಧಾವಿಯ ಸಮೀಪ ಅಥವಾ ಮೇಧಾವಿ . . | ೧೪೦ ರ ಮೇಲೆ |
| ಅತಿ ಶ್ರೇಷ್ಠಬುದ್ಧಿ . . . . . | ೧೨೦—೧೪೦ |
| ಶ್ರೇಷ್ಠಬುದ್ಧಿ . . . . . | ೧೧೦—೧೨೦ |
| ಸಾಮಾನ್ಯ ಅಥವಾ ಸಾಧಾರಣಬುದ್ಧಿ . . | ೯೦—೧೧೦ |
| ಮಂದಬುದ್ಧಿ . . . . . | ೮೦— ೯೦ |
| ನ್ಯೂನಬುದ್ಧಿ . . . . . | ೭೦— ೮೦ |
| ದುರ್ಬಲಬುದ್ಧಿ . . . . . | ೭೦ಕ್ಕಿಂತ ಕೆಳಗೆ |

ಮಕ್ಕಳ ಬುದ್ಧಿಮಾನವು ೭೦ಕ್ಕಿಂತ ಕೆಳಗೆ ಇದ್ದರೆ ಅದು ಬುದ್ಧಿಯ ಅಪೂರ್ಣತೆಯ ಲಕ್ಷಣವೆಂದು ಟರ್ಮನ್‌ನು ಭಾವಿಸುತ್ತಾನೆ. ಅಂಥವರಿಗೆ ಸಾಲೆಯಲ್ಲಿ ವಿಶೇಷ (Special) ವರ್ಗಗಳನ್ನು ತೆರೆಯಬೇಕಾಗುವುದು.

ಇಂಗ್ಲಂಡದಲ್ಲಿ ಡಾ|| ಬರ್ಟ್‌ನು ಬೀನೆ ಅವರ ಪರೀಕ್ಷಣಗಳನ್ನು ಅಲ್ಲಿಯ ಹುಡುಗರಿಗೆ ಸರಿಯಾಗುವಂತೆ ತಿದ್ದಿ ಇಂಗ್ಲೀಷಿನಲ್ಲಿ ಭಾಷಾಂತರಿಸಿರುವನು. ಮಗುವಿನ ಬುದ್ಧಿ-ವಯವು ಅವನ ಕಾಲ-ವಯಕ್ಕಿಂತ ೧೫% ಕಡಿಮೆಯಿದ್ದರೆ ಅದು ಮಂದಬುದ್ಧಿಯ ಲಕ್ಷಣವೆಂದು ಅವನ ಅಭಿಪ್ರಾಯ. ಟರ್ಮನ್‌ನ ಸಿದ್ಧಾಂತವಾದರೂ ಇದೇ.

ಕರ್ನಾಟಕದಲ್ಲಿ ಡಾ|| ವ್ಹಿ. ವ್ಹಿ. ಕಾಮತ ಅವರು ಈ ಕಾರ್ಯವನ್ನು ಮೊತ್ತಮೊದಲು ಕೈಕೊಂಡರು. ಅವರು ಬೀನೆ ಮತ್ತು ಸ್ಟ್ಯಾನ್‌ಫೋರ್ಡ್ ಸ್ಕೇಲನ್ನು ಹಿಂದುಸ್ತಾನದ ಪರಿಸ್ಥಿತಿಗೆ ಅನ್ವಯಿಸುವಂತೆ ಪರಿಷ್ಕರಿಸಿರುವರು. ಅದನ್ನು ಅವರು "ಬಾಂಬೇ-ಕರ್ನಾಟಕ ಪರಿಷ್ಕರಣ" ಎಂದು ಕರೆಯುತ್ತಾರೆ. ಅವರು ಧಾರವಾಡದಲ್ಲಿ ಈ ಪ್ರಯೋಗವನ್ನು ನಡೆಯಿಸಿ ೧೦೭೪ ಹುಡುಗ, ಹುಡುಗೆಯರ ಪರೀಕ್ಷೆಮಾಡಿ ತಮ್ಮ ಪ್ರಶ್ನೆಗಳ ಸ್ಕೇಲನ್ನು ಸಿದ್ಧಮಾಡಿರುವರು. ಇದು "ಹಿಂದೀ ಹುಡುಗರ ಬುದ್ಧಿಮಾಪನ"ವು ಎಂಬ ಪುಸ್ತಕ ರೂಪದಲ್ಲಿ

ಪ್ರಕಟವಾಗಿರುವುದು. ಡಾ॥ ಶಾಮತ ಅವರು ಮಕ್ಕಳ ಬುದ್ಧಿಮಾನದಲ್ಲಿ ಐದು ಪ್ರಕಾರಗಳನ್ನು ಕಲ್ಪಿಸುತ್ತಾರೆ:—ಅತಿ ಹಿಂದುಳಿದ ಮತ್ತು ಹಿಂದುಳಿವ ಮಕ್ಕಳ ಬುದ್ಧಿಮಾನ ೭೦—೮೯; ಸಾಮಾನ್ಯ ಮಕ್ಕಳ ಬುದ್ಧಿಮಾನ ೯೦—೧೦೯; ಶ್ರೇಷ್ಠ ಮತ್ತು ಅತಿ ಶ್ರೇಷ್ಠ ಮಕ್ಕಳ ಬುದ್ಧಿಮಾನ ೧೧೦—೧೩೯; ಅಸಾಧಾರಣ ಮಕ್ಕಳ ಬುದ್ಧಿಮಾನ ೧೪೦—೧೭೯; ಮತ್ತು ಮೇಧಾವಿಗಳ ಬುದ್ಧಿಮಾನ ೧೮೦ ಮತ್ತು ಇದಕ್ಕಿಂತ ಹೆಚ್ಚು. ಹಿಂದುಳಿದ ಮಕ್ಕಳಿಗಾಗಿ ಸ್ಪೆಶಲ್ ವರ್ಗಗಳನ್ನು ಏರ್ಪಡಿಸಿ ಶಿಕ್ಷಣವನ್ನು ಕೊಡಬೇಕೆಂದು ಇವರಾದರೂ ಅಭಿಪ್ರಾಯಪಡುತ್ತಾರೆ.

ಬೀನೆ ಮತ್ತು ಟರ್ಮನ್ ಅವರ ಪರೀಕ್ಷಣಗಳು ವ್ಯಕ್ತಿಪರೀಕ್ಷೆಗಳು. ಅಂದರೆ ಪರೀಕ್ಷಕನು ಹುಡುಗರನ್ನು ಒಬ್ಬೊಬ್ಬರನ್ನಾಗಿ ಬಾಯಿ ಮಾತಿನ ಪ್ರಶ್ನೆಗಳಿಂದ ಪರೀಕ್ಷಿಸಬೇಕಾಗುತ್ತದೆ ಒಬ್ಬನನ್ನು ಪರೀಕ್ಷಿಸಲಿಕ್ಕೆ ಸುಮಾರು ಒಂದು ಗಂಟೆ ವೇಳೆಯಾದರೂ ಬೇಕಾಗುತ್ತದೆ ಆದುದರಿಂದ ಅನೇಕರನ್ನು ಒಮ್ಮೆಲೆ ಪರೀಕ್ಷಿಸುವ ಸಮೂಹ ಪರೀಕ್ಷಣಗಳು ( Group Tests ) ಬಳಕೆಯಲ್ಲಿ ಬಂದವು. ಕಳೆದ ಮಹಾಯುದ್ಧದ ಸಮಯದಲ್ಲಿ ಅಮೇರಿಕೆಯ ಮನಶ್ಶಾಸ್ತ್ರಜ್ಞರು ಸೈನ್ಯದ ವಿವಿಧ ಅಧಿಕಾರಿಗಳನ್ನು ಆರಿಸಲಿಕ್ಕೆ ಇಂತಹ ಸಾಮೂಹಿಕ ಪರೀಕ್ಷಣಗಳನ್ನು ಕಂಡುಹಿಡಿದರು. "ಸಮೂಹ ಪರೀಕ್ಷಣಗಳು" ಎಂಬ ಚಿಕ್ಕ ಪುಸ್ತಕದಲ್ಲಿ ಅವು ಪ್ರಕಟವಾಗಿವೆ. ಅದರಲ್ಲಿ ಅನೇಕ ಚಿಕ್ಕಪುಟ್ಟ ಪ್ರಶ್ನೆಗಳು ಇರುತ್ತವೆ. ವಿದ್ಯಾರ್ಥಿಯು ಅಥವಾ ಉಮೇದುವಾರನು ಉತ್ತರಗಳನ್ನು ಆ ಪುಸ್ತಕದಲ್ಲಿಯೆ ತುಂಬಬೇಕಾಗುತ್ತದೆ. ಇಂಗ್ಲಂಡದಲ್ಲಿ ಈ ಸಾಮೂಹಿಕ ಪರೀಕ್ಷಣಗಳನ್ನು ವಿದ್ಯಾರ್ಥಿವೇತನ ಪರೀಕ್ಷೆಯ ಸಮಯದಲ್ಲಿಯೂ ಪ್ರಾಥಮಿಕ ಶಾಲೆಗಳಿಂದ ಮಾಧ್ಯಮಿಕ ಶಾಲೆಗೆ ವಿದ್ಯಾರ್ಥಿಗಳನ್ನು ಆರಿಸುವಾಗಲೂ ಉಪಯೋಗಿಸುತ್ತಾರೆ. ಅಮೇರಿಕೆಯಲ್ಲಿ ಕಾಲೇಜಕ್ಕೆ ಪ್ರವೇಶವು ದೊರೆಯಬೇಕಾದರೆ ಇಂತಹ ಸಾಮೂಹಿಕ ಪರೀಕ್ಷಣಗಳ ಪರೀಕ್ಷೆಯನ್ನು ಕಟ್ಟಬೇಕಾಗುತ್ತದೆ. ಹಿಂದುಸ್ತಾನದಲ್ಲೂ ಇವು ಇತ್ತಿತ್ತಲಾಗಿ ರೂಢಿಯಲ್ಲಿ ಬಂದಿವೆ. ಸಾಮೂಹಿಕ ಪರೀಕ್ಷೆಯು ಅಲ್ಪಾವಧಿಯಲ್ಲಿಯೂ ಸುಲಭವಾಗಿಯೂ ನಡೆಯುವುದರಿಂದ ಸಾಮಾನ್ಯವಾಗಿ ಬುದ್ಧಿಪರೀಕ್ಷೆಯಲ್ಲಿ ಇದನು ಉಪಯೋಗಿಸುವುದೇ ಬಹಳ. ಸಾಮೂಹಿಕ ಪರೀಕ್ಷಣಗಳಲ್ಲದೆ

ಕಾರ್ಯ-ಪರೀಕ್ಷಣಗಳೂ ಉಂಟು. ಓದು-ಬರೆಹ ಬಾರದ ಚಿಕ್ಕಮಕ್ಕಳಿಗೆ ಅವು ಉಪಯೋಗವಾಗುತ್ತವೆ. ಇಲ್ಲಿ ಭಾಷೆಯ ತೊಡಕೇ ಇರುವುದಿಲ್ಲ.

ಬುದ್ಧಿ ಪರೀಕ್ಷಣಗಳು ಬುದ್ಧಿ ಶಕ್ತಿಯೊಂದನ್ನೇ ಅಳೆಯಬಲ್ಲವು. ಆದರೆ ಮನುಷ್ಯನಲ್ಲಿ ಇತರ ಅಂತಃಶಕ್ತಿಗಳೂ ಉಂಟು. ಅವನ ಶೀಲ-ಸ್ವಭಾವವನ್ನು ಅಳೆಯುವುದು ಬುದ್ಧಿ ಪರೀಕ್ಷಣಗಳಿಂದ ಸಾಧ್ಯವಿಲ್ಲ. ಅದು ಬಿಕ್ಕಟ್ಟಿನ ಕೆಲಸ. ಆದರೂ ಆ ಮಾರ್ಗದಲ್ಲಿ ಅನೇಕ ಪ್ರಯತ್ನಗಳು ನಡೆದಿವೆ. ಒಡನಾಡಿಗಳ ಅಭಿಪ್ರಾಯ ಮತ್ತು ಸಂದರ್ಶನಗಳಿಂದ ಸ್ವಭಾವವನ್ನು ತಿಳಿದುಕೊಳ್ಳುವುದು ತುಸುಮಟ್ಟಿಗೆ ಸಾಧ್ಯವಿದೆ. ಡಾ|| ಇ. ವೆಬ್ ಎಂಬವನು " ಮನುಷ್ಯನ ಗುಣವು ಅವನಲ್ಲಿರುವ 'ಉದ್ದೇಶಗಳ ಸ್ಥಿರತೆ'ಯನ್ನು ಅವಲಂಬಿಸಿರುತ್ತದೆ " ಎಂದು ಹೇಳುತ್ತಾನೆ. ಡಾ|| ಸಿ. ಜಿ. ಯೂಂಗ್ ಎಂಬ ಮನಶ್ಶಾಸ್ತ್ರಜ್ಞನು 'ಶಬ್ದ ಸಂಬಂಧ ಪದ್ಧತಿ'ಯನ್ನು ಯೋಜಿಸಿರುವನು; ಒಬ್ಬ ವ್ಯಕ್ತಿಗೆ ಕೆಲವು ಪ್ರೇರಕ ಶಬ್ದಗಳನ್ನು ಹೇಳಿ, ಅವಕ್ಕೆ ಪ್ರತಿಯಾಗಿ ಅವನ ಮನಸ್ಸಿನಲ್ಲಿ ಕೂಡಲೇ ಹೊಳೆದ ಶಬ್ದಗಳ ಮೇಲಿಂದ ಅವನ ಮನೋಭಾವವನ್ನು ತಿಳಿಯಲು ಬರುವುದೆಂದು ಅವನು ಹೇಳುತ್ತಾನೆ. ಯೂಂಗ್‌ನು ಮಾನವ ವರ್ಗದಲ್ಲಿ ' ಅಂತರ್ಮುಖರು ' ' ಬಹಿರ್ಮುಖರು ' ಎಂಬ ಎರಡು ಭಾಗಗಳನ್ನು ಮಾಡುತ್ತಾನೆ. ಅಂತರ್ಮುಖನು ಸ್ವಾನುಭವವನ್ನು ವಿಚಾರಿಸುವನು, ಆದರೆ ಬಾಹ್ಯಜಗತ್ತಿನ ವಸ್ತುಗಳಲ್ಲಿ ಆಸಕ್ತಿಯನ್ನು ತೋರನು. ಬಹಿರ್ಮುಖನು ಸ್ಥೂಲವಸ್ತುಗಳನ್ನು ಗಮನಕ್ಕೆ ತರುವನು; ಮತ್ತು ಪರಿಸ್ಥಿತಿಗೆ ಅನುಕೂಲವಾಗಿ ನಡೆಯುವನು. ಆದರೆ ವ್ಯಕ್ತಿನಿಷ್ಠವಾದ ಅಂತರ್ಗತ ಅನುಭವದಲ್ಲಿ ಅವನು ಮಗ್ನನಾಗನು. ನಮ್ಮ ಗೆಳೆಯರಲ್ಲಿ ಎರಡೂ ಪ್ರಕಾರದವರು ದೊರೆಯುತ್ತಾರೆ. ಒಬ್ಬನಲ್ಲಿ ಅಂತರ್ಮುಖ ವೃತ್ತಿಯು ಪ್ರಬಲವಿದ್ದರೆ, ಇನ್ನೊಬ್ಬನಲ್ಲಿ ಬಹಿರ್ಮುಖ ವೃತ್ತಿಯು ಪ್ರಬಲವಿರುತ್ತದೆ. " ಪೌರ್ವಾತ್ಯರು ಪೌರ್ವಾತ್ಯರೇ, ಪಾಶ್ಚಾತ್ಯರು ಪಾಶ್ಚಾತ್ಯರೇ. ಅವರು ಎಂದೂ ಒಂದಾಗಲಾರರು " ಎಂದು ಕಿಪ್ಲಿಂಗ್ ಎಂಬ ಗ್ರಂಥಕಾರನು ಹೇಳುವ ಮಾತಿನಲ್ಲಿ ಈ ತತ್ವವು ಅಡಕವಾಗಿದೆ. ಅಂತರ್ಮುಖ ಮತ್ತು ಬಹಿರ್ಮುಖ ಎಂಬ ಅತ್ಯಂತ ವಿರೋಧವಾದ, ವಿಷಮವಾದ ವೃತ್ತಿಗಳನ್ನು ಯೋಗ್ಯ ಶಿಕ್ಷಣ ಪದ್ಧತಿಯಿಂದ ತಡೆಯಬೇಕು.

**ಬುದ್ಧಿ-ಪರೀಕ್ಷಣಗಳ ಉಪಯೋಗ.—** ಬುದ್ಧಿ-ಪರೀಕ್ಷೆಯಿಂದ ಕೆಲವು ಸಿದ್ಧಾಂತಗಳು ಹೊರಡುತ್ತವೆ:— (೧) ಬುದ್ಧಿಶಕ್ತಿಯು ಬೇರೆ ಬೇರೆ ವ್ಯಕ್ತಿಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಇರುತ್ತದೆ. ಈ ವ್ಯತ್ಯಾಸವು ಮಹತ್ವವಾದುದರಿಂದ ಅಲಕ್ಷಿಸಲು ಬರುವಂತಿಲ್ಲ. (೨) ಬುದ್ಧಿಮಾನವು ಸಾಲೆಯ ಶಿಕ್ಷಣದಿಂದ ನಿರ್ಲಿಪ್ತವಿದ್ದಂತೆ ತೋರುತ್ತದೆ. ಪ್ರತಿಯೊಬ್ಬನಲ್ಲೂ ಅದು ಅಷ್ಟೇ ಉಳಿಯುತ್ತದೆ. (೩) ಬುದ್ಧಿ-ವಯವು ಹದಿನಾರನೆಯ ವರ್ಷದ ನಂತರ ಸಾಮಾನ್ಯವಾಗಿ ಬೆಳೆಯುವುದಿಲ್ಲ. (೪) ಸ್ತ್ರೀಯರು ಪುರುಷರಷ್ಟೇ ಬುದ್ಧಿವಂತೆಯರು ಇರುತ್ತಾರೆ.

ಬುದ್ಧಿಮಾಪನದ ಈ ಸಿದ್ಧಾಂತಗಳನ್ನು ಅನುಲಕ್ಷಿಸಿ ಸಾಲೆಯ ಶಿಕ್ಷಣಕ್ರಮದಲ್ಲಿ ಯೋಗ್ಯವಾದ ಪದ್ಧತಿಯು ಯಾವುದೆಂಬುದನ್ನು ಈಗ ವಿಚಾರಿಸುವ. ವಿದ್ಯಾರ್ಥಿಗಳ ವರ್ಗೀಕರಣದಲ್ಲಿ ಬುದ್ಧಿಪರೀಕ್ಷಣಗಳ ಉಪಯೋಗವು ನಮಗೆ ಹೆಚ್ಚಾಗಿ ಆಗುವುದು. ಸಾಮಾನ್ಯವಾಗಿ ಒಂದೇ ಬದ್ಧಿ-ವಯದವರನ್ನು ಒಂದು ವರ್ಗದಲ್ಲಿಡುವುದು ಒಳಿತು. ಆದರೆ ಕಡಮೆ ವಯಸ್ಸಿನವರೂ ಹೆಚ್ಚು ವಯಸ್ಸಿನವರೂ ಇಲ್ಲಿ ಒಟ್ಟಾಗಿರಬಹುದು. ಇದರಿಂದ ಮಕ್ಕಳಲ್ಲಿ ಉಚ್ಚ ನೀಚ ಭಾವನೆಗಳು ಹುಟ್ಟಿ ಅಹಿತ ಪರಿಣಾಮವಾಗುವ ಸಂಭವವುಂಟು. ಆದ್ದರಿಂದ ಮತ್ತೆ ಅದೇ ವರ್ಗದಲ್ಲಿ ಕಾಲ-ವಯಕ್ಕೆ ತಕ್ಕಂತೆ ಪ್ರಭೇದಗಳನ್ನು ಮಾಡಬಹುದು. ಅಮೇರಿಕೆಯ ಅನೇಕ ಸಾಲೆಗಳಲ್ಲಿ ಈ ತರದ ವರ್ಗ-ವ್ಯವಸ್ಥೆಯುಂಟು. ಅಲ್ಲಿ ಉತ್ತಮ ಬುದ್ಧಿಯುಳ್ಳವರು, ಮಧ್ಯಮ ಬುದ್ಧಿಯುಳ್ಳವರು, ಕನಿಷ್ಟ ಬುದ್ಧಿಯುಳ್ಳವರು ಹೀಗೆ ಮೂರು ವರ್ಗಗಳನ್ನು ಮಾಡುತ್ತಾರೆ. ಆದರೆ ಈ ಪದ್ಧತಿಯಲ್ಲಿ ಒಂದು ದೋಷವು ಕಂಡುಬರುವುದು. ಶಿಕ್ಷಕರು ಜಾಣರನ್ನು ಅಲಕ್ಷಿಸುವ ಸಂಭವವಿರುವುದರಿಂದ ಅವರು ಆಲಸಿಗಳಾಗಬಹುದು. ಆದುದರಿಂದ ಒಂದೇ ವಯಸ್ಸಿನ ಹುಡುಗರನ್ನು ಅದೇ ವರ್ಗದಲ್ಲಿಟ್ಟು ಅವರವರ ಯೋಗ್ಯತಾನುಸಾರ ವಿಷಯಗಳನ್ನು ಹೇಳಿಕೊಡಬೇಕು ಎಂದು ಬಹುಜನ ಪಂಡಿತರು ಪ್ರತಿಪಾದಿಸುತ್ತಾರೆ. ಎಂದರೆ ಅಭ್ಯಾಸಪತ್ರಿಕೆಯಲ್ಲಿ ಹೆಚ್ಚು ವಿಷಯಗಳನ್ನು ಸೇರಿಸಿ ಒಂದೇ ವರ್ಗದ ಜಾಣ ಹುಡುಗರಿಗೆ ಹೆಚ್ಚು ಸಂಗತಿಗಳನ್ನೂ ಹೆಚ್ಚು ಪುಸ್ತಕಗಳನ್ನೂ ಮಂದಬುದ್ಧಿಯ ಹುಡುಗರಿಗೆ ಕಡಮೆ ವಿಷಯಗಳನ್ನೂ ಕಲಿಸಬೇಕು. ಈ ಯೋಜನೆಯನ್ನು ಹಿಂದುಸ್ಥಾನದ

ಸಾಲೆಗಳಲ್ಲಿ ಇಟ್ಟುಕೊಳ್ಳುವುದು ವಿಹಿತವೆಂದು ತೋರುತ್ತದೆ ಈಗ ನಮ್ಮಲ್ಲಿ ಒಂದು ವರ್ಷಕ್ಕೆ ಒಂದು ಇಯತ್ತೆ (ತರಗತಿ) ಹೀಗೆ ಪರಿಪಾಠವಿದೆ. ಆದರೆ ಅದರ ಜೊತೆಗೆ ಪ್ರತಿಯೊಂದು ಇಯತ್ತೆಯ ಅಭ್ಯಾಸವನ್ನು ಬುದ್ಧಿಮಾನದ ಪ್ರಕಾರ ಹೆಚ್ಚುಕಡಮೆಯಾಗಿ ಹಂಚುವುದು ಯೋಗ್ಯವೆಂದು ಕಾಣುತ್ತದೆ. ಮತ್ತು ವಿದ್ಯಾರ್ಥಿಗಳನ್ನು ಅವರ ಪ್ರಗತಿಯ ಮೇಲಿಂದ ವರ್ಗದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಬದಲಾಯಿಸುವ ಅನುಕೂಲತೆಯೂ ಇರಬೇಕು.

ಎರಡನೆಯದಾಗಿ ಆಧುನಿಕ ಶಾಸ್ತ್ರಜ್ಞರು ಬೋಧನಕ್ರಮದಲ್ಲಿ ವೈಯಕ್ತಿಕ ಪದ್ಧತಿಯನ್ನು ಸಮರ್ಥಿಸುತ್ತಾರೆ. ಒಂದೇ ವಯಸ್ಸಿನ ಮಕ್ಕಳಲ್ಲಿ ಕಂಡುಬರುವ ಬುದ್ಧಿಶಕ್ತಿಯ ತಾರತಮ್ಯವು ಇದನ್ನು ಪುಷ್ಟೀಕರಿಸುತ್ತದೆ. ವಿಷಯಗಳನ್ನೂ ಶಿಕ್ಷಣಪದ್ಧತಿಗಳನ್ನೂ ಮಗುವಿನ ಬುದ್ಧಿಯ ಮಾನಕ್ಕೆ ಅನುಗುಣವಾಗಿ ಹೊಂದಿಸಿಕೊಳ್ಳಬೇಕೆಂದು ಅವರ ಅಭಿಪ್ರಾಯ. 'ಒಬ್ಬರು ಇನ್ನೊಬ್ಬರಂತೆ ಇರುವುದಿಲ್ಲ' ಎಂಬ ತತ್ವದ ಆಧಾರದ ಮೇಲೆಯೇ ಮಾಂಟೇಸರಿ ಮತ್ತು ಡಾಲ್ಟನ್ ಪದ್ಧತಿಗಳು ರಚಿತ ವಾಗಿವೆ ಶಿಕ್ಷಕನು ಪ್ರತಿಯೊಬ್ಬ ವಿದ್ಯಾರ್ಥಿಗೆ ಸಾಕಷ್ಟು ಲಕ್ಷ್ಯವನ್ನು ಪೂರೈಸಬೇಕಾದರೆ ಅವನ ನೇತೃತ್ವದಲ್ಲಿದ್ದ ವರ್ಗವು ಆದಷ್ಟು ಚಿಕ್ಕದಾಗಿರ ಬೇಕು. ವರ್ಗಪದ್ಧತಿಯನ್ನು ನಿರ್ಮೂಲಮಾಡಬೇಕೆಂದೂ ವೈಯಕ್ತಿಕ ಬೋಧನಕ್ರಮವನ್ನೇ ಅನುಸರಿಸಬೇಕೆಂದೂ ಕೆಲವು ಅತ್ಯುತ್ಸಾಹಿ ಶಿಕ್ಷಣ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಆದರೆ ಆರ್ಥಿಕ ದೃಷ್ಟಿಯಿಂದ ನೋಡಿ ದರೆ ಇದು ವ್ಯವಹಾರದಲ್ಲಿ ಬರುವುದು ಅಸಂಭವದ ಮಾತಾಗಿದೆ. ಇದಲ್ಲದೆ ವೈಯಕ್ತಿಕ ಬೋಧೆಯು ಮುಖ್ಯವಾದರೂ ಮಾರ್ಗವನ್ನು ನಾಶಮಾಡಬೇಕಾ ಗಿಲ್ಲ. ವರ್ಗಪದ್ಧತಿಯು ಮಹತ್ವದ್ದೆಂಬುದಕ್ಕೆ ಸಂಘಮನಶ್ಶಾಸ್ತ್ರದ ಆಧಾರ ವುಂಟು. ಅನುಕರಣ, ಸಹಾನುಭೂತಿ ಮತ್ತು ಸೂಚನೆ ಈ ವೃತ್ತಿಗಳು ಸಂಘಜೀವನದಲ್ಲಿ ಮಾತ್ರ ವ್ಯವಹರಿಸುತ್ತವೆ. ಇವುಗಳನ್ನು ಸಾಲೆಯಲ್ಲಿ ಹೇಗೆ ಉಪಯೋಗಿಸಬೇಕೆಂಬುದನ್ನು ಆರನೆಯ ಪ್ರಕರಣದಲ್ಲಿ (ಪು. ೫೪-೬೦) ವಿವೇಚಿಸಿದ್ದಾಗಿದೆ. ವರ್ಗವು ಸಂಘಜೀವನವಾದುದರಿಂದ ಅದನ್ನು ನಾವು ಅನುಸರಿಸಲೇಬೇಕು. ಏಕೆಂದರೆ ಮಾನವನು ಸಂಘಜೀವಿಯು. ವರ್ಗದ

ಬಾಲಕರೆಲ್ಲರು ಒಂದಾಗಿ ಕೆಲಸಮಾಡುವ ಅನೇಕ ಪ್ರಸಂಗಗಳು ಬರುತ್ತವೆ. ವರ್ಗದ ವಿದ್ಯಾರ್ಥಿಗಳಲ್ಲಾಗಲಿ, ವರ್ಗ ವರ್ಗದಲ್ಲಿಯಾಗಲಿ, ಸಾಲೆ ಸಾಲೆಯಲ್ಲಾಗಲಿ, ಮೇಳ ಮೇಳದಲ್ಲಾಗಲಿ ಸಾತ್ವಿಕ ಸ್ಪರ್ಧೆಯನ್ನು ಪ್ರೋತ್ಸಾಹಿಸಲು ಬರುತ್ತದೆ. ವರ್ಗದ ಹಿರೇಮಣಿಯಿಂದ ಶಿಕ್ಷಕನು ಸಾಲೆಯ ಅನೇಕ ಕೆಲಸಗಳನ್ನು ಮಾಡಿಸಬಲ್ಲನು. ಶಿಕ್ಷಕನು ನಾಯಕರ ನಾಯಕನಾಗಿ ನಡೆದರೆ ಸಹಜವಾದ ಸಂಘಪ್ರವೃತ್ತಿಯನ್ನು ಸಾಲೆಯ ಮತ್ತು ಸಮಾಜದ ಕಲ್ಯಾಣಕ್ಕಾಗಿ ಉಪಯೋಗಿಸಬಹುದು. ಬಾಲಕರಲ್ಲಿ ವರ್ಗದ ಅಭಿಮಾನವನ್ನೂ ಸಾಲೆಯ ಅಭಿಮಾನವನ್ನೂ ಅಭಿವೃದ್ಧಿಗೊಳಿಸುವುದರಿಂದ ಸಾಲೆಯ ಪ್ರಗತಿಯಲ್ಲದೆ ವ್ಯಕ್ತಿಯ ಪ್ರಗತಿಯೂ ಆಗುವುದುಂಟು.

ಬೌದ್ಧಿಕ ಶಿಕ್ಷಣದಲ್ಲಿ ವೈಯಕ್ತಿಕ ಬೋಧನಕ್ರಮವನ್ನು ಉತ್ತಮ ರೀತಿಯಿಂದ ಸಾಗಿಸಬಹುದು. ಆದರೆ ವಿಶಾಲಾರ್ಥದ ಶಿಕ್ಷಣಕ್ಕೆ ಸಂಘಜೀವನದ ಉತ್ತೇಜನವು ಅವಶ್ಯವಾಗಿ ಬೇಕು. ಕೆಲವು ಪಾಠಗಳಿಗೆ ವರ್ಗವು ದೊಡ್ಡದಿದ್ದಷ್ಟೂ ಹೆಚ್ಚು ಪ್ರಯೋಜನ. ಉತ್ಸಾಹವನ್ನುಂಟುಮಾಡುವ ವಿಷಯದಲ್ಲಿ ಸಹಾನುಭೂತಿ, ಸೂಚನೆ ಮತ್ತು ಅನುಕರಣಗಳು ಸಹಾಯವಾಗುತ್ತವೆ. ಸಾಹಿತ್ಯ, ಸಂಗೀತ ಮತ್ತು ಕಲೆಯ ಪಾಠಗಳಲ್ಲಿ ಗುಣಗಾನ ನಡೆದಿರುವಾಗ ದೊಡ್ಡ ವರ್ಗವಿದ್ದರೆ ಅದಕ್ಕೆ ಕಳೆ ಬರುತ್ತದೆ. ಒಟ್ಟಿನ ಮೇಲೆ, ಬೌದ್ಧಿಕ ಶಿಕ್ಷಣದಲ್ಲಿ ವ್ಯಕ್ತಿಪದ್ಧತಿಯನ್ನೂ ನೈತಿಕ ಶಿಕ್ಷಣದಲ್ಲಿ ವರ್ಗಪದ್ಧತಿಯನ್ನೂ ಅನುಸರಿಸಬೇಕು.

ಮೂರನೆಯದಾಗಿ, ದುರ್ಬಲ ಮನದವರನ್ನೂ ಬುದ್ಧಿವಂತರನ್ನೂ ವಿಶಿಷ್ಟ ಸಾಮರ್ಥ್ಯವುಳ್ಳವರನ್ನೂ ಸಾಮರ್ಥ್ಯವಿಲ್ಲದವರನ್ನೂ ಕಂಡುಹಿಡಿಯಲಿಕ್ಕೆ ಬುದ್ಧಿಪರೀಕ್ಷಣಗಳು ಸಹಾಯವಾಗುತ್ತವೆ. ತಂದೆ ತಾಯ್ಗಳು ಮತ್ತು ಶಿಕ್ಷಕರು ಇಂಥವರಿಗೆ ಯೋಗ್ಯ ವ್ಯವಸ್ಥೆಯನ್ನು—ವಿಶಿಷ್ಟ ಸಂಸ್ಥೆಗಳ ಏರ್ಪಾಡನ್ನು—ಮಾಡಬೇಕಾಗುತ್ತದೆ.

ಕೊನೆಯದಾಗಿ, ಬಾಲಕನು ಬೆಳೆದು ದೊಡ್ಡವನಾದಾಗ ಯಾವ ಉದ್ಯೋಗವನ್ನು ಕೈಕೊಂಡರೆ ಅದರಲ್ಲಿ ಅವನು ಯಶಸ್ವಿಯಾಗುವನೆಂಬುದನ್ನು ಮೊದಲೇ ಹೇಳಲು ಬರುತ್ತದೆ. ಸಾಲೆ, ಕಾಲೇಜಿನ ಉಚ್ಚ ಶಿಕ್ಷಣ

ಪಡೆಯಲಿಕ್ಕೆ ವಿದ್ಯಾರ್ಥಿಯಲ್ಲಿ ಯೋಗ್ಯತೆಯು ಇದೆಯೊ ಇಲ್ಲವೊ ಎಂಬು ದನ್ನು ತಿಳಿದುಕೊಳ್ಳುವುದಕ್ಕೋಸ್ಕರ ಅಮೇರಿಕೆ, ಇಂಗ್ಲಂಡ ಮುಂತಾದ ದೇಶಗಳಲ್ಲಿ ಬುದ್ಧಿಪರೀಕ್ಷೆಯನ್ನು ಮಾಡಲಾಗುತ್ತದೆ. ವಿದ್ಯಾರ್ಥಿವೇತನ (ಸ್ಕಾಲರಶಿಪ್) ಪರೀಕ್ಷೆಯಲ್ಲಿ ಬುದ್ಧಿಪರೀಕ್ಷೆಯೂ ಒಂದು ವಿಷಯವಾಗಿದೆ. ಮಂದಮತಿಗಳು ಬುದ್ಧಿಯ ಅವಶ್ಯವಿಲ್ಲದ ಕೆಲಸಗಳಲ್ಲಿ ತೊಡಗುವುದು ವಿಹಿತವಾದುದು. ಮಕ್ಕಳಲ್ಲಿರುವ ಉದ್ಯೋಗ ಸಾಮರ್ಥ್ಯವನ್ನು ತಿಳಿದು ಕೊಳ್ಳಲಿಕ್ಕೆ "ವೃತ್ತಿಪರೀಕ್ಷಣ" (Vocational Tests) ಗಳನ್ನು ಉಪ ಯೋಗಿಸುತ್ತಾರೆ. ಆದರೆ ಆ ಪ್ರಯೋಗವು ಇನ್ನೂ ಯಶಸ್ವಿಯಾಗಿ ಸಾಗಿಲ್ಲ. ಬಾಲಕನ ಉದ್ಯೋಗಲಕ್ಷಣವನ್ನು ತಿಯಬೇಕಾದರೆ ಬುದ್ಧಿಪರೀಕ್ಷೆಯಲ್ಲದೆ ಅವನ ಆರೋಗ್ಯ, ಮನೋಭಾವ ಮತ್ತು ಅಭಿರುಚಿಯನ್ನು ನೋಡಬೇಕಾಗು ತ್ತದೆ. ಡಾ॥ ಕಾಮತ ಅವರ ಅಭಿಪ್ರಾಯದ ಪ್ರಕಾರ ಈಗಿನ ಪ್ರಾಥಮಿಕ ಸಾಲೆಯ ನಾಲ್ಕು ಇಯತ್ತೆಗಳ ವರೆಗೆ ವಿದ್ಯಾಭ್ಯಾಸವು ಕೆಲವು ಮಕ್ಕಳಿಗೆ ಸಾಕಂತೆ. ಆದರೆ ದೇಶದ ಹಿತದ ದೃಷ್ಟಿಯಿಂದ ನೋಡಿದರೆ ಈ ಅಲ್ಪ ಶಿಕ್ಷಣವು ಸಾಕಾಗದು. ಕೇವಲ ಸಾಕ್ಷರತೆಯು ಶಿಕ್ಷಣವಲ್ಲ. ಕೆಲವರಿಗೆ ಮಾಧ್ಯಮಿಕ ನಾಲ್ಕನೆಯ ಇಯತ್ತೆಯ ವರೆಗೆ ಶಿಕ್ಷಣವು ಸಾಕಂತೆ. ಆದರೆ ಬುದ್ಧಿಯ ಬೆಳವಣಿಗೆಯು ಸಾಮಾನ್ಯವಾಗಿ ಹದಿನಾರನೆಯ ವರ್ಷದ ವರೆಗೆ ಸಾಗುವುದ ರಿಂದ ಎಲ್ಲ ಮಕ್ಕಳಿಗೂ ಹದಿನಾರನೆಯ ವಯದ ವರೆಗೆ ಶಿಕ್ಷಣವು ಅವಶ್ಯ ವಾದುದೆಂದು ಹೇಳಬೇಕಾಗುತ್ತದೆ. ವೃತ್ತಿಶಿಕ್ಷಣವು ಪ್ರಾಥಮಿಕ ನಾಲ್ಕನೆಯ ಇಯತ್ತೆಯ ನಂತರವೇ ಪ್ರಾರಂಭವಾಗಬೇಕೆಂದು ಡಾ॥ ಕಾಮತ ಅವರ ಅಭಿಪ್ರಾಯವಾಗಿದೆ. ಆದರೆ ಇಷ್ಟು ಎಳೆಯ ವಯಸ್ಸಿನಲ್ಲಿ ಮಕ್ಕಳಿಗೆ ವೃತ್ತಿ ಶಿಕ್ಷಣವನ್ನು ಕೊಡುವುದು ಒಳಿತೆಂದು ತೋರುವುದಿಲ್ಲ. ಬಾಲ್ಯದಲ್ಲಿ ತೋರಿಸುವ ಕೈಗಾರಿಕೆಯ ಒಲವು ಮತ್ತು ಅಭಿರುಚಿಯು ಸ್ಥಿರವಾಗಿರುವುದಿಲ್ಲ. ಆದರೂ ಮಾಧ್ಯಮಿಕ ಸಾಲೆಯಲ್ಲಿ ಕೈಗಾರಿಕೆಯ ಪ್ರೇಮವನ್ನು ಹುಟ್ಟಿಸುವುದಕ್ಕಾಗಿ ಬಾಲಕರಿಗೆ ಕೆಲವು ಉದ್ಯೋಗಗಳ ಪರಿಚಯವನ್ನು ಮಾಡಿಕೊಟ್ಟರೆ ಒಳಿತು. ಯಾವ ದೇಶವೇ ಇರಲಿ, ಮನಶ್ಶಾಸ್ತ್ರದ ತತ್ವಗಳಿಗೆ ಸಮ್ಮತವಾದ ಶಿಕ್ಷಣ ಯೋಜನೆಯನ್ನು ಕಲ್ಪಿಸುವುದು ವಿಹಿತವಾದುದು.

೧೨

# ಕಲಿಯುವ ಕ್ರಮ

**ಕಲಿಯುವಿಕೆಗೆ ಗುರಿಯು ಅವಶ್ಯ.**— ಬೆಳೆಯುತ್ತಿರುವ ಮಗುವು ಹೊಸ ಸನ್ನಿವೇಶಕ್ಕೆ ಅನುಗುಣವಾಗುವಂತೆ ತನ್ನ ಕ್ರಿಯೆಗಳನ್ನು ಹೇಗೆ ಮಾರ್ಪಡಿಸಬೇಕೆಂಬುದನ್ನು ಕಲಿಯುತ್ತಿರುತ್ತದೆ. ಸುಟ್ಟುಕೊಂಡ ಮಗುವು ಬೆಂಕಿಗೆ ಅಂಜುತ್ತದೆ. ಈಸು ಕಲಿಯಬೇಕೆಂಬ ಹುಡುಗನು ಮೊದಲು ಕಷ್ಟವನ್ನು ಅನುಭವಿಸಿದರೂ ಕೊನೆಗೆ ಅದನ್ನು ಸಾಧಿಸುತ್ತಾನೆ. ಬೈಸಿಕಲ್ ಹತ್ತಲಿಕ್ಕೆ ಕಲಿಯುವವನು ಮೊದಮೊದಲು ಪೆಟ್ಟು ತಿಂದರೂ ಕಡೆಗೆ ಯಶಸ್ವಿಯಾಗುತ್ತಾನೆ. ಯಾವುದೆ ಕಾರ್ಯವನ್ನು ಮೇಲಿಂದಮೇಲೆ ಮಾಡುವುದರಿಂದ ಅದರ ನಿಶ್ಚಿತವಾದ, ಸುಸಂಬದ್ಧವಾದ ಜ್ಞಾನವು ನಮಗೆ ಶೀಘ್ರದಲ್ಲಿಯೇ ಆಗುತ್ತದೆ. ಕಾರ್ಯದಲ್ಲಿಯ ಈ ಸುಧಾರಣೆಯು **ಕಲಿಯುವಿಕೆಯ** ಬಾಹ್ಯಲಕ್ಷಣವು ಮತ್ತು ಕಲಿಯುವಿಕೆಯು ಬುದ್ಧಿಯ ಒಂದು ಲಕ್ಷಣವು. ಈ ಕಲಿಯುವಿಕೆಯ ಕ್ರಮವು ಹೇಗೆ ಸಾಗುತ್ತದೆ, ಅದರಲ್ಲಿ ಯಾವ ತತ್ವಗಳು ಅಡಕವಾಗಿವೆ ಎಂಬುದನ್ನು ಪರಿಶೋಧಿಸುವುದು ಮನಶ್ಶಾಸ್ತ್ರದ ಮುಖ್ಯ ಕಾರ್ಯಗಳಲ್ಲಿ ಒಂದಾಗಿದೆ. ಶಿಕ್ಷಣ ವ್ಯವಸಾಯಕ್ಕೆಲ್ಲ ಕಲಿಯುವ ಕ್ರಮದ ಜ್ಞಾನವು ತಳಹದಿಯಾಗಿರಬೇಕು. ಶಿಕ್ಷಕನು ಈ ವಿಷಯವನ್ನು ಚೆನ್ನಾಗಿ ಅರಿತುಕೊಂಡರೆ ಯೋಗ್ಯವಾದ ಕಲಿಸುವ ಪದ್ಧತಿಯನ್ನು ಅನುಸರಿಸಬಲ್ಲನು.

ಮನಶ್ಶಾಸ್ತ್ರಜ್ಞರು ಈ ವಿಷಯವನ್ನು ನಿರ್ಣಯಿಸುವಾಗ ಪ್ರಾಣಿಗಳ ಮೇಲೆ ಪ್ರಯೋಗಗಳನ್ನು ಮಾಡಿ ನೋಡಿರುತ್ತಾರೆ. ಏಕೆಂದರೆ ಮನುಷ್ಯನ ಮತ್ತು ಇತರ ಪ್ರಾಣಿಗಳ ಕಲಿಯುವ ಕ್ರಮದಲ್ಲಿ ಅಷ್ಟೊಂದು ವ್ಯತ್ಯಾಸವಿಲ್ಲ. ಮ್ಯಾಕ್‌ಡೂಗಲ್ಲ್, ಥಾಮ್‌ಸನ್, ಥಾರ್ನಡೈಕ್, ಪ್ಯಾವ್ಲೋ, ವ್ಯಾಟ್‌ಸನ್ ಮೊದಲಾದವರು ಇಲಿ, ಬೆಕ್ಕು, ನಾಯಿ, ಕೋತಿ, ಆಮೆ, ಮೀನ ಮುಂತಾದ ಪ್ರಾಣಿಗಳ ಮೇಲೆ ಪ್ರಯೋಗಗಳನ್ನು ಮಾಡಿದ್ದಾರೆ.

ಒಂದು ಪ್ರಯೋಗವನ್ನು ಇಲ್ಲಿ ಉದಾಹರಿಸುವುದು ಯೋಗ್ಯವೆನಿಸುವುದು—ಪೆಟ್ಟಿಗೆಯೊಳಗೆ ಮಾಡಿದ ಒಂದು ಚಕ್ರವ್ಯೂಹದ ಕೋಟೆ ಇದೆ. ಆ ಕೋಟೆಯ ಮಧ್ಯದಲ್ಲಿ ಆಹಾರವಿದೆ. ಅದನ್ನು ದೊರಕಿಸಲಿಕ್ಕೆ ಕೋಟೆಯ ಬಾಗಿಲಿನಿಂದ ಇಲಿಯು ಹೊರಡುತ್ತದೆ. ಸರಿಯಾದ ಮಾರ್ಗದಿಂದ ಹೋದರೆ ಮಾತ್ರ ಇಲಿಯು ಆಹಾರವಿದ್ದ ಕೋಣೆಗೆ ಹೋಗುವುದು. ಆದರೆ ಅಡ್ಡಹಾದಿಯನ್ನು ಹಿಡಿದರೆ ಮಾರ್ಗವೇ ಕಟ್ಟಾಗಿ ಅದು ತಿರುಗಿ ಬಂದು ಮತ್ತೊಂದು ದಿಕ್ಕಿಗೆ ಹೋಗಬೇಕಾಗುತ್ತದೆ. ಹೀಗೆ ಅತ್ತಿಂದಿತ್ತ ಅಲೆದಾಡುತ್ತ ಬಹಳ ಹೊತ್ತಿನ ಮೇಲೆ ಇಲಿಯು ಆಹಾರವನ್ನು ದೊರಕಿಸಿ ತೃಪ್ತಿಪಡುವುದು. ಮೊದಲನೆಯ ಸಲ ಇಲಿಯು ಅನೇಕ ತಪ್ಪುಗಳನ್ನು ಮಾಡುತ್ತದೆ ಎರಡನೆಯ ಸಲ ಅದಕ್ಕಿಂತ ಕಡಮೆ ತಪ್ಪುಗಳಾತ್ತವೆ. ಹೀಗೆ ಪ್ರತಿ ಸಾರೆ ತಪ್ಪುಗಳು ಕಡಮೆಯಾಗುತ್ತ ಕೊನೆಗೆ ತಪ್ಪುಗಳೇ ಇಲ್ಲದೆ ಇಲಿಯು ನೇರವಾಗಿ ಆಹಾರವಿದ್ದ ಕಡೆಗೆ ಓಡುವುದಕ್ಕೆ ಸಮರ್ಥವಾಗುತ್ತದೆ. ರೂಢಿಯಿಂದ ಬಂದ ಈ ಸುಧಾರಣೆಗೆ ನಾವು **ಕಲಿಯುವಿಕೆ** ಎಂದೆನ್ನುತ್ತೇವೆ. ಪ್ರತಿಯೊಂದು ಪ್ರಸಂಗದಲ್ಲಿ ಮೊದಲಿನ ಹಾಗೆಯೆ ಒಂದು ಪ್ರಾಣಿಯು ತಪ್ಪುಗಳನ್ನು ಮಾಡಹತ್ತಿದರೆ ಅದು ಕಲಿತಿಲ್ಲವೆಂದೇ ಎನ್ನಬೇಕು. ಏಕೆಂದರೆ ಪೂರ್ವದ ಅನುಭವದ ಸಂಸ್ಕಾರವು ಅದರ ಮೇಲೆ ಆಗುವುದಿಲ್ಲ; ಅದರ ಸ್ಮೃತಿಪಥದಲ್ಲಿ ಉಳಿದಿರುವುದಿಲ್ಲ. ಹಾಗಾದರೆ ಕಲಿಯುವಿಕೆಯಲ್ಲಿ—ಅಭ್ಯಸನಕ್ರಮದಲ್ಲಿ—ಗುರಿಸಾಧನೆ ಮತ್ತು ಸ್ಮೃತಿ (ಸ್ಮೃತಿಪಥ ಅಥವಾ ಅನುಭವಶೇಷ) ಎಂಬ ಎರಡು ಸ್ಪಷ್ಟವಾದ ಸಂಗತಿಗಳು ಅಡಕವಾಗಿರುತ್ತವೆಂದು ಮ್ಯಾಕ್‌ಡೂಗಲ್ಲ್‌ನು ತೋರಿಸಿಕೊಡುತ್ತಾನೆ.

ನಾವು ಯಾವುದಾದರೊಂದು ಸಣ್ಣ ಸಮಸ್ಯೆಯನ್ನು–ಗಣಿತ ಅಥವಾ ಚಕ್ರಬಂಧ–ಬಿಡಿಸುವಾಗ ಈ ಮಾತು ನಿದರ್ಶನಕ್ಕೆ ಬರುತ್ತದೆ. ಮೊದಲು ಅದನ್ನು ಪ್ರಯಾಸದಿಂದ ಬಿಡಿಸುತ್ತೇವೆ. ಪುನಃ ಅದೇ ಸಮಸ್ಯೆಯು ಬಂದಲ್ಲಿ ಅದನ್ನು ಹೇಗೆ ಬಿಡಿಸಬೇಕೆಂಬುದು ನಮಗೆ ನೆನಪಾಗುತ್ತದೆ; ಅದನ್ನು ತೀವ್ರವಾಗಿಯೆ ಬಿಡಿಸುತ್ತೇವೆ.

ಪ್ರಾಣಿಯ ವರ್ತನವು ಯಾವಾಗಲೂ ಉದ್ದೇಶಪೂರಿತವೆಂಬ ಮ್ಯಾಕ್‌ಡೂಗಲ್ಲ್‌ನ ಸಿದ್ಧಾಂತವನ್ನು ವ್ಯಾಟ್‌ಸನ್ ಮೊದಲಾದ

ಮನಶ್ಶಾಸ್ತ್ರಜ್ಞರು ಒಪ್ಪುವುದಿಲ್ಲ. "ಸೋಪಾಧಿಕ ಪ್ರತಿಕ್ರಿಯೆಯು" (Conditioned Reflex) ಕಲಿಯುವಿಕೆಯ, ಅದೇಕೆ ಸರ್ವ ವರ್ತನದ ಮೂಲತತ್ವವೆಂದು ಅವರ ಮತ. "ಸೋಪಾಧಿಕ ಪ್ರತಿಕ್ರಿಯೆ" ಎಂದರೆ ಸಹಜ ಸನ್ನಿವೇಶದ ಬದಲಾಗಿ ಸೇರಿಸಿದ ಹೊಸ ಸನ್ನಿವೇಶಕ್ಕೆ ತೋರಿಸುವ ಪ್ರತಿವರ್ತನ. ಪ್ಯಾವ್ಲೋ ಎಂಬವನು ತನ್ನ ನಾಯಿಗೆ ಆಹಾರ ಕೊಡುವ ವೇಳೆಯಲ್ಲಿ ಗಂಟೆಯನ್ನು ಬಾರಿಸುವ ರೂಢಿಯನ್ನಿಟ್ಟಿದ್ದನು. ಈ ಸಂಬಂಧದ ಮೂಲಕ ಆ ನಾಯಿಯು ಗಂಟೆಯ ಸಪ್ಪಳವನ್ನು ಕೇಳಿದಾಗಲೆಲ್ಲ ಆಹಾರವಿರದಿದ್ದರೂ ಬಾಯಿಂದ ಜೊಲ್ಲು ಸುರಿಸುತ್ತಿದ್ದಿತು. ಮೇಲೆ ಕೊಟ್ಟಿರುವ ಇಲಿಯ ಉದಾಹರಣೆಯಲ್ಲಿ ಆಹಾರವೇ ಪ್ರೇರಣೆ (Stimulus). ಅದನ್ನು ದೊರಕಿಸಲಿಕ್ಕೆ ತಪ್ಪುಕ್ರಿಯೆಗಳನ್ನು ಬಿಟ್ಟು ಇಲಿಯು ಯಶಸ್ವಿಯಾದ ಪ್ರತಿಕ್ರಿಯೆಯನ್ನು ಕಲಿಯುತ್ತದೆ. ಎಲ್ಲ ಕಲಿಯುವಿಕೆಯು ಇದೇ ರೀತಿಯಾಗಿರುತ್ತದೆಂದೂ ಶಿಕ್ಷಕರು ಮಕ್ಕಳ ಸನ್ನಿವೇಶ ಮತ್ತು ಪ್ರತಿಕ್ರಿಯೆಗಳ ಸಂಬಂಧವನ್ನು ಪರಿಶೀಲಿಸಬೇಕೆಂದೂ ಸ್ಟ್ಯಾಂಡಿಫ್ರೋಡ್ ನು ಅಭಿಪ್ರಾಯಪಡುತ್ತಾನೆ. ಇವನು ಯಾಂತ್ರಿಕ ಪಂಥಕ್ಕೆ ಸೇರಿದವನು. ಕಾರ್ಯಸಾಧನೆಯು ಪ್ರೇರಣೆ ಮತ್ತು ನರಗಳ ಆಕಸ್ಮಿಕ ಯೋಜನೆಯಿಂದ ಜರಗುವುದೆಂದು ಯಾಂತ್ರಿಕವಾದಿಗಳು ನಂಬುತ್ತಾರೆ. ಇತ್ತ ಉದ್ದೇಶವಾದಿಗಳು ಕಾರ್ಯಸಾಧನೆಗೆ ಗುರಿಯು ಅಥವಾ ಪ್ರಯೋಜನವು ಮೂಲ ಕಾರಣವೆಂದು ಹೇಳುತ್ತಾರೆ. ಕಾರ್ಯಸಾಧನೆಯಲ್ಲಿ ಬುದ್ಧಿಯು ವ್ಯಕ್ತವಾಗುತ್ತದೆಂದೂ ಅದು ಆಕಸ್ಮಿಕವಾಗಿ ಸಂಭವಿಸದೆಂದೂ ಉದ್ದೇಶವಾದಿಗಳು ತಿಳಿಯುತ್ತಾರಲ್ಲದೆ ಸ್ವಾನುಭವವೇ ಅಥವಾ ಅಂತರಾವಲೋಕನವೇ ಇದಕ್ಕೆ ಸಾಕ್ಷಿಯೆಂದೂ ಹೇಳುತ್ತಾರೆ. ಇದನ್ನೇ ನಾವು ಯೋಗ್ಯವೆಂದು ಅಂಗೀಕರಿಸುತ್ತೇವೆ. ಗುರಿಯನ್ನು ಸಾಧಿಸುವ ಉದ್ದೇಶವಿರದಿದ್ದರೆ ಕಲಿಯುವಿಕೆಯೆ ಅಶಕ್ಯವೆಂದು ನಮ್ಮ ಮತ. ಗುರಿಯನ್ನು ಪಡೆಯಬೇಕೆಂಬ ದೃಷ್ಟಿಯು ಇದ್ದರೆ ಮಾತ್ರ ಯಶಸ್ವಿಯಾದ ಕ್ರಿಯೆಗಳು ಉಳಿಯುತ್ತವೆ; ಮತ್ತು ಅವುಗಳೇ ಪುನರಾವೃತ್ತಿ ಹೊಂದುತ್ತವೆ ಒಂದು ಪ್ರಾಣಿಯು ಯಶಸ್ವಿಯಾದ ಕ್ರಿಯೆಗಳನ್ನೇ ಏಕೆ ಮತ್ತೆ ಮತ್ತೆ ಆಚರಿಸುತ್ತದೆ ಎಂಬುದರ ಕಾರಣವನ್ನು ಹೇಳಲು ಯಂತ್ರವಾದಿಗಳು ಅಸಮರ್ಥರಾಗಿದ್ದಾರೆ. ಉದ್ದೇಶವಾದಿಗಳ ತತ್ವದ ಪ್ರಕಾರ ಮಗುವು "ಒಂದು ವಿಷಯ

ವನ್ನು ಕಲಿಯಬೇಕಾಗಿದ್ದಲ್ಲಿ ಅಥವಾ ಅಭ್ಯಾಸ ಮಾಡಬೇಕಾಗಿದ್ದಲ್ಲಿ ಅದಕ್ಕೆ ಅಭ್ಯಾಸದ ತರುವಾಯ ದೊರಕುವ ಪ್ರತಿಫಲದ ಆಸೆಯಿರಬೇಕು.''

**ಅಂತರ್‌ದೃಷ್ಟಿ ಮತ್ತು ದೂರದೃಷ್ಟಿ** ( Insight and Foresight) .— ಮೇಲೆ ಉದಾಹರಿಸಿದ ಚಕ್ರಬಂಧ ಸಮಸ್ಯೆಯನ್ನು ನಾವೇ ಬಿಡಿಸುವಾಗ ಸರಿಯಾದ ಮಾರ್ಗವನ್ನು ಕಡ್ಡಿಯಿಂದ ತೋರಿಸುತ್ತ ಹೋಗುತ್ತೇವೆ. ಪ್ರಥಮ ಪ್ರಯತ್ನಗಳಲ್ಲಿ ಅನೇಕ ತಪ್ಪುಗಳನ್ನು ಮಾಡುತ್ತೇವೆ. ಆ ಮೇಲಿನ ಪ್ರಯತ್ನಗಳಲ್ಲಿ ತಪ್ಪುಗಳು ಪ್ರತಿ ಬಾರಿಗೂ ಕಡಿಮೆಯಾಗುತ್ತ ಹೋಗಿ ಕೊನೆಗೆ ಇಲ್ಲದಾಗುತ್ತವೆ. ಕಾರಣವೇನೆಂದರೆ ಎರಡು ಮೂರು ದಾರಿಗಳು ಕೂಡಿದ ಸ್ಥಳದಲ್ಲಿ ಅವುಗಳ ಸಂಬಂಧವನ್ನು ಕಲ್ಪಿಸಿ ಯೋಗ್ಯ ಮಾರ್ಗವನ್ನು ಹಿಡಿಯುತ್ತೇವೆ. ಹೀಗೆ ಸ್ಥಳಸಂಬಂಧಗಳನ್ನು ಯೋಜಿಸುವುದೇ ನಮ್ಮನ್ನು ಗುರಿಗೆ ತಲ್ಪಿಸುವ **ಅಂತರ್‌ದೃಷ್ಟಿಯು.** ಇಲಿಯು ಕೂಡ ಸಲಸಲಕ್ಕೂ ಕೋಟೆಯ ವ್ಯೂಹದ ಅರ್ಥವನ್ನು ಹೆಚ್ಚು ಹೆಚ್ಚು ಗ್ರಹಿಸುತ್ತ ಬರುವುದರಿಂದ ಕೊನೆಗೆ ಯಾವ ತಪ್ಪು ತಡೆಯಿಲ್ಲದೆ ಸರಿಯಾದ ದಾರಿಯನ್ನು ಹಿಡಿಯುವುದು. ಕಡಜಿಗವು ಗೂಡನ್ನು ಪೂರ್ತಿಗೊಳಿಸುವಾಗ ಅಂತರ್‌ದೃಷ್ಟಿಯೇ ಅದಕ್ಕೆ ಸಹಾಯವಾಯಿತೆಂದು ಹಿಂದೆ ತೋರಿಸಿದೆ. ಕಾಯ್ಲರನು ಕೋತಿಗಳ ಮೇಲೆ ಪ್ರಯೋಗಗಳನ್ನು ನಡೆಯಿಸಿ ಇದೇ ತತ್ವವನ್ನು ಕಂಡುಹಿಡಿದಿದ್ದಾನೆ ಅವನ ಕೋತಿಗಳು ಎತ್ತರದಲ್ಲಿ ತೂಗಾಡುವ ಆಹಾರವನ್ನು ದೊರಕಿಸಲು ಪೆಟ್ಟಿಗೆ, ಕೋಲು, ಹಗ್ಗ, ನಿಚ್ಚಣಿಕೆ ಮೊದಲಾದ ಉಪಕರಣಗಳನ್ನು ಉಪಯೋಗಿಸಿದುವು. ಕೋತಿಯು ತನ್ನ ಬುದ್ಧಿಶಕ್ತಿಯ ಬಲದಿಂದ ಸನ್ನಿವೇಶಗಳನ್ನು ಪರಿಶೀಲಿಸುವುದು. ಬಳಿಕ ತನ್ನ ಗುರಿಯನ್ನು ಸಾಧಿಸಲಿಕ್ಕೆ ವಿಷಯಸಾಮಗ್ರಿಗಳಿಗೂ ಸನ್ನಿವೇಶಕ್ಕೂ ಸಂಬಂಧವನ್ನು ಕಲ್ಪಿಸುವುದು. ಹಾಗಾದರೆ, ಸನ್ನಿವೇಶ ಸಂಬಂಧಗಳ ಅವಲೋಕನವಷ್ಟೇ ಅಲ್ಲದೆ ಆಹಾರವನ್ನು ದೊರಕಿಸುವ ಗುರಿಯ ದೂರದೃಷ್ಟಿಯೂ ಉಂಟು. ಗುರಿಯ ಸಾಧನೆಯ **ದೂರದೃಷ್ಟಿಯು** ಇದ್ದರೆ ಮಾತ್ರ ಸಮಯೋಚಿತ ಸಂಬಂಧಗಳನ್ನು ಪ್ರಾಣಿಯು ಆಯ್ದುಕೊಳ್ಳುತ್ತದೆ. ಆದರೆ 'ಪ್ರಯತ್ನ-ಪ್ರಮಾದ' ಪದ್ಧತಿಯೇ ಜಯದೊರಕಿಸುವ ರೀತಿಯೆಂದು ಸ್ಯಾಂಡಿಫೋರ್ಡ್ ಮೊದಲಾದವರು ಹೇಳುತ್ತಾರೆ. ಇದು ಸರಿಯಾದುದೆಂದು ತೋರುವುದಿಲ್ಲ.

ಏಕೆಂದರೆ ಯಶವು ಈ ರೀತಿಯಿಂದ ಆಕಸ್ಮಿಕವಾಗಿ ದೊರಕುವುದಿಲ್ಲ ತಿಳ್ಳಿ ಆಡುವುದು, ಈಸುವುದು, ವೀಣೆ ನುಡಿಸುವುದು, ಮಣ್ಣಿನ ಆಕೃತಿಗಳನ್ನು ಮಾಡುವುದು ಹೀಗೆ ಯಾವ ಕೆಲಸವನ್ನೇ ಕಲಿಯಬೇಕಾದರೂ ನಮಗೆ ಅಂತರ್ದೃಷ್ಟಿಯೂ ದೂರದೃಷ್ಟಿಯೂ ತೀರ ಆವಶ್ಯಕ.

ಕಲಿಯುವ ಸಮಸ್ಯೆಯಲ್ಲಿ ಐದು ತತ್ವಗಳು ಅಡಕವಾಗಿವೆಯೆಂದು ಮ್ಯಾಕ್‌ಡೂಗಲ್ಲನು "ಮನುಷ್ಯರ ಚೈತನ್ಯಗಳು" ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ—(೧) ಗುರಿಯನ್ನು ಮುಟ್ಟುವ ಬಯಕೆ (೨) ಗುರಿಯ ಸಾಧನೆಗೆ ಸಂಬಂಧವುಳ್ಳುದನ್ನು ಆರಿಸುವ ಅಂತರ್ದೃಷ್ಟಿ. (೩) ಗುರಿಯ ದೂರದೃಷ್ಟಿ. (೪) ಯಶವು ಸಿಗುವುದಿದ್ದರೆ ಸಂತೋಷ ಇಲ್ಲವಾದರೆ ಸಂತಾಪ ಮತ್ತು (೫) ಜ್ಞಾಪಕಶಕ್ತಿ.

## ಕಲಿಯುವ ನಿಯಮಗಳು

ಥಾರ್ನ್‌ಡೈಕನು ಕಲಿಯುವ ಬಗ್ಗೆ ಕೆಲವು ನಿಯಮಗಳನ್ನು ಕಂಡು ಹಿಡಿದಿದ್ದಾನೆ. ಅವು ಕಲಿಸುವ ಪದ್ಧತಿಯಲ್ಲಿ ಒಂದು ಕ್ರಾಂತಿಯನ್ನೇ ಉಂಟುಮಾಡಿವೆ. ಅವುಗಳ ಪರಿಚಯವು ಶಿಕ್ಷಕನಿಗೆ ಅತ್ಯುಪಯುಕ್ತ ವಾದುದು. ಆದರೆ ಅವುಗಳಲ್ಲಿ ಪ್ರಮುಖವಾದ ಮೂರು ನಿಯಮಗಳನ್ನು ಇಲ್ಲಿ ವಿವೇಚಿಸುವ.

(೧) **ಪರಿಣಾಮ ನಿಯಮ** (The Law of Effect).— ಒಮ್ಮೊಮ್ಮೆ ಇದನ್ನು 'ಸಂತೋಷ ಮತ್ತು ಸಂತಾಪ' ನಿಯಮವೆಂದೂ ಕರೆಯುತ್ತಾರೆ "ಯಾವ ಕಾರ್ಯಗಳು ನಮಗೆ ಸಂತೋಷವನ್ನು ತರುವವೊ ಅವನ್ನು ನಾವು ಮಾಡಲು ಕಲಿಯಬೇಕೆನ್ನುತ್ತೇವೆ; ಯಾವವು ನಮಗೆ ಸಂತಾಪವನ್ನೂ ಅಪಜಯವನ್ನೂ ತರುವವೊ ಅಂಥ ಕಾರ್ಯ ಗಳನ್ನು ನಾವು ಮಾಡಲು ಕಲಿಯಬೇಕೆನ್ನುವುದಿಲ್ಲ" (ಕಿಲ್ ಪ್ಯಾಟ್ರಿಕ್.) ಈಸು ಕಲಿಯುತ್ತಿರುವ ಹುಡುಗನು ತಲೆಯನ್ನು ನೀರೊಳಗೆ ಪೂರ್ಣ ಮುಳುಗಿಸಿದರೆ ಉಸಿರಾಡಿಸಲಿಕ್ಕೆ ತೊಂದರೆಯಾಗಿ ಅವನಿಗೆ ಸಂತಾಪವಾಗು

ತ್ತದೆ. ಆದುದರಿಂದ ಅವನು ಈ ಕ್ರಿಯೆಯನ್ನು ತಪ್ಪಿಸಲು ಪ್ರಯತ್ನಿಸುತ್ತಾನೆ. ಅವನು ಮುಖವನ್ನು ನೀರಮೇಲೆ ಮಾಡಿ ಈಸಹತ್ತಿದರೆ ಸಂತೋಷವನ್ನು ಅನುಭವಿಸುತ್ತಾನೆ, ಮತ್ತೆ ಹಾಗೆ ಈಸಲು ಅವನು ಪ್ರಯತ್ನಿಸುತ್ತಾನೆ. ಅವನ ಎರಡನೆಯ ಚಲನವನ್ನು ಶಿಕ್ಷಕರೂ ಗೆಳೆಯರೂ ಪ್ರೋತ್ಸಾಹಿಸಿದರೆ ಅವನ ಸಂತೋಷವು ಹೆಚ್ಚಾಗುತ್ತದೆ ಮತ್ತು ಅದು ಅವನಲ್ಲಿ ಕಡೆತನಕ ಉಳಿಯುವ ಸಂಭವವಿದೆ. ನಮಗೆ ಸಂತೋಷದಾಯಕವಾದ ಕ್ರಿಯೆಯನ್ನು ನಾವು ಪುನಃ ಮಾಡಬಯಸುತ್ತೇವೆ; ಸಂತಾಪಕಾರಕವಾದ ಕ್ರಿಯೆಯನ್ನು ತಪ್ಪಿಸಲಿಚ್ಛಿಸುತ್ತೇವೆ.

ಶಿಕ್ಷಣದಲ್ಲಿ ಈ ತತ್ವವನ್ನು ಉಪಯೋಗಿಸಬೇಕು. ಆಟದಲ್ಲಿಯೆ ಆಗಲಿ, ಅಭ್ಯಾಸದಲ್ಲಿಯೆ ಆಗಲಿ, ವಿದ್ಯಾರ್ಥಿಗಳ ಯೋಗ್ಯ ಕ್ರಿಯೆಗಳನ್ನು ಶಿಕ್ಷಕನು ಹೊಗಳಿ ಪ್ರೋತ್ಸಾಹಿಸಬೇಕು; ಕೇಡಾದವುಗಳನ್ನು ತೆಗಳಬೇಕು. ಹೊಗಳಿಕೆಯು ಹರ್ಷವನ್ನೂ ತೆಗಳಿಕೆಯು ತಾಪವನ್ನೂ ಉಂಟುಮಾಡುವುದರಿಂದ ಕಲಿಸುವ ಕ್ರಮದಲ್ಲಿ ಇವುಗಳನ್ನು ಸರ್ವತ್ರ ಉಪಯೋಗಿಸುತ್ತಾರೆ. ಶಾಲೆಯ ಅಭ್ಯಾಸವೆಂದಕೂಡಲೆ ಮಕ್ಕಳು ಅದೊಂದು ಅವರಿಗೆ ವಿಧಿಸಲಾಗುವ ಶಿಕ್ಷೆಯೆಂದು ತಿಳಿಯುವಂತೆ ಮಾಡುವುದು ಮೂರ್ಖತನವು ಶಿಕ್ಷೆ ಕೊಡುವುದಕ್ಕಾಗಿ ಕೆಲವೊಂದು ಪದ್ಯಗಳನ್ನು ಬಾಯಪಾಠ ಮಾಡಲು ಹೇಳಿದರೆ ಅಥವಾ ಲೆಕ್ಕ ಬಿಡಿಸಲು ಹೇಳಿದರೆ ಆ ವಿಷಯಗಳ ಬಗ್ಗೆ ಮಕ್ಕಳಲ್ಲಿ ಜುಗುಪ್ಸೆ ಉಂಟಾಗುತ್ತದೆ. ಹೀಗಾಗದಂತೆ ಶಿಕ್ಷಕನು ನೋಡಿಕೊಳ್ಳುವುದು ಅಗತ್ಯ.

**೨. ಅಭ್ಯಾಸ ನಿಯಮ** (The Law of Exercise).—ಯಾವುದೇ ಕಾರ್ಯವಾಗಲಿ ಅದನ್ನು ಆಗಾಗ್ಗೆ ಮಾಡುವ ರೂಢಿಯಿಟ್ಟರೆ ಅದರಲ್ಲಿ ನಾವು ಪ್ರಗತಿಯನ್ನು ಪಡೆಯುತ್ತೇವೆ. "ಅಭ್ಯಾಸವು ಪೂರ್ಣತೆಯನ್ನುಂಟುಮಾಡುತ್ತದೆ" ಎಂಬ ಗಾದೆಯ ಮಾತೂ ಈ ನಿಯಮಾನುಸಾರವಾಗಿಯೇ ಇದೆ. ಟೇನಿಸ್ ಆಟದಲ್ಲಿ ಪಾರಾಂಗತರಾಗಬೇಕಾದರೆ ಕೇವಲ ಆ ಆಟದ ತತ್ವಗಳನ್ನು ಓದಿ ಮನನ ಮಾಡಿದರೆ ನಡೆಯದು. ಆಟವಾಡುವ ಅಭ್ಯಾಸವನ್ನಿಡಬೇಕಾಗುವುದು. ಮಾತಿಗಿಂತ ಕೃತಿಯು ಮೇಲು. ಒಟ್ಟಿನಲ್ಲಿ, ಕಾರ್ಯವು ಸುಲಭವಾಗುವುದೂ ಶೀಘ್ರವಾಗುವುದೂ ಉತ್ಕೃಷ್ಟವಾಗುವುದೂ

ಅಭ್ಯಾಸವನ್ನೇ ಅವಲಂಬಿಸಿರುತ್ತದೆ. ಅಭ್ಯಾಸವು ಕೆಲಕಾಲ ತಪ್ಪಿದರೆ ಆ ಕಾರ್ಯದ ಮೇಲಿನ ಪ್ರಭುತ್ವವು ಕಡಿಮೆಯಾಗುತ್ತದೆ. ಕಲಿತದ್ದು ನಮ್ಮಲ್ಲಿ ಸ್ಥಿರವಾಗಿ ನಿಲ್ಲಬೇಕಾದರೆ ಅಭ್ಯಾಸವು ಆವಶ್ಯಕ. ಅಭ್ಯಾಸ ಮತ್ತು ಪರಿಣಾಮ ನಿಯಮಗಳು ಜೊತೆಯಾಗಿ ವ್ಯವಹರಿಸುತ್ತವೆ. ತಾನು ಜಯಸಂಪಾದಿಸಿದ ಸಂದರ್ಭ-ಸನ್ನಿವೇಶವನ್ನೇ ರೂಢೀಕರಿಸುವುದು ಪ್ರತಿಯೊಬ್ಬನಿಗೆ ಸ್ವಾಭಾವಿಕವಾದುದು. ಈ ಅಭ್ಯಾಸದಲ್ಲಿಯೇ ಅವನಿಗೆ ಸಂತೋಷವುಂಟು.

**೩. ಸನ್ನಾಹ ನಿಯಮ** (The Law of Readiness) — ಒಬ್ಬ ಮನುಷ್ಯನು ಯಾವುದಾದರೊಂದು ಕಾರ್ಯವನ್ನು ಒಂದು ನಿರ್ದಿಷ್ಟ, ನಿಶ್ಚಿತ ರೀತಿಯಿಂದ ಅಥವಾ ಮಾರ್ಗದಿಂದ ಮಾಡಲು ಸಿದ್ಧನಿದ್ದರೆ ಆತನು ಸನ್ನಾಹನಿಯಮವನ್ನು ಅಂಗೀಕರಿಸಿರುವನೆಂದು ತಿಳಿದುಕೊಳ್ಳಬೇಕು. ನಿಶ್ಚಿತ ರೀತಿಯಿಂದ ವರ್ತಿಸಲು ಅವನು ಸಿದ್ಧನಿದ್ದರೆ ಅವನಿಗೆ ಅವನ ಕಾರ್ಯದಲ್ಲಿ ಸಂತೋಷವಾಗುತ್ತದೆ; ಪ್ರತಿಬಂಧವುಂಟಾದರೆ ಅವನಿಗೆ ವ್ಯಥೆಯಾಗುತ್ತದೆ. ಹಸಿದವನು ಊಟಮಾಡಲು ಸಿದ್ಧನಿರುತ್ತಾನೆ. ಆಗ ಅವನಿಗೆ ಆಹಾರವು ದೊರೆತರೆ ಸುಖವೂ, ದೊರೆಯದಿದ್ದರೆ ದುಃಖವೂ ಆಗುತ್ತದೆ. ಸಹಜಪ್ರವೃತ್ತಿಗಳು ಸನ್ನಾಹಸ್ಥಿತಿಯನ್ನು ನಿರ್ಧರಿಸುತ್ತವೆ. ಜನಮೆಚ್ಚುಗೆ, ಇತರರ ಮೇಲೆ ಅಧಿಕಾರ ನಡೆಯಿಸುವುದು, ಇತರರನ್ನು ಮೀರುವುದು, ಸಂಕಟಗಳಿಂದ ಪಾರಾಗುವುದು, ಕೈಮುಟ್ಟಿ ಕೆಲಸ ಮಾಡುವುದು, ಅಂಗಸಾಧನೆಯಲ್ಲಿ ಭಾಗ ವಹಿಸುವುದು ಮುಂತಾದ ಇಚ್ಛೆಗಳು ಮನಸ್ಸಿನಲ್ಲಿ ಹುಟ್ಟಿದರೆ ಕಾರ್ಯವನ್ನು ಮಾಡಲಿಕ್ಕೂ ವಿಷಯಗಳನ್ನು ಕಲಿಯಲಿಕ್ಕೂ ಮಕ್ಕಳು ಸನ್ನದ್ಧರಾಗುತ್ತಾರೆ. ವಿದ್ಯಾರ್ಥಿಯು ಕಲಿಯಬೇಕೆಂದು ಇಚ್ಛಿಸಿದರೆ ಕಲಿಯುವಿಕೆಯು ಪರಿಣಾಮಕಾರಿಯಾಗುತ್ತದೆ.

ಸನ್ನಾಹವಿದ್ದಲ್ಲಿ ಸಂತೋಷವುಂಟು. ಒಬ್ಬ ಮನುಷ್ಯನು ಕಾರ್ಯ ಮಾಡಲು ಸಿದ್ಧನಿದ್ದು ಅದನ್ನು ಮಾಡಿದರೆ ಅದರಿಂದ ಅವನಿಗೆ ಸಂತೋಷವಾಗುವುದು, ಅದನ್ನು ಮಾಡದೆ ಇರುವುದರಿಂದ ದುಃಖವಾಗುವುದು. ಸಿದ್ಧನಿರದಿದ್ದರೆ ಕಾರ್ಯಮಾಡುವುದು ಸಂತಾಪಕಾರಕವಾಗುವುದು. ದಣಿವು ಆದಾಗ ಕೆಲಸ ಮಾಡಹಚ್ಚಿದರೆ ಅವನಿಗೆ ನಿರುತ್ಸಾಹವೂ ಸಂತಾಪವೂ ಮತ್ತು ವಿಶ್ರಾಂತಿಯ ಬಳಿಕ ಕೆಲಸಮಾಡತೊಡಗಿಸಿದರೆ ಉತ್ಸಾಹವೂ ಸಂತೋಷವೂ

ಉಂಟಾಗುತ್ತವೆ. ವಿದ್ಯಾರ್ಥಿಯು ಪಾಂಡಿತ್ಯವನ್ನು ಪ್ರದರ್ಶಿಸುವ ಲವಲವಿಕೆಯುಳ್ಳವನಾಗಿದ್ದಾಗ ಶಿಕ್ಷಕನು ಅವನನ್ನು ಶ್ಲಾಘಿಸಿದರೆ ಅವನಿಗೆ ಸಂತೋಷವುಂಟಾಗುತ್ತದೆ. ಆದರೆ ಅವನನ್ನು ಅಲಕ್ಷಿಸಿದರೆ ಅವನಿಗೆ ವ್ಯಥೆಯಾಗುತ್ತದೆ.

ಕಲಿಯುವಿಕೆಯು ಪರಿಣಾಮಕಾರಿಯಾಗಬೇಕಾದರೆ ಕಲಿಯುವ ಎಲ್ಲ ನಿಯಮಗಳನ್ನು ಪ್ರತಿಯೊಂದು ಸನ್ನಿವೇಶದಲ್ಲಿ ಉಪಯೋಗಿಸಬೇಕು. ಕಲಿಯಬೇಕೆಂಬ ಇಚ್ಛೆಯು ಮಕ್ಕಳಲ್ಲಿ ಇರದಿದ್ದರೆ ಶಿಕ್ಷಕನ ಶ್ರಮವು ಬಂಜೆಯಾಗುವುದು. ಅಧ್ಯಾಪನವು ಫಲದಾಯಕವಾಗಬೇಕಾದರೆ ವಿದ್ಯಾರ್ಥಿಯಲ್ಲಿ ಕಲಿಯುವ ಇಚ್ಛೆಯನ್ನು ನೆಲೆಗೊಳಿಸಬೇಕು; ವಿಷಯದಲ್ಲಿ ಅಭಿರುಚಿಯನ್ನು ಹುಟ್ಟಿಸಬೇಕು. ಇಚ್ಛೆಯೇ ಕಲಿಯುವಿಕೆಯ ಪೂರ್ವಸಿದ್ಧತೆಯು.

## ಕಲಿಯುವುದರಲ್ಲಿ ಪ್ರಗತಿ

**ಅಧ್ಯಯನ ರೇಖೆ.**—ಮಗುವು ಅಂಗಕೌಶಲ್ಯ, ಬರೆಹ, ಅಂಕಗಣಿತ, ಈಸು ಮೊದಲಾದ ಯಾವ ವಿಷಯವನ್ನೇ ಕಲಿಯಲಿ ಅವನ ಕಲಿಯುವ ಕ್ರಮದಲ್ಲಿ ಪ್ರಗತಿಯು ಒಂದೇ ಸವನೆ ಸಾಗುವುದಿಲ್ಲ. ಪ್ರಾರಂಭದಲ್ಲಿ ಪ್ರಗತಿಯು ಭರದಿಂದ ಸಾಗುತ್ತದೆ. ಅನಂತರ ಕೆಲವು ಕಾಲ ಅದು ಸ್ತಬ್ಧವಿದ್ದಂತೆ ತೋರುತ್ತದೆ. ಹೀಗೆ ಪ್ರಗತಿಯ ಅಥವಾ ಅಧ್ಯಯನದ ರೇಖೆಯನ್ನು ತೆಗೆದರೆ ಅದರಲ್ಲಿ ಏರಿಳಿತಗಳೂ ಸಮಪಾತಳಿಗಳೂ ಕಂಡುಬರುತ್ತವೆ. ಈ ಈ ಪಾತಳಿಗಳು (Plateaux) ಕಾರ್ಯದಲ್ಲಿ ಸುಧಾರಣೆಯು ಆಗಿಲ್ಲವೆಂದು ಸೂಚಿಸುತ್ತವೆ. ಆದರೆ ನಿಜವಾಗಿ ನೋಡಿದರೆ ಆ ಪಾತಳಿಗಳು ನಿರ್ದೇಶಿಸುವ ಅವಧಿಯಲ್ಲಿ ಕಲಿಯುವ ಕಾರ್ಯವು ಗುಪ್ತವಾಗಿ ನಡೆದೇ ಇರುತ್ತದೆ. ಈ ಕಾಲದಲ್ಲಿ ಕಲಿತ ವಿಷಯಗಳು ದೃಢಗೊಳ್ಳುತ್ತವೆ. ಮಗುವು ಗುಣಾಕಾರ, ಭಾಗಾಕಾರ ಕಲಿಯುವಾಗ ಬೇರೀಜು ವಜಾಬಾಕಿ ಮಾಡುವ ರೂಢಿಗಳು ಅವನಲ್ಲಿ ದೃಢವಾಗುತ್ತಿರುತ್ತವೆ. ಅವು ಚೆನ್ನಾಗಿ ನೆಲೆಗೊಂಡ ನಂತರವೇ ಮುಂದೆ ಸುಧಾರಣೆಯು ತೋರುತ್ತದೆ. ಅನುಭವದ ಶೇಷಗಳು ಸಂಸಕ್ತಿ ಹೊಂದಲಿಕ್ಕೆ ಕೆಲವೊಂದು ಕಾಲವು ಅವಶ್ಯವೆಂದು ಮೂರನೆಯ ಅಧ್ಯಾಯ

ದಲ್ಲಿ ಉಲ್ಲೇಖಿಸಿದೆ. ಆದುದರಿಂದ ಕಲಿಯುವುದರಲ್ಲಿ ಒಮ್ಮೊಮ್ಮೆ ಪ್ರಗತಿಯು ತೋರದಿರಲು ವಿದ್ಯಾರ್ಥಿಗಳು ನಿರುತ್ಸಾಹಗೊಳ್ಳುವುದುಂಟು. ಇಂತಹ ಸಮಯದಲ್ಲಿ ಶಿಕ್ಷಕನು ಅವರಿಗೆ ತಿಳಿಹೇಳಬೇಕು. ಪ್ರಗತಿಯ ಶೀಘ್ರತೆಗೂ ಅಧ್ಯಯನದಲ್ಲಿಯ ಮಿತವ್ಯಯಕ್ಕೂ ಕಲಿಯುವ ಕೆಲವೊಂದು ಪದ್ಧತಿಗಳೇ ಸಹಾಯವಾಗುವವು. ಅಭ್ಯಾಸದಲ್ಲಿ 'ವಿಭಾಗ' ಪದ್ಧತಿಯನ್ನು ಉಪಯೋಗಿವುದು ಉತ್ತಮ. ಒಂದು ವಿಷಯವನ್ನು ಅನೇಕಾವರ್ತಿ ಒಂದೇ ದಿವಸದಲ್ಲಿ ಕಲಿಯುವ ಬದಲು ದಿವಸಕ್ಕೊಂದು ಸಲದಂತೆ ಅಭ್ಯಸಿಸುವುದು ಫಲಕಾರಿಯಾಗುವುದು. ಅದರಂತೆ 'ಅಖಂಡ' ಪದ್ಧತಿಯು ಶ್ರೇಷ್ಠವಾದದ್ದು. ಒಂದು ಕವಿತೆಯನ್ನು ತುಂಡುತುಂಡಿನಂತೆ ಕಲಿಯದೆ ಸಾದ್ಯಂತವಾಗಿ ಓದಿ ಕಲಿಯುವುದು ಲಾಭದಾಯಕವು.

**ಆಯಾಸ.**—ಪ್ರಗತಿ ರೇಖೆಯಲ್ಲಿ ಅಥವಾ ಅಧ್ಯಯನ ರೇಖೆಯಲ್ಲಿ ಪಾತಳಿಗಳೂ, ಇಳಿತಗಳೂ ಉಂಟಾಗಲಿಕ್ಕೆ ಆಯಾಸವು ಕಾರಣವೆಂದು ಕೆಲವರು ಅನ್ನುವರು. ಇದೂ ನಿಜ. ಏಕೆಂದರೆ ಆಯಾಸ ಅಥವಾ ದಣಿವು ಉಂಟಾದಾಗ ಪ್ರಗತಿಯು ನಿಲ್ಲುವುದಲ್ಲದೆ ಅಧ್ಯಯನ ರೇಖೆಯಲ್ಲಿ ಇಳಿತವು ತೋರುವುದು. ಆಯಾಸವೆಂದರೆ ಕಾರ್ಯಮಾಡಲು ಅಸಮರ್ಥತೆ. ಬೇಸರ ಅಂದರೆ ಕೆಲಸ ಮಾಡಲು ಮನಸ್ಸಿಲ್ಲದಿರುವುದು; ಅದು ಆಯಾಸವಲ್ಲ. ಆಯಾಸವು ಮಾನಸಿಕವೂ ಆಗಿರಬಹುದು; ದೈಹಿಕವೂ ಆಗಿರಬಹುದು. ಆದರೆ ಒಂದರ ಪರಿಣಾಮವು ಮತ್ತೊಂದರ ಮೇಲೆ ಆಗುವುದರಿಂದ ಇವೆರಡನ್ನೂ ಬೇರೆ ಮಾಡಲಿಕ್ಕೆ ಬರುವುದಿಲ್ಲ. ಶ್ರಮಬಟ್ಟು ಓಡಿ ಬಂದವನಿಗೆ ಬೌದ್ಧಿಕ ಕೆಲಸ ಕೊಡುವುದು ತಪ್ಪು. ಅದರಂತೆ ಮಾನಸಿಕ ಶ್ರಮದ ಪರಿಣಾಮವು ಶರೀರದ ಮೇಲೆ ಆಗುತ್ತದೆ. ಮೈದುಡಿತವು ಹೆಚ್ಚಾಗಲು ಶರೀರದಲ್ಲಿ ನಿರುಪಯುಕ್ತ ವಿಷಪದಾರ್ಥಗಳು ಉತ್ಪನ್ನವಾಗುವವು. ಇದರಿಂದ ಆಯಾಸವು ಉಂಟಾಗುವುದು. ಸ್ವಚ್ಛವಾದ ಹವೆ ಮತ್ತು ಸಾಕಷ್ಟು ಬೆಳಕು ಇಲ್ಲದಾಗಲೂ ಆಯಾಸ ಉಂಟಾಗುವುದು. ಶುದ್ಧ ಹವೆ, ನಿದ್ರೆ, ಹಾಲು, ಸಕ್ಕರೆ, ಚಹಾ, ಕಾಫಿ ಇವು ಆಯಾಸವನ್ನು ಕಳೆದು ವಿಶ್ರಾಂತಿಯನ್ನೀಯುವವು. ಬಾಲಕರ ಅವಧಾನವು ಕಡಿಮೆ ಆದಲ್ಲಿ ಕಲಿಯುವ ವಿಷಯವನ್ನು ಬದಲಾಯಿಸಬೇಕು. ಆಯಾಸವನ್ನು ಪ್ರತ್ಯೇಕವಾಗಿ ಅಳೆಯಲಿಕ್ಕೆ ಬರು

ವಂತಿಲ್ಲ. ಅದು ಉತ್ಸಾಹ, ಅಭಿರುಚಿ, ರೂಢಿ ಮತ್ತು ದೇಹದ ಸ್ಥಿತಿ ಇವುಗಳಿಗೆ ಸಂಬಂಧಿಸಿರುತ್ತದೆ. ಕಲಿಯಬೇಕೆಂಬ ಇಚ್ಛೆ, ಮತ್ತು ವಿಷಯದಲ್ಲಿ ಅಭಿರುಚಿ ಇದ್ದರೆ ಆಯಾಸವು ದೂರಾಗುತ್ತದೆ. ಕಲಿಯುವ ವಿಷಯದಲ್ಲಿ ಅಭ್ಯಾಸವು ಅಥವಾ ರೂಢಿಯು ಹೆಚ್ಚಾದ ಹಾಗೆಲ್ಲ ದಣಿವು ಕಡಿಮೆಯಾಗುತ್ತದೆ. ಇಚ್ಛೆ ಅಭಿರುಚಿ ಮತ್ತು ಉತ್ಸಾಹವಿದ್ದರೆ ಆರಂಭದಲ್ಲಿ ಕಾರ್ಯವು ಭರದಿಂದ ಸಾಗುತ್ತದೆ. ಇದಕ್ಕೆ ಆರಂಭದ ಪ್ರಗತಿ (Initial Spurt) ಎನ್ನುತ್ತಾರೆ ಮೇಲೆ ವಿವರಿಸಿದ ' ಸನ್ನಾಹ ನಿಯಮ ' ವು ಇದರಲ್ಲಿ ಅಡಕವಾಗಿದೆ. ದಣಿವು, ನಿರುತ್ಸಾಹ, ಅರುಚಿ ಉಂಟಾದಲ್ಲಿ ಅಧ್ಯಯನ ರೇಖೆಯಲ್ಲಿ ಇಳಿತವು ತೋರುತ್ತದೆ. ಕಾರ್ಯವು ಮುಗಿಯುವಾಗ ಗುರಿಯು ಸಮೀಪಿಸಿತೆಂದು ಉತ್ಸಾಹಭರಿತನಾಗಿ ಕಲಿಯುವವನು ದಣಿವಾಗಿದ್ದರೂ ಮತ್ತೊಮ್ಮೆ ಪ್ರಗತಿಯನ್ನು ತೋರಿಸುತ್ತಾನೆ. ಇದಕ್ಕೆ ಕೊನೆಯ ಪ್ರಗತಿ (End Spurt) ಎನ್ನುತ್ತಾರೆ. ದಣಿದು ಬಂದ ಎತ್ತು ಕೊಟ್ಟಿಗೆಯು ಸಮೀಪಿಸಿದಾಗ ಹುರುಪಿನಿಂದ ನಡೆಯುತ್ತದೆ.

ಶಾಲೆಗಳಲ್ಲಿ ಒಂದೇ ವಿಷಯವನ್ನು ದೀರ್ಘಕಾಲ ಅಭ್ಯಸಿಸುವುದರಿಂದ ಆಯಾಸವು ಉಂಟಾಗುತ್ತದೆ. ಆದುದರಿಂದ ತಜ್ಞರು ಪ್ರತಿಯೊಂದು ಪಾಠವು ಮೂವತ್ತು ನಿಮಿಷಗಳಿಗೆ ಮೀರಕೂಡದೆಂದು ಅಭಿಪ್ರಾಯಪಡುತ್ತಾರೆ. ವೇಳಾಪತ್ರಿಕೆಯಲ್ಲಿ ಮೊದಲನೆಯ ' ತಾಸು ' ಗಣಿತ ಅಥವಾ ಭಾಷೆ ಮತ್ತು ಕಡೆಗೆ ಗಾಯನ, ಕೈಕೆಲಸ ಅಥವಾ ಡ್ರಾಯಿಂಗ್ ಇಡುವ ಪದ್ಧತಿ ಉಂಟು. ಒಂದು ದೃಷ್ಟಿಯಿಂದ ಇದು ಸಮಂಜಸವೆಂದು ತೋರುತ್ತದೆ. ಆದರೆ ವಿಷಯವು ರಸವತ್ತಾಗಿ ಬೋಧಿಸಲ್ಪಟ್ಟಲ್ಲಿ ಮತ್ತು ವಿಷಯದಲ್ಲಿ ಬಾಲಕರು ಆಸಕ್ತಿಯುಳ್ಳವರಾಗಿದ್ದಲ್ಲಿ ಯಾವ ವಿಷಯವನ್ನು ಯಾವ ವೇಳೆಯಲ್ಲಿ ಕಲಿಸಿದರೇನು? ಕಲಿತರೇನು? ಪರಿಣಾಮವು ಅಷ್ಟೇ! ಕಲಿಯುವ ವಿಷಯದಲ್ಲಿ ವಿದ್ಯಾರ್ಥಿಯು ಅಭಿರುಚಿಯುಳ್ಳವನಾಗಿರುವುದು ಅತ್ಯಂತ ಮಹತ್ವದ್ದು. ಕಲಿಯುವುದರಲ್ಲಿ ಒಂದು ಉದ್ದೇಶವನ್ನು ತೋರಿಸಿ ಶಿಕ್ಷಕನು ಬಾಲಕರ ಸಾಹಸವನ್ನು ಪ್ರೋತ್ಸಾಹಿಸಬೇಕು. ಆಯಾಸ ಉಂಟಾದಾಗ ವಿಷಯವನ್ನು ಬದಲಾಯಿಸಬೇಕು. ಕಾರ್ಯವ್ಯತ್ಯಾಸವೇ ವಿಶ್ರಾಂತಿಯು. ಇದಲ್ಲದೆ ಆಯಾಸವನ್ನು ಹೋಗಲಾಡಿಸಲಿಕ್ಕೆ ಸಾಲೆಯಲ್ಲಿ ವಿರಾಮಕಾಲವು ಆವಶ್ಯಕ.

# ೧೩

# ಜ್ಞಾನದ ಬೆಳವಣಿಗೆ

ಮನಸ್ಸಿನಲ್ಲಿ ಬೋಧೆ (ಜ್ಞಾನ), ಸಂವೇದನೆ ಮತ್ತು ಸಂಕಲ್ಪ ಎಂಬ ಮೂರು ಅಂಶಗಳಿರುತ್ತವೆಂದು ಎಡಡನೆಯ ಅಧ್ಯಾಯದಲ್ಲಿ ಹೇಳಿದ್ದೇವೆ. ಈ ಮೂರು ಅಂಶಗಳಲ್ಲಿ ಸಂವೇದನೆ ಮತ್ತು ಸಂಕಲ್ಪ ಇವು ಶೀಲದಲ್ಲಿಯೂ ಬೋಧೆಯು ಜ್ಞಾನದಲ್ಲಿಯೂ ಅಡಕವಾಗಿವೆ. ಪ್ರಸ್ತುತ ಅಧ್ಯಾಯದಲ್ಲಿ ಜ್ಞಾನವನ್ನು ಮಾತ್ರ ಕುರಿತು ವಿವೇಚಿಸುವ.

ಮನಸ್ಸು ವಿಕಸಿತವಾಗುತ್ತ ಹೋದಂತೆ ಅದರ ಬುದ್ಧಿ-ಜ್ಞಾನ-ಶಕ್ತಿಯೂ ವಿಕಾಸಹೊಂದುತ್ತದೆ. ಪ್ರತ್ಯಕ್ಷ ಅನುಭವ, ಸ್ಮರಣೆ, ಊಹೆ, ಕಲ್ಪನೆ ಮತ್ತು ಅನುಮಾನ ಅಥವಾ ತರ್ಕ ಇವು ಬುದ್ಧಿಯ ಕ್ರಿಯೆಗಳು. ಈ ಕ್ರಿಯೆಗಳ ಸಹಾಯದಿಂದಲೇ ಜ್ಞಾನದ ಬೆಳವಣಿಗೆಯಾಗುತ್ತದೆ. ಜ್ಞಾನಗ್ರಹಣವು ಎರಡು ತೆರನಾಗಿ ಸಾಗುವುದು—ಪ್ರತ್ಯಕ್ಷ ಜ್ಞಾನ ಮತ್ತು ಕಲ್ಪನಾತ್ಮಕ ಜ್ಞಾನ. ಇಂದ್ರಿಯಗಳ ಮುಖಾಂತರ ಉಂಟಾಗುವ ವಸ್ತುಗಳ ಜ್ಞಾನವು ಪ್ರತ್ಯಕ್ಷ ಜ್ಞಾನವು. ಇಂದ್ರಿಯಗಳ ಸಹಾಯವಿಲ್ಲದೆ ಭಾವನೆಗಳಿಂದುಂಟಾಗುವ ಜ್ಞಾನವು ಕಲ್ಪನಾತ್ಮಕ ಜ್ಞಾನವು. ಇವುಗಳನ್ನು ಒಂದೊಂದಾಗಿ ವಿವೇಚಿಸಿ ತಿಳಿದುಕೊಳ್ಳೋಣ.

೧. **ಪ್ರತ್ಯಕ್ಷಜ್ಞಾನ** (Perception).— ಅದೇ ಹುಟ್ಟಿದ ಶಿಶುವಿಗೆ ಜಗತ್ತು "ಒಂದು ದೊಡ್ಡ, ಥಳಥಳಿಸುವ, ಗಲಭೆಯ ತೊಡಕು" ಆಗಿರುತ್ತದೆಂದು ವಿಲಿಯಮ್ ಜೇಮ್ಸನು ಹೇಳುತ್ತಾನೆ. ಮಗುವು ತನ್ನಲ್ಲಿ ಅರಳುವ ಪ್ರವೃತ್ತಿಗಳ ಮತ್ತು ಸಾಮರ್ಥ್ಯಗಳ ಸಹಾಯದಿಂದ ಈ ತೊಡಕನ್ನು ಬಿಡಿಸುತ್ತ ಹೋದ ಹಾಗೆ ಜಗತ್ತಿನಲ್ಲಿ ಭಿನ್ನ ಭಿನ್ನ ವಸ್ತುಗಳು ಇರುವುವೆಂಬ ಜ್ಞಾನವು ಅವನಲ್ಲಿ ಉಂಟಾಗುತ್ತದೆ. ಒಂದು ದಿವಸ ಒಂದು ಬೆಕ್ಕು ಮಗುವಿನ ಕಣ್ಣಿಗೆ ಬೀಳುತ್ತದೆ. ಕುತೂಹಲದಿಂದ ಮಗುವು ಅದನ್ನು ಮುಟ್ಟಿ, ಜಗ್ಗಿ

ಎಳೆದಾಡುತ್ತಾನೆ. ಬೆಕ್ಕಿನ ಮೈಬಣ್ಣ, ಮೃದುವಾದ ಸ್ವರ, ಮೆತ್ತಗಿನ ಕೂದಲು ಮೊದಲಾದುವು ಅವನ ಮೇಲೆ ಸಂತೋಷಕರವಾದ ಒಂದು ವಿಶಿಷ್ಟ ಪರಿಣಾಮವನ್ನು ಉಂಟುಮಾಡುತ್ತವೆ. ಬೆಕ್ಕಿನ ಈ ಪರಿಚಯದಿಂದ ಅದರ ಲಕ್ಷಣಗಳ ಕಲ್ಪನೆಯು ಮಗುವಿನ ಮನಸ್ಸಿನಲ್ಲಿ ಒಡಮೂಡುತ್ತದೆ ಅವನು ಪ್ರತ್ಯಕ್ಷವಾಗಿ ಇಂದ್ರಿಯಗಳ ಮುಖಾಂತರ ಅನುಭವಿಸುವ ವಸ್ತುವು 'ಬೆಕ್ಕು' ಎಂದು ಅವನಿಗೆ ಎನಿಸುತ್ತದೆ. ಹೀಗೆ, ಇಂದ್ರಿಯಗೋಚರ ಬಾಹ್ಯವಸ್ತುವಿನಿಂದ ಉಂಟಾದ ಅನುಭವಕ್ಕೆ ಪ್ರತ್ಯಕ್ಷಜ್ಞಾನ ಎನ್ನುತ್ತಾರೆ. ನ್ಯಾಯಶಾಸ್ತ್ರಕಾರರು ಹೇಳುವಂತೆ **ಇಂದ್ರಿಯ ಮತ್ತು ವಸ್ತು ಇವುಗಳ ಸಂಯೋಗದಿಂದ ಉಂಟಾದ ಜ್ಞಾನವೇ ಪ್ರತ್ಯಕ್ಷಜ್ಞಾನವು** (**इन्द्रियार्थसन्निकर्षजन्यं ज्ञानं प्रत्यक्षम्** ।). ಒಂದು ವಸ್ತುವಿನ ಜ್ಞಾನ ಅಥವಾ ಬೋಧೆಯಾಗಬೇಕಾದರೆ ಇಂದ್ರಿಯಗಳಿಗೆ ಅದು ಪ್ರತ್ಯಕ್ಷವಾಗಿ ಗೋಚರವಾಗುವುದು ಆವಶ್ಯಕ. ಮಗುವಿಗೆ ವಿಶಿಷ್ಟ ವಸ್ತುವಿನ ಪ್ರತ್ಯಕ್ಷಜ್ಞಾನದಿಂದ ವಿಶಿಷ್ಟ **ಅರ್ಥವು** (Meaning) ಆಗುತ್ತದೆ. ಅವನು ಅನುಭವಿಸುವ ಬೇರೆ ಬೇರೆ ಅರ್ಥಗಳಿಗೆ —ವಸ್ತುಗಳಿಗೆ—ಬೇರೆ ಬೇರೆ ಹೆಸರು ಕೊಡುತ್ತಾನೆ. ಇದು 'ನಾಯಿ', ಇದು 'ಬೆಕ್ಕು', ಇದು 'ಪುಸ್ತಕ', ಇದು 'ಗಿಡ' ಎಂದು ವಸ್ತುಗಳನ್ನು ಬೇರೆ ಬೇರೆಯಾಗಿ ಗುರುತಿಸತೊಡಗುತ್ತಾನೆ. ಹೀಗೆ ಮಾಡುವಲ್ಲಿ ಅವನು ಕಲಿಯಲಾರಂಭಿಸಿದ ಭಾಷೆಯು ಅವನಿಗೆ ಸಹಾಯವಾಗುತ್ತದೆ.

ಮಗುವಿಗೆ ವಸ್ತುವಿನ ಜ್ಞಾನವು ಹೇಗೆ ಉಂಟಾಗುತ್ತದೆ? ವಸ್ತುವಿನ ಜ್ಞಾನವಾಗುವಾಗ ಮಗುವಿನ ಮನಸ್ಸಿನಲ್ಲಿ **ವಿಶ್ಲೇಷಣ** ಮತ್ತು **ಸಂಶ್ಲೇಷಣ** ಕಾರ್ಯಗಳು ನಡೆಯುತ್ತಿವೆಯೆಂದು ಟಿ. ಪಿ. ನನ್ನ್‌ನು ಹೇಳುತ್ತಾನೆ. ಬೆಕ್ಕಿನ ಮೈಬಣ್ಣ, 'ಮ್ಯಾವ' ಎನ್ನುವ ದನಿ, ಮೃದುವಾದ ಕೂದಲು ಇವೆಲ್ಲ ಅನುಭವಗಳು ಒಟ್ಟುಗೂಡಿ ಇದು 'ಬೆಕ್ಕು' ಎಂಬ ಒಂದು ಸಾಮಾನ್ಯ ಅರ್ಥವನ್ನು ತಂದುಕೊಡುತ್ತವೆ. ಹೀಗೆ ಒಂದು ವಸ್ತುವಿಗೆ ಅಥವಾ ಒಂದು ವಿಷಯಕ್ಕೆ ಸಂಬಂಧಿಸಿದ ಲಕ್ಷಣಗಳನ್ನು ಒಟ್ಟುಗೂಡಿಸುವುದಕ್ಕೆ 'ಸಂಶ್ಲೇಷಣ' ಅಥವಾ 'ಸಂಯೋಜನೆ' ಎನ್ನುತ್ತಾರೆ. ಆದರೆ 'ಬೆಕ್ಕು' ಎಂಬ ವಸ್ತುವಿಗೆ ಸಂಬಂಧಪಟ್ಟ ಎಲ್ಲ ಅನುಭವಗಳು ಅದನ್ನು 'ಪುಸ್ತಕ', 'ನಾಯಿ', 'ಪೆಟ್ಟಿಗೆ' ಮುಂತಾದ ಇತರ ವಸ್ತುಗಳಿಂದ ಬೇರೆ ಮಾಡಿ ತೋರಿಸುತ್ತವೆ.

ಹೀಗೆ ವಿವಿಧ ಜಾತಿಯ ವಸ್ತುಗಳನ್ನು ಬೇರೆ ಬೇರೆ ಮಾಡಿ ತೋರಿಸುವುದಕ್ಕೆ 'ವಿಶ್ಲೇಷಣ' ಅಥವಾ 'ವಿಭಜನೆ' ಎನ್ನುತ್ತಾರೆ. ಬುದ್ಧಿಯ ಯಾವುದೇ ಕಾರ್ಯವಿರಲಿ—ಸರಳ ವಿಚಾರವೇ ಇರಲಿ, ಸೂಕ್ಷ್ಮ ವಿಚಾರವೇ ಇರಲಿ— ಅದರಲ್ಲಿ ಈ ವಿಶ್ಲೇಷಣ-ಸಂಶ್ಲೇಷಣ ತತ್ವವು ಅಡಕವಾಗಿರುತ್ತದೆ

ಪ್ರತ್ಯಕ್ಷಜ್ಞಾನದಲ್ಲಿ ವಸ್ತುವಿನ ಆರಂಭದ ಜ್ಞಾನವಾಗುತ್ತದೆ ಮತ್ತು ಮನಸ್ಸು ವಸ್ತುವಿನಲ್ಲಿ ಈ ಅರ್ಥವನ್ನು ಆರೋಪಿಸುತ್ತದೆ. ವಸ್ತುವಿನ ಬಗೆಗೆ ಅನುಭವವು ಹೆಚ್ಚು ಹೆಚ್ಚು ಆದ ಹಾಗೆ ಆ ವಸ್ತುವಿನ ಅರ್ಥವು ವಿಸ್ತೃತವೂ ಸಂಪೂರ್ಣವೂ ಆಗತೊಡಗುತ್ತದೆ. ಇದಕ್ಕೆ ಅನುಬೋಧೆ (Apperception) ಎಂದು ಅನ್ನುತ್ತಾರೆ. ಅಂದರೆ, ಅನುಬೋಧೆಯಲ್ಲಿ ವಸ್ತುವಿನ ಪರಿಚಯವು ಹೆಚ್ಚುತ್ತ ಹೋಗುವುದರಿಂದ ನಮ್ಮಲ್ಲಿ ಅದರ ಬಗೆಗೆ ಜ್ಞಾನವೂ ಅಭಿವೃದ್ಧಿ ಹೊಂದುತ್ತ ಹೋಗುತ್ತದೆ. ಮಗುವು ನಿನ್ನೆ ಪರಿಚಿತವಾದ ಬೆಕ್ಕನ್ನು ಇಂದು ಪುನಃ ನೋಡಿದರೆ ಅವನ ಪೂರ್ವದ ಅನುಭವಗಳು ಹೆಚ್ಚು ಸ್ಪಷ್ಟವಾಗುತ್ತವೆ. ಇದು 'ನಿನ್ನೆ ನೋಡಿದ ಬೆಕ್ಕು' ಎಂದು ಮಗುವಿಗೆ ಹೊಳೆಯುತ್ತದೆ. ಮುಂದೆ ಅವನಿಗೆ ಬೆಕ್ಕಿನ ಹೊಸ ಹೊಸ ಲಕ್ಷಣಗಳು ತಿಳಿಯುತ್ತ ಹೋದಂತೆ ಅವನ ಅನುಭವಶೇಷಗಳು ಅಥವಾ ಭಾವಗ್ರಂಥಿಯು (Engram Complex) ರೂಪಾಂತರವನ್ನು ಹೊಂದುವ ಕಾರ್ಯವನ್ನು ನಡೆಯಿಸಿರುವುದರಿಂದ ಇಂದಿನ ಬೆಕ್ಕು ಮಗುವಿಗೆ ಒಂದು ರೀತಿಯಿಂದ 'ಹೊಸ ಬೆಕ್ಕೇ' ಆಗಿರುತ್ತದೆ. ಹೀಗೆ ಪೂರ್ವಾನುಭವದ ಫಲಿತಾಂಶವಾಗಿ ವಸ್ತುವಿಗೆ ಹೊಸ ಅರ್ಥವು ಬರುತ್ತದೆ. ಅನುಬೋಧೆಯು ಕೇವಲ ಪ್ರತ್ಯಕ್ಷ ಜ್ಞಾನಕ್ಕೆ ಸಂಬಂಧಿಸಿರದೆ ಕಲ್ಪನೆಗೂ ಸಂಬಂಧಿಸಿದೆ. ವಸ್ತುವಿನ ಬಗೆಗೆ ಹೆಚ್ಚು ಹೆಚ್ಚು ಜ್ಞಾನಮಾಡಿಕೊಂಡ ಹಾಗೆ, ಹೆಚ್ಚು ಹೆಚ್ಚು ಲಕ್ಷಣಗಳನ್ನು ಕಂಡಹಾಗೆ ಅನುಬೋಧೆಯು ಅಭಿವೃದ್ಧಿಗೊಳ್ಳುತ್ತದೆ. ಸಿಂಹ, ಹುಲಿ, ಚಿರ್ತು ಮೊದಲಾದ ಕ್ರೂರ ಪ್ರಾಣಿಗಳ ವರ್ಗಕ್ಕೆ ಬೆಕ್ಕು ಸೇರಿರುವುದೆಂಬ ಕಲ್ಪನೆಯಾದಾಗ ಮಗುವಿನ ಅನುಬೋಧೆಯು ವಿಕಸಿತವಾಗಿ ವಿಚಾರಾತ್ಮಕ ಮಟ್ಟಕ್ಕೆ ಏರುತ್ತದೆ.

ಇಂದ್ರಿಯ ಗೋಚರವಾದ ಬಾಹ್ಯವಸ್ತುಗಳನ್ನು ತಿಳಿದುಕೊಳ್ಳುವಾಗ ಪ್ರತ್ಯಕ್ಷಜ್ಞಾನವುಂಟಾಗುತ್ತದೆ. ಪಂಚೇಂದ್ರಿಯಗಳೇ ಸರ್ವ ಜ್ಞಾನಕ್ಕೆ ಮುಖ್ಯ

ಸಾಧನಗಳು. ಇಂದ್ರಿಯಗಳು ಜ್ಞಾನದ ದ್ವಾರಗಳು. ಪಂಚೇಂದ್ರಿಯಗಳನ್ನು ಏಕಕಾಲಕ್ಕೆ ಉಪಯೋಗಿಸುವುದರಿಂದ ವಸ್ತುವಿನ ಸಂಪೂರ್ಣ ಜ್ಞಾನವು ಉಂಟಾಗುತ್ತದೆ. ಮಗುವಿಗೆ ಒಂದು ಹೂವಿನ ಸಂಪೂರ್ಣ ಜ್ಞಾನವಾಗ ಬೇಕಾದರೆ ಅವನು ಮೊದಲು ಅದನ್ನು ಕಣ್ಣಿನಿಂದ ನೋಡಬೇಕು; ಕೈಯಿಂದ ಮುಟ್ಟಬೇಕು; ಮೂಗಿನಿಂದ ಮೂಸಿನೋಡಬೇಕು; ಮತ್ತು ನಾಲಿಗೆಯಿಂದ ರುಚಿ ನೋಡಬೇಕು. ಹೀಗೆ ಶಿಕ್ಷಕರು ಸಾಧ್ಯವಿದ್ದಷ್ಟು ಹೆಚ್ಚು ಇಂದ್ರಿಯಗಳ ಸಹಾಯದಿಂದ ವಿದ್ಯಾರ್ಥಿಗಳಿಗೆ ವಸ್ತುವಿನ ಜ್ಞಾನವಮಾಡಿಕೊಡಬೇಕು.

ಪ್ರತ್ಯಕ್ಷಜ್ಞಾನವು ಇಂದ್ರಿಯಗಳಿಗೆ ಸಂಬಂಧಿಸಿದ ಜ್ಞಾನವಾದರೂ ಅದು ಮನಸ್ಸಿನ ಒಂದು ಕ್ರಿಯೆಯು. ಅನೇಕ ಬಾಹ್ಯವಸ್ತುಗಳ ಆಘಾತವು ಇಂದ್ರಿಯಗಳ ಮೇಲೆ ಆಗುತ್ತಿರುತ್ತದೆ. ಆದರೆ ಮನಸ್ಸು ತನಗೆ ಬೇಕಾದುದ ನ್ನಷ್ಟೆ ಸ್ವೀಕರಿಸಬಲ್ಲುದು. ಏಕಾಗ್ರಚಿತ್ತದಿಂದ ಬರೆಯುತ್ತ ಕುಳಿತಿರುವಾಗ ನಾನು ಹೊರಗಿನ ಗಾಡಿಯ ಸಪ್ಪಳಕ್ಕಾಗಲಿ ಹುಡುಗರ ಆಟದ ಕಡೆಗಾಗಲಿ ಗಮನ ಕೊಡುವುದಿಲ್ಲ. ಏಕೆ? ನನ್ನ ಕಿವಿಯ ಪಟಲದ ಮೇಲೆ ಸಪ್ಪಳದ ಆಘಾತವು ಬಿದ್ದರೂ ಮನಸ್ಸು ಅದನ್ನು ಅನುಲಕ್ಷಿಸುವುದಿಲ್ಲ. ಆದ್ದರಿಂದ ವಿದ್ಯಾರ್ಥಿಗಳು ಚರ್ಮಚಕ್ಷುವಿನಿಂದ ಶಿಕ್ಷಕನ ಕಡೆಗೆ ಕೇವಲ ನೋಡುತ್ತಿದ್ದರೆ ಅವರು ವಿಷಯದಲ್ಲಿ ನಿಶ್ಚಯವಾಗಿ ಅವಧಾನವನ್ನು ಇಟ್ಟಿರುವರೆಂದು ಊಹಿಸಲಿಕ್ಕೆ ಆಗದು. ವಿಷಯಗ್ರಹಣಕ್ಕೆ ಮನಶ್ಚಕ್ಷುವಿನ ನೋಟವು ಅತ್ಯಾವಶ್ಯಕ.

೨. **ಕಲ್ಪನಾಶಕ್ತಿ** (Imagination).—ಪ್ರತ್ಯಕ್ಷಜ್ಞಾನವು ವಿಚಾರ (Thinking) ಶಕ್ತಿಯ ಬೆಳವಣಿಗೆಯ ಮೊದಲನೆಯ ಮೆಟ್ಟು. ಇಂದ್ರಿಯ ಗಳ ಸಹಾಯವಿಲ್ಲದೆ ನಡೆಯುವ ಎಲ್ಲ ಬಗೆಯ ವಿಚಾರಕ್ಕೆ ಕಲ್ಪನಾಶಕ್ತಿ ಎಂದೆನ್ನಬಹುದು. ಕಲ್ಪನೆಯು ವಿಚಾರಶಕ್ತಿಯ ಎರಡನೆಯ ಮೆಟ್ಟು. ಈ ಕಲ್ಪನಾಶಕ್ತಿಯು ವಿವಿಧ ರೂಪಗಳನ್ನು ತಾಳುತ್ತದೆ—(೧) (ಅ) ಪ್ರತಿಮಾ-ಕಲ್ಪನೆ, (ಆ) ಸಾಮಾನ್ಯ-ಕಲ್ಪನೆ, (೨) (ಇ) ಕ್ರಿಯಾಸಂಬಂಧವಾದ ಕಲ್ಪನೆ, ಅನುಮಾನ; (ಈ) ಕಲಾಸಂಬಂಧವಾದ ಕಲ್ಪನೆ ಮತ್ತು (ಉ) ನೀತಿ ಸಂಬಂಧವಾದ ಕಲ್ಪನೆ. ಕಲ್ಪನಾ-ಶಕ್ತಿಯ ಈ ಪ್ರಭೇದಗಳ ಪರಿಚಯವು ಶಿಕ್ಷಣಕ್ಷೇತ್ರದಲ್ಲಿ ಮಹತ್ವದ ಸಹಾಯವನ್ನೀಯುವುದರಿಂದ ಅವುಗಳನ್ನು ಕುರಿತು ಇಲ್ಲಿ ಸಂಕ್ಷೇಪವಾಗಿ ವಿವರಿಸುವ.

(೬) **ಪ್ರತಿಮಾಕಲ್ಪನೆ** ( Imagery ).— ಪ್ರತ್ಯಕ್ಷಾನುಭವದಲ್ಲಿ ವಸ್ತುವು ಇಂದ್ರಿಯಗೋಚರವಾಗಿರುತ್ತದೆ. ಒಂದು ಪುಸ್ತಕವು ಪ್ರತ್ಯಕ್ಷವಾಗಿ ನನ್ನ ಕಣ್ಣೆದುರಿಗಿದ್ದಾಗ ನನಗೆ ಅದರ ಪ್ರತ್ಯಕ್ಷಜ್ಞಾನವಾಗುತ್ತದೆ. ಆದರೆ ಕಣ್ಣು ಮುಚ್ಚಿಕೊಂಡು ಪುಸ್ತಕದ ಆಕಾರ, ಬಣ್ಣಗಳನ್ನು ಕಲ್ಪಿಸುವಾಗ ನನ್ನ ಮನಸ್ಸಿನೆದುರಿಗೆ ಪುಸ್ತಕದ ಪ್ರತಿಮೆಯು ಬಂದು ನಿಲ್ಲುತ್ತದೆ. ಹೀಗೆ ಪ್ರತಿಯೊಂದು ಇಂದ್ರಿಯಕ್ಕೆ ಸಂಬಂಧಿಸಿದ ಸಾಕಾರ ವಸ್ತುವನ್ನು (ಅಥವಾ ವಿಷಯವನ್ನು) ಅದರ ಅಭಾವದಲ್ಲಿ ನಾವು ಸ್ಮರಣೆಗೆ ತಂದುಕೊಳ್ಳುವಾಗ ನಮ್ಮ ಮನಸ್ಸಿನಲ್ಲಿ ಆ ವಸ್ತುವಿನ ಪ್ರತಿಮೆಯು ಮೂಡುತ್ತದೆ. ಆದುದರಿಂದ **ಪ್ರತ್ಯಕ್ಷಾನುಭವಕ್ಕೆ ಮೊದಲು ಆಧಾರವಾಗಿದ್ದ ವಸ್ತುವನ್ನು ಅದರ ಅಭಾವದಲ್ಲಿ ಮನಶ್ಚಕ್ಷುವಿನಿಂದ ಗ್ರಹಿಸುವುದೇ ಪ್ರತಿಮಾ–ಕಲ್ಪನೆ. ಪ್ರತಿಮೆಯು ಪ್ರತ್ಯಕ್ಷ ವಸ್ತುವಿನ ಮಾನಸಿಕ ಪಡಿಯಚ್ಚು.** ಇಂದ್ರಿಯ ಜನ್ಯ ಪ್ರತಿಮೆಗಳನ್ನಷ್ಟೇ ಅಲ್ಲದೆ ಹಸಿವು, ಜಾಡ್ಯ ಮೊದಲಾದ ಶರೀರದಲ್ಲಿ ಉದ್ಭವಿಸುವ ಸುಖ-ದುಃಖಗಳ ಪ್ರತಿಮೆಗಳನ್ನೂ ಕಲ್ಪಿಸಬಹುದು. ಸಾಮಾನ್ಯ ವಾಗಿ ಮನುಷ್ಯನಲ್ಲಿ ಶ್ರವಣೇಂದ್ರಿಯ ಮತ್ತು ನೇತ್ರೇಂದ್ರಿಯಗಳು ಪ್ರಬಲ ವಾಗಿರುವುದರಿಂದ ಅವುಗಳಿಂದ ಹುಟ್ಟುವ 'ಶ್ರವಣ-ಪ್ರತಿಮೆ'ಗಳೂ 'ನೇತ್ರ-ಪ್ರತಿಮೆ'ಗಳೂ ಪ್ರಬಲವಾಗಿರುತ್ತವೆ. ಆದುದರಿಂದ ಈ ಪ್ರತಿಮೆಗಳು ನಮ್ಮ ವಿಚಾರವಿಕಾಸಕ್ಕೆ ಅತ್ಯಂತ ಮಹತ್ವದ ಸಾಧನಗಳು.

ಶಿಕ್ಷಕನು ತಾನು ಕಲಿಸುವ ಪಾಠಗಳು ಮಕ್ಕಳ ಮನಸ್ಸಿನಲ್ಲಿ ಬಿಂಬಿಸ ಬೇಕಾದರೆ ಚಿತ್ರಗಳನ್ನೂ ಆಕೃತಿಗಳನ್ನೂ ಉಪಯೋಗಿಸಬೇಕು. ಒಂದು ಯಂತ್ರವನ್ನು ಮತ್ತು ಅದರ ಕಾರ್ಯಗಳನ್ನು ಕೇವಲ ಶಬ್ದಗಳಿಂದ ವರ್ಣಿಸಿದರೆ ಬಾಲಕರಿಗೆ ಅದು ಚೆನ್ನಾಗಿ ಹೊಳೆಯದು. ವರ್ಣಿಸುವಾಗ ಯಂತ್ರವನ್ನಾಗಲಿ ಅದು ಸಾಧ್ಯವಿಲ್ಲದಿದ್ದರೆ ಅದರ ಚಿತ್ರವನ್ನಾಗಲಿ ಅವರಿಗೆ ತೋರಿಸಬೇಕು. ಅದರಂತೆ ಗಣಿತ ಕಲಿಸುವಾಗ ಆಕೃತಿಗಳನ್ನೂ ಪ್ರತ್ಯಕ್ಷ ವಸ್ತುಗಳನ್ನೂ ಉಪಯೋಗಿಸಬೇಕು. ಉದಾಹರಣೆಗಾಗಿ ಒಂದೆರಡು ಸಣ್ಣ ಬಾಯಲೆಕ್ಕಗಳನ್ನೇ ತೆಗೆದುಕೊಳ್ಳೋಣ. "ಹನ್ನೆರಡರಲ್ಲಿ ಐದು ಕಳೆದರೆ ಎಷ್ಟು ಉಳಿಯುವುದು?" ಎಂದು ಕೇಳಿದಾಗ ಎಷ್ಟೋ ಹುಡುಗರು ಬೆರಳು ಎಣಿಸುವುದನ್ನು ನಾವು ನೋಡುತ್ತೇವೆ. ಎಂದರೆ ತರ್ಕ ಮಾಡುವಾಗಲೂ

ಪ್ರತ್ಯಕ್ಷ ವಸ್ತುವಿನ ಸಹಾಯವು ಬೇಕಾಗುತ್ತದೆ. "ಇಪ್ಪತ್ತು ದಸ್ತು ಹಾಳೆಗಳಿಗೆ ಎಂಟು ರೂಪಾಯಿ ಬೆಲೆಯಾದರೆ ಒಂದು ದಸ್ತಿನ ಬೆಲೆ ಎಷ್ಟು?" ಎಂದು ಕೇಳಿದರೆ ಎಷ್ಟೋ ಚೆನ್ನಾಗಿ ಓದುಬರೆಹ ಬಲ್ಲ ಪದವೀಧರರೂ ಕಾಗದ ಪೆನ್ಸಿಲುಗಳನ್ನು ತೆಗೆದುಕೊಂಡು ಅಂಕಿ ಹಾಕುವುದನ್ನು ನಾವು ನೋಡಬಹುದು. ಇಲ್ಲಿ ಅಂಕಿಗಳೇ ಸ್ಥೂಲವಸ್ತುಗಳು. ಆದುದರಿಂದ ಶಿಕ್ಷಕನು ನೇತ್ರ-ಪ್ರತಿಮೆಗಳನ್ನೂ ವಿಷಯ ವರ್ಣಿಸುವಾಗ ಕರಿಹಲಿಗೆಯನ್ನೂ ಹೆಚ್ಚಾಗಿ ಉಪಯೋಗಿಸಬೇಕು. ಇದಕ್ಕೆ "ಬಣ್ಣದಿಂದ ವರ್ಣಿಸುವ ಪದ್ಧತಿ" —ರೇಖಿಸುತ್ತ ವರ್ಣಿಸುವ ಪದ್ಧತಿ—(Talk and Chalk Method) ಎನ್ನುತ್ತಾರೆ. ಅಂದರೆ ವಿಷಯವನ್ನು ವರ್ಣಿಸುವಾಗ ಶಿಕ್ಷಕನು ಶಬ್ದವರ್ಣನೆಯೊಡನೆ ಪ್ರಸಂಗಾನುಸಾರ ಖಡುವನ್ನು ಉಪಯೋಗಿಸಬೇಕು. ಮಕ್ಕಳು ಕೇಳಿ ಕಲಿಯಬೇಕು, ನೋಡಿ ಕಲಿಯಬೇಕು, ಮಾಡಿ ಕಲಿಯಬೇಕು.

(ಆ) **ಸಾಮಾನ್ಯ-ಕಲ್ಪನೆ** (Concept).— ಮನುಷ್ಯನ ಮನಸ್ಸು ಪಕ್ವವಾದಂತೆ ಮತ್ತು ಅನುಭವವು ಹೆಚ್ಚಾದಂತೆ ಜ್ಞಾನವೂ ಹೆಚ್ಚಾಗುತ್ತ ಹೋಗುತ್ತದೆ. ಪ್ರತ್ಯಕ್ಷ ಜ್ಞಾನಕ್ಕಿಂತಲೂ ಸಾಮಾನ್ಯ ಕಲ್ಪನೆಯು ಬುದ್ಧಿಯ ಮೇಲ್ತರದ ಮಟ್ಟವು. ಪ್ರಾಣಿಗಳು ಇಂದ್ರಿಯಾತ್ಮಕ ಪ್ರತ್ಯಕ್ಷಜ್ಞಾನದ ಮಟ್ಟವನ್ನು ಮೀರಲಾರವೆಂದು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ಮನುಷ್ಯನ ವೈಶಿಷ್ಟ್ಯವೇನೆಂದರೆ ಅವನು ತನ್ನ ಬುದ್ಧಿಬಲದಿಂದ ಇಂದ್ರಿಯ ಗೋಚರವಲ್ಲದ ವಸ್ತುಗಳನ್ನು ಮತ್ತು ಸಂಗತಿಗಳನ್ನು ವಿಚಾರಿಸಬಲ್ಲನು. ಮನಸ್ಸಿನ ಈ ಕ್ರಿಯೆಗೆ 'ವಿಚಾರ' (Thinking) ಎಂದು ಹೇಳುವ ರೂಢಿ ನಮ್ಮಲ್ಲಿದೆ. ಈ ವಿಚಾರವು ನಡೆದಾಗ ಮನಸ್ಸು ಇಂದ್ರಿಯಾತ್ಮಕ ಜಗತ್ತಿನಿಂದ ವಿಚ್ಛೇದಿಸಲ್ಪಟ್ಟ ಸಾಮಾನ್ಯ-ಕಲ್ಪನೆ (Concept) ಗಳೊಡನೆ ಅಥವಾ ಭಾವನೆ (Idea) ಗಳೊಡನೆ ವ್ಯವಹರಿಸುತ್ತದೆ.

ಸಾಮಾನ್ಯ-ಕಲ್ಪನೆ ಎಂದರೇನು? ಅದು ನಮ್ಮಲ್ಲಿ ಹೇಗೆ ಉಂಟಾಗುತ್ತದೆ? ಒಂದು ವರ್ಗಕ್ಕೆ ಸೇರಿದ ಎಲ್ಲ ವಸ್ತುಗಳಲ್ಲಿ ಮಾತ್ರ ಕಂಡುಬರುವ ಸಾಮಾನ್ಯ ಲಕ್ಷಣಗಳನ್ನು ಒಟ್ಟಿನಲ್ಲಿ ನಿರ್ದೇಶಿಸುವ ಸಂಕೇತವೇ 'ಸಾಮಾನ್ಯ ಕಲ್ಪನೆ' ಅಥವಾ 'ಭಾವನೆ'. ಮಗುವು ತನಗೆ ಪರಿಚಿತವಾದ ಬೆಕ್ಕಿನಂತಹ

ಅನೇಕ ವಸ್ತುಗಳನ್ನು ನೋಡುತ್ತಾನೆ. ಇವೆಲ್ಲ ವಸ್ತುಗಳು ' ಬೆಕ್ಕು ' ಎಂದು ಅವನಿಗೆ ಕಲ್ಪನೆಯುಂಟಾಗುತ್ತದೆ. ಏಕೆಂದರೆ ಬೆಕ್ಕಿನ ಆಕಾರಕ್ಕೆ ಸಮನಾಗಿ ಇರುವ ಆಕಾರ, ಬಣ್ಣ, ಕಾಲು, ಕಿವಿ, ಬಾಲ ಮೊದಲಾದ ಅಂಗರಚನೆಯ ಒಂದು ಚಿತ್ರವು ಮಗುವಿನ ಮನಸ್ಸಿನಲ್ಲಿ ಮೂಡುತ್ತದೆ. ಇದರಂತೆ ಮಗುವಿನ ಜ್ಞಾನವು ಬೆಳೆಯಲು ಹುಲಿ, ಸಿಂಹ, ಚಿರ್ಚ ಮೊದಲಾದುವು ಬೆಕ್ಕಿನ ಜಾತಿಯ ಪ್ರಾಣಿಗಳೆಂಬ ಕಲ್ಪನೆಯು ಬರುತ್ತದೆ ಒಂದೇ ತೆರನಾದ ವಿಶಿಷ್ಟ ಲಕ್ಷಣಗಳನ್ನು ಬೇರೆ ಮಾಡಿ ಒಂದುಗೂಡಿಸುವ ಕಾರ್ಯವು ಬುದ್ಧಿಯ ಲಕ್ಷಣವು. ಮಗುವು ಅಂಕಗಣಿತದ ಲೆಕ್ಕವನ್ನು ಬಿಡಿಸುವ ರೀತಿಯನ್ನು ಕಲಿಯುವಾಗ ಈ ವಿಶ್ಲೇಷಣ–ಸಂಶ್ಲೇಷಣಗಳ ಕ್ರಿಯೆಯು ಅವನಲ್ಲಿ ವ್ಯಕ್ತವಾಗುತ್ತದೆ. ಸರಳಬಡ್ಡಿಯ ಅನೇಕ ಲೆಕ್ಕಗಳನ್ನು ನಾವು ಅವನಿಗೆ ಬಿಡಿಸಿ ತೋರಿಸುತ್ತೇವೆಂದು ತಿಳಿಯುವ. ಅಸಲು, ಮುದ್ದತು ಮತ್ತು ರಾಸು ಕೊಟ್ಟರೆ ಬಡ್ಡಿಯ ದರವನ್ನು ತೆಗೆಯುವ ಕ್ರಮವು ಅನೇಕ ಉದಾಹರಣೆಗಳಲ್ಲಿ ಒಂದೇ ಆಗಿರುತ್ತದೆ. ಈ ಎಲ್ಲ ಉದಾಹರಣೆಗಳಲ್ಲಿ ಅಡಕವಾಗಿರುವ ಸಾಮಾನ್ಯ ರೀತಿಯನ್ನು ವಿದ್ಯಾರ್ಥಿಯು ಬೇರ್ಪಡಿಸಿ ತೆಗೆಯುತ್ತಾನೆ; ಲೆಕ್ಕ ವನ್ನು ಬಿಡಿಸುವ ಕ್ರಮದಲ್ಲಿ ಹೆಚ್ಚಾಗಿ ಲಕ್ಷ್ಯವನ್ನು ಕೇಂದ್ರೀಕರಿಸುತ್ತಾನೆ

' ಸಾಮಾನ್ಯ ಕಲ್ಪನೆಗಳು ' ಮನಸ್ಸಿನಲ್ಲಿ ನೆಲೆಗೊಳ್ಳಲಿಕ್ಕೂ ಅಭಿವೃದ್ಧಿ ಹೊಂದಲಿಕ್ಕೂ ಭಾಷೆಯು ಅತ್ಯಂತ ಸಹಾಯವಾಗುತ್ತದೆ. ಭಾಷೆಯ ಉತ್ಪತ್ತಿಯನ್ನು ನೋಡಿದರೆ ಅದು ಕಲ್ಪನೆಗಳಂತೆ ಸ್ಥೂಲವಸ್ತುಗಳಲ್ಲಿಯೆ ಉದ್ಭವಿಸಿದ ಹಾಗೆ ತೋರುತ್ತದೆ. ಭಾಷೆಯು ವಿಚಾರವಿನಿಮಯದ ಸಾಧನವು. ತನ್ನ ಅನುಭವಗಳನ್ನೂ ವಿಚಾರಗಳನ್ನೂ ಇಚ್ಛೆಗಳನ್ನೂ ಅನ್ಯರಿಗೆ ತಿಳಿಸು ವಾಗ ಮನುಷ್ಯನು ಭಾಷೆಯನ್ನು ಉಪಯೋಗಿಸಲೇ ಬೇಕಾಗುತ್ತದೆ. ಮಾತು ಬಾರದ ಚಿಕ್ಕಮಕ್ಕಳೂ ಮೂಕರೂ ತಮ್ಮ ಮನದೊಳಗಿದ್ದುದನ್ನು ಅಭಿನಯ ದಿಂದಲೊ ಸನ್ನೆಯಿಂದಲೊ ತಿಳಿಸುತ್ತಾರೆ. ಇವಕ್ಕೆ ' ಸಾಂಕೇತಿಕ ಭಾಷೆ ' ಎಂದು ಅನ್ನುವ ರೂಢಿಯು ನಮ್ಮಲ್ಲಿ ಉಂಟು. ಅಭಿನಯವು ಕೂಡ ಒಂದು ವಿಶಿಷ್ಟರೂಪವನ್ನು ತಾಳಿದ ಭಾಷೆಯೇ ಆಗಿರುತ್ತದೆ. ಶ್ರೀ. ಉದಯಶಂಕರ ಮೊದಲಾದ ನಟರ ಅಂಗಭಂಗಿಗಳು, ಅಂಗವಿನ್ಯಾಸಗಳು, ಭರತನಾಟ್ಯದ ಮುದ್ರೆಗಳೂ ಭಾಷೆಯೇ ! ಶಬ್ದಗಳೂ ಒಂದು ಬಗೆಯ ಸಂಕೇತಗಳೇ.

ಪ್ರತ್ಯಕ್ಷ ವಸ್ತುಗಳ ಪ್ರತಿನಿಧಿಗಳೇ ಶಬ್ದಗಳು. ಮಾತನಾಡುವಾಗ ಪ್ರತ್ಯಕ್ಷ ವಸ್ತುಗಳ ಬದಲಾಗಿ ಅವುಗಳನ್ನೇ ಸೂಚಿಸುವಂಥ ಶಬ್ದಗಳನ್ನು ಉಪಯೋಗಿಸ ಲಾಗುತ್ತದೆ. 'ಪುಸ್ತಕ', 'ಪೆಟ್ಟಿಗೆ' ಎಂಬ ಶಬ್ದಗಳು ಆಯಾ ವಸ್ತುಗಳ ಶಬ್ದಸಂಕೇತಗಳು. ವಸ್ತುಗಳ ಕಲ್ಪನೆಯು ಮನದಲ್ಲಿ ದೃಢವಾಗಿ ನಿಲ್ಲಲಿಕ್ಕೂ ಇತರರೊಡನೆ ವ್ಯವಹರಿಸುವಾಗ ಅವುಗಳನ್ನು ಉಪಯೋಗಿಸಲಿಕ್ಕೂ ಶಬ್ದಗಳು ಅತ್ಯಂತ ಸಹಾಯಕವಾಗಿರುತ್ತವೆ. ಪ್ರೊ. ಸ್ಪಿಯರಮನ್‌ನು ಹೇಳುವಂತೆ "ಶಬ್ದಗಳು ವಿಚಾರವಿನಿಮಯದ ನಾಣ್ಯಗಳು". ಮಕ್ಕಳ ವಿಚಾರಶಕ್ತಿಯು ಬೆಳೆಯಬೇಕಾದರೆ ಅವರ ಭಾಷಾಜ್ಞಾನವನ್ನು ಬೆಳೆಯಿಸ ಬೇಕು. ಇದನ್ನರಿತುದರಿಂದಲೇ ತಜ್ಞರು ಭಾಷಾವಿಷಯಕ್ಕೆ ಶಿಕ್ಷಣದಲ್ಲಿ ಅಷ್ಟೊಂದು ಶ್ರೇಷ್ಠವಾದ ಸ್ಥಾನವನ್ನು ಕೊಟ್ಟಿರುವರು. ಏಕೆಂದರೆ, ಭಾಷೆಯು ವಿಚಾರದ ನೆಲಗಟ್ಟು.

ಕೆಲವರಿಗೆ ಶಬ್ದಗಳು ಸಂಕೇತಗಳಾಗಿರದೆ ವಸ್ತುಗಳೇ ಆಗಿರುವವು. ಅಂದರೆ ಶಬ್ದಗಳು ವಸ್ತುಗಳ ಪ್ರತಿನಿಧಿಗಳಾಗಿರದೆ ಮೂಲ ವಸ್ತುಗಳೇ ಆಗಿರುವುವೆಂದು ಅವರು ನಂಬುತ್ತಾರೆ. ಅಪರಿಚಿತರು ನಮ್ಮ ಹೆಸರನ್ನು ಕೇಳಿದರೆ ನಾವು ಹೇಳಲು ಹಿಂದುಮುಂದು ನೋಡುತ್ತೇವೆ. ಶಿಕ್ಷಕನು ವಿದ್ಯಾರ್ಥಿಗಳನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳಬೇಕಾದರೆ ಅವರ ಹೆಸರುಗಳ ಪರಿಚಯವನ್ನು ಮಾಡಿಕೊಳ್ಳಬೇಕು. ವರ್ಗದಲ್ಲಿ ಕಿಡಿಗೇಡಿಯಾದ ಹುಡುಗರ ಹೆಸರನ್ನು ಬರೆದುಕೊಳ್ಳುವುದು ಪರಿಣಾಮಕಾರಕವಾಗಿರುತ್ತದೆ.

(ಇ) **ಕ್ರಿಯಾಸಂಬಂಧವಾದ ಕಲ್ಪನೆ** (Pragmatic Imagination).—ಇದಕ್ಕೆ 'ವ್ಯಾವಹಾರಿಕ ದೃಷ್ಟಿ' ಎಂದೂ ಕರೆಯುವುದುಂಟು. ಇದು ಬಾಹ್ಯಪರಿಸ್ಥಿತಿಯಿಂದ ನಿಯಂತ್ರಿತವಾದುದು. ಕಾರ್ಯದಲ್ಲಿ ಯಶಸ್ವಿ ಯಾಗಬೇಕೆಂಬ ಆಲೋಚನೆಯೇ ಈ ಕಲ್ಪನೆಯು. ಪ್ರವಾಸಿಕನು ಊರನ್ನು ಮುಟ್ಟಬೇಕಾದರೆ ಯಾವ ದಾರಿಯಿಂದ ಹೋಗಬೇಕೆಂಬುದನ್ನು ಕಲ್ಪಿಸು ತ್ತಾನೆ. ವ್ಯಾಪಾರಿಗಳು, ವಕೀಲರು, ಇಂಜನಿಯರರು ಮುಂತಾದ ಜನರ ವ್ಯವಸಾಯದ ವಿಚಾರಗಳು ಕ್ರಿಯಾತ್ಮಕ ಕಲ್ಪನೆಗಳು. ಮಕ್ಕಳು ವ್ಯವಹಾರ ದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಕಲಿಯುವಾಗ ಈ ತರದ

ಕಲ್ಪನೆಯು ಅವರಿಗೆ ಸಹಾಯವಾಗುತ್ತದೆ. ಅನೇಕ ಶಾಸ್ತ್ರೀಯ ಸಂಶೋಧನಗಳಿಗೆ ಈ ಕಲ್ಪನೆಯೆ ಆಧಾರವಾಗಿದೆ. ಅನುಮಾನ ಅಥವಾ ತರ್ಕ ಎಂಬುದು ಈ ಕಲ್ಪನೆಯ ಒಂದು ರೂಪವು. ಬೌದ್ಧಿಕ ಶಿಕ್ಷಣದಲ್ಲಿ ಅದು ಅತ್ಯಂತ ಮಹತ್ವವಾದುದು.

**ಅನುಮಾನ** (Reasoning) — ಒಂದು ಸಮಸ್ಯೆಯನ್ನು ಬಿಡಿಸುವಾಗ ನಾವು ಅನುಮಾನಿಸುತ್ತೇವೆ ಅಥವಾ ತರ್ಕಿಸುತ್ತೇವೆ ಅನುಮಾನದಲ್ಲಿ ಒಂದು ಉದ್ದೇಶವಿರುತ್ತದೆ, ಗುರಿಯಿರುತ್ತದೆ. ಆದರೆ, ಯಾವ ಸಾಧನೆಯಿಂದ ಆ ಗುರಿಯನ್ನು ಮುಟ್ಟಬೇಕು? ಎಂಬುದನ್ನು ಮನದೊಳಗೆ ವಿಚಾರ ಮಾಡುವುದೇ ಅನುಮಾನವಾಗುತ್ತದೆ. ಅನುಮಾನವು "ಕಲ್ಪನಾತ್ಮಕ ಪ್ರಯೋಗವು" ನಾವು ಆಲೋಚಿಸುವ ಯಾವುದೇ ಸಂಗತಿಯ ಪರಿಣಾಮವನ್ನು ಕಂಡುಹಿಡಿಯಬೇಕಾದರೆ ಅದರ ಪೂರ್ವಾಪರ ಸಂಬಂಧವನ್ನು ಮನಸ್ಸಿನಲ್ಲಿ ವಿಚಾರಿಸಬೇಕು ಹೀಗೆ ಮನಸ್ಸಿನಲ್ಲಿ ವಿಚಾರಿಸುವಾಗ ಅಥವಾ ತರ್ಕಿಸುವಾಗ ಒಂದು ಬಗೆಯ ಕಾಲ್ಪನಿಕ ಪ್ರಯೋಗವೇ ನಡೆಯುತ್ತಿರುತ್ತದೆ ಈ ಮಾತು ಒಂದೆರಡು ಉದಾಹರಣೆಗಳಿಂದ ಸ್ಪಷ್ಟವಾಗಬಹುದು. ಒಬ್ಬ ಕಾಯಿಪಲ್ಲೆ ಮಾರುವವನಲ್ಲಿ ನಾವು ಏಳಾಣೆಯ ಕಾಯಿಪಲ್ಲೆ ಕೊಂಡು ಒಂದು ರೂಪಾಯಿಯನ್ನು ಅವನಿಗೆ ಕೊಟ್ಟರೆ ಅವನು ಒಂದು ರೂಪಾಯಿಯ ಚಿಲ್ಲರೆಯನ್ನು ಪೂರ್ತಿಯಾಗಿ ಕೊಟ್ಟು, ಬಳಿಕ ನಮ್ಮಿಂದ ಏಳಾಣೆಗಳನ್ನು ಬೇಡುತ್ತಾನೆ. ಇದು ಪ್ರತ್ಯಕ್ಷ ಪ್ರಯೋಗವಾಯಿತು. ಆದರೆ ಅದೇ ಚುರುಕು ಬುದ್ಧಿಯ ಕಾಯಿಪಲ್ಲೆ ಮಾರುವವನು ಮನದೊಳಗೇ ಲೆಕ್ಕಮಾಡಿ ನಮಗೆ ಒಂಬತ್ತು ಆಣೆಗಳನ್ನು ತಿರುಗಿ ಕೊಟ್ಟುಬಿಡುತ್ತಾನೆ. ಆದರೆ ಅತ್ಯಂತ ಮಂದಮತಿಯಾಗಿದ್ದವನು ಅಂಕೆಗಳ ಸಹಾಯದಿಂದಲೊ ಬೇರೆ ಸಂಕೇತಗಳ ಸಹಾಯದಿಂದಲೊ ಲೆಕ್ಕವನ್ನು ಮಾಡಿ ಮುಂದಿನ ವ್ಯವಹಾರವನ್ನು ನಾಗಿಸುತ್ತಾನೆ. ಚದುರಂಗ ಮತ್ತು ಪಗಡೆಯಾಟದಲ್ಲಿ ಮೊದಲು ಕಾಲ್ಪನಿಕ ಆಟವು ನಡೆಯುತ್ತದೆ. ಹೀಗೆ 'ಕಲ್ಪನಾತ್ಮಕ ಪ್ರಯೋಗ'ಗಳ ಅನೇಕ ಉದಾಹರಣೆಗಳನ್ನು ಕೊಡಬಹುದು.

ವಿದ್ಯಾರ್ಥಿಗಳು ಅಂಕಗಣಿತದ ಮತ್ತು ಬೀಜಗಣಿತದ ಪ್ರಶ್ನೆಗಳನ್ನು ಅಥವಾ ಭೂಮಿತಿಯ ಪ್ರಮೇಯಗಳನ್ನು ಬಿಡಿಸುವಾಗ ಅವರ ಮನದಲ್ಲಿ

ಕಲ್ಪನಾತ್ಮಕ ಪ್ರಯೋಗವು ನಡೆದಿರುತ್ತದೆ. ಮಕ್ಕಳಲ್ಲಿರುವ ಚಿಕಿತ್ಸಕಬುದ್ಧಿಯನ್ನು ಬೆಳೆಯಿಸಬೇಕು. ಮೂಢನಂಬುಗೆಗಿಂತ ಅನುಮಾನದಿಂದ ಸಿದ್ಧವಾದುದನ್ನು ಸ್ವೀಕರಿಸುವುದು ಮನುಷ್ಯಪ್ರಾಣಿಗೆ ಶ್ರೇಯಸ್ಕರವೆಂಬುದನ್ನು ಮಕ್ಕಳು ಅರಿಯಬೇಕು. ವೈಜ್ಞಾನಿಕರು ತರ್ಕದ ಅಥವಾ ಅನುಮಾನದ ಸಹಾಯದಿಂದಲೇ ಒಂದಕ್ಕೊಂದು ಸಂಬಂಧಪಟ್ಟ ವಿಷಯಗಳ ನಿಯಮಗಳನ್ನು ಹುಡುಕಿ ತೆಗೆಯುತ್ತಾರೆ. ಮನುಷ್ಯನ ಸಂಸ್ಕೃತಿಯನ್ನು ಮುಂದುವರಿಸಲಿಕ್ಕೆ ಕಲ್ಪನಾಶಕ್ತಿಯೇ ಕಾರಣವಾಗಿದೆ. ಸಾರಾಂಶವೇನೆಂದರೆ, ನಾವು ಅನುಮಾನಿಸುವಾಗ ಪ್ರತ್ಯಕ್ಷ ವಸ್ತುಗಳ ಪ್ರತಿನಿಧಿಗಳಾದ ಸಂಕೇತ, ಶಬ್ದ ಅಥವಾ ದೃಷ್ಟಿಸಂಬಂಧವಾದ ಪ್ರತಿಮೆಗಳೊಡನೆ ಪ್ರಯೋಗವನ್ನು ಮಾಡುತ್ತೇವೆ.

(ಈ) **ಕಲಾಸಂಬಂಧವಾದ ಕಲ್ಪನೆ** (Aesthetic Imagination).— ಕಲೆಯು ಸೃಷ್ಟಿಯ ಅನುಕರಣವಲ್ಲ. ಕಲೋಪಾಸಕನು ಪರಿಪೂರ್ಣ ಕಲೆಯ ದೃಷ್ಟಿಯಿಂದ ತನ್ನ ಕೃತಿಯನ್ನು ನಿರ್ಮಿಸುತ್ತಾನೆ. ಕವಿಗಳನ್ನು, ಕಾದಂಬರಿಕಾರರನ್ನು, ಚಿತ್ರಕಾರರನ್ನು, ಗಮಕಿಗಳನ್ನು ಅಥವಾ ಶಿಲ್ಪಿಗಳನ್ನು ನಿಯಮಗಳಿಂದ ನಿರ್ಬಂಧಿಸುವವರಾರು? ಕವಿಗಳು ನಿರಂಕುಶರು—(**निरंकुशाः कवयः।**). ಅವರು ತಮ್ಮ ಕಲ್ಪನಾಬಲದಿಂದ ಹೊಸ ಸೃಷ್ಟಿಯನ್ನೇ ನಿರ್ಮಿಸುತ್ತಾರೆ. ಅವರ ಕೃತಿಗಳಿಗೆ ಅವರ ನಿಯಮಗಳೇ ಅನ್ವಯಿಸುತ್ತವೆ. ಉಳಿದವರ ನಿಯಮಕ್ಕೆ ಅವರು ಒಳಗಾಗದವರು. ಕವಿಯು 'ಶಬ್ದಬ್ರಹ್ಮ'ನು. ಬಾಹ್ಯಪ್ರಪಂಚದಲ್ಲಿ ತೋರದ ದೃಶ್ಯಗಳನ್ನು ಅವನ ಕೃತಿಗಳಲ್ಲಿ ಕಾಣಬಹುದು; ಅಂತೆಯೆ "ರವಿ ಕಾಣದುದಂ ಕವಿ ಕಾಣ್ಬಂ" ಎಂಬ ನಾಣ್ಣುಡಿಯು ನಮ್ಮಲ್ಲಿ ಪ್ರಚಾರಕ್ಕೆ ಬಂದಿದೆ. ಶೇಕ್ಸಪಿಯರ್, ಕಾಳಿದಾಸ, ಆದಿಪಂಪ, ಷಡಕ್ಷರಿ ಮೊದಲಾದವರ ಕೃತಿಗಳಲ್ಲಿ ಕಲ್ಪನಾ-ಸಾಮ್ರಾಜ್ಯದ ಸೌಂದರ್ಯದ ನಿಧಿಯು ಕಾಣುವುದು. ಕವಿಗೆ ಶಬ್ದಗಳು ಇದ್ದಹಾಗೆ ಚಿತ್ರಕಾರನಿಗೆ ಬಣ್ಣ, ಗೆರೆಗಳು. ಅವನು ತನ್ನ ಬಣ್ಣ, ಗೆರೆಗಳಿಂದ ತನ್ನ ಕೃತಿಗಳಲ್ಲಿ ಅಪ್ರತಿಮ ಸೌಂದರ್ಯವನ್ನು ತರುತ್ತಾನೆ. ರವಿವರ್ಮ, ಅವನೀಂದ್ರನಾಥ ಟಾಗೋರ, ಕೆ. ವೆಂಕಟನಾರಣಪ್ಪನವರು, ಡಿ. ಜಿ. ಬಡಿಗೇರ, ಮೊದಲಾದವರ ಕೃತಿಗಳು ಚಿತ್ರಶಿಲ್ಪದ ಅತ್ಯುತ್ಕೃಷ್ಟ

ಕಲೆಯ ಕಣಿಗಳು, ಸೌಂದರ್ಯದ ಸಾಮ್ರಾಜ್ಯಗಳು. ಈ ಕಲೋಪಾಸಕರಿಗೆ ಕಲೆಯೇ ಸೌಂದರ್ಯ, ಸೌಂದರ್ಯವೇ ಕಲೆ ಕಲೋಪಾಸಕರು ತಾವಾಗಿಯೆ ಹಾಕಿಕೊಂಡ ನಿಯಮಗಳನ್ನು ಉಲ್ಲಂಘಿಸುವುದಿಲ್ಲ. ಕಲೆಯು ಭ್ರಮೆಯಲ್ಲ; ನಿಯಮಬಾಹಿರವಾದ ಕಲ್ಪನೆಯು ಭ್ರಮೆಯು; ಅಸಂಬದ್ಧ ಪ್ರಲಾಪವು. ಕವಿಗಳಲ್ಲಿ ಮತ್ತು ಕಲಾಕೋವಿದರಲ್ಲಿ ಇರುವ ಅದ್ಭುತ ಸೃಷ್ಟಿನಿರ್ಮಾಣ ಶಕ್ತಿಗೇ 'ಪ್ರತಿಭೆ' ಎಂದು ಕರೆಯುವರು. ಈ ಪ್ರತಿಭೆಯೆ 'ಕಲಾಸಸಂಬಂಧ ವಾದ ಕಲ್ಪನೆ'ಯೆನಿಸುವುದು.

ಒಂದಿಲ್ಲೊಂದು ಬಗೆಯ ಕಲೆಯ ಅಂಕುರವು ವಿದ್ಯಾರ್ಥಿಗಳಲ್ಲಿ ಹುದುಗಿಕೊಂಡಿರುತ್ತದೆ. ಅದನ್ನು ಬೆಳೆಯಿಸಬೇಕು. ಮಕ್ಕಳಲ್ಲಿ ಕಲಾಪ್ರೇಮ ವನ್ನು ಹುಟ್ಟಿಸಿ ಅದು ಬೆಳೆಯುವಂತೆ ಮಾಡಬೇಕು. ಹೊಸ ಹೊಸ ಕವನಗಳನ್ನು ಕಟ್ಟಲು, ಕತೆಗಳನ್ನು ಬರೆಯಲು, ಚಿತ್ರಗಳನ್ನು ತೆಗೆಯಲು ಅವರನ್ನು ಪ್ರೋತ್ಸಾಹಿಸಬೇಕು. ಕೆಲವರಿಗೆ ಅವು ಸಾಧ್ಯವಾಗಬಹುದು, ಕೆಲವರಿಗೆ ಆಗಲಿಕ್ಕಿಲ್ಲ. ಕೆಲವರು ಕಲೆಯಲ್ಲಿ ಕೋವಿದರಾಗಲಿಕ್ಕಿಲ್ಲ; ಕೆಲವರು ಆಗಲೂಬಹುದು. ಆದರೆ ಸೌಂದರ್ಯದ ರಸಾಸ್ವಾದನೆಯನ್ನು ಹೇಗೆ ಮಾಡಬೇಕೆಂಬುದನ್ನು ಶಿಕ್ಷಕನು ಎಲ್ಲ ಮಕ್ಕಳಿಗೆ ಕಲಿಸಬೇಕು. ಕಲೆಯ ಪ್ರಶಂಸೆಯನ್ನಾದರೂ ಮಾಡಲು ಮಕ್ಕಳಿಗೆ ಕಲಿಸಿದರೆ ಶಿಕ್ಷಕನು ಕಲೆಯನ್ನು ಕುರಿತು ತನ್ನ ಕರ್ತವ್ಯವನ್ನು ಮಾಡಿದಂತಾಗುವುದು.

(ಉ) **ನೀತಿಸಂಬಂಧವಾದ ಕಲ್ಪನೆ** (Ethical Imagination).— ಜ್ಞಾನದ ಪ್ರಭೆಯು ಹೆಚ್ಚಿದ ಹಾಗೆ ಮನುಷ್ಯನು ವಿಚಾರದ ಶಿಖರವನ್ನೇರುವನು. ವಿವೇಕವು ಜ್ಞಾನದ ಕೊನೆಯ ಮೆಟ್ಟು. ಮಕ್ಕಳನ್ನು ಸದಸದ್ವಿವೇಕಿಗಳನ್ನಾಗಿ ಮಾಡುವುದು ಶಿಕ್ಷಣದ ನಿಜವಾದ ಗುರಿಯು. ಮಕ್ಕಳಲ್ಲಿ ನೈತಿಕ ಜ್ಞಾನವು ನೆಲೆಯೂರಿದರೆ ಅವರು ಉತ್ತಮ ನಾಗರಿಕರಾಗ ಬಲ್ಲರು. ಈ ದೃಷ್ಟಿಯಿಂದಲೇ ಸಾಕ್ರೆಟೀಸ ಎಂಬ ದೊಡ್ಡ ತತ್ವಜ್ಞಾನಿಯು 'ಜ್ಞಾನವೇ ನೀತಿ' ಎಂದು ಹೇಳುವನು. ನೈತಿಕ ಒಳನೋಟವುಳ್ಳವನು ಜಗತ್ತಿನ ಮೂಲತತ್ವಗಳನ್ನು ಕಂಡುಹಿಡಿದು ಅದರಂತೆ ಆಚರಿಸುವನು. ಅಂಥವರನ್ನು ನಾವು 'ಜ್ಞಾನಿಗಳು' ಎಂದು ಕರೆಯುತ್ತೇವೆ. ಜಗತ್ತಿನಲ್ಲಿ

ಅಡಗಿರುವ ಸತ್ಯವೇ ಈ ಮೂಲತತ್ವ. ಸತ್ಯದ ಸಾಕ್ಷಾತ್ಕಾರವನ್ನು ಯೋಗಿಯು ಪಡೆದು ಆನಂದಹೊಂದುವನು. ಅವನಿಗೆ ಸತ್ಯವೇ ಆನಂದ, ಆನಂದವೇ ಸತ್ಯ. ಸತ್ಯಶೋಧನೆಗೆ ಜ್ಞಾನವೇ ಮೂಲವು. ಜ್ಞಾನಕ್ಕಿಂತ ಮಿಗಿಲಾದ ವಸ್ತುವು ಸೃಷ್ಟಿಯಲ್ಲಿ ಬೇರೊಂದಿಲ್ಲ— ( न हि ज्ञानेन सदृशं पवित्रमिह विद्यते। -ಭಗವದ್ಗೀತೆ ). ಆದುದರಿಂದ ಮಕ್ಕಳು ಸತ್ಯಶೋಧನೆಯಲ್ಲಿ ತೊಡಗುವಂತೆ ಮಾಡುವುದು ಶಿಕ್ಷಕನ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿದೆ.

**ವಿಚಾರಕ್ರಮದ ಮೂಲ ತತ್ವಗಳು.—** ಬುದ್ಧಿಯು ಯಾವುದೇ ಮಟ್ಟದ—ಪ್ರತ್ಯಕ್ಷಾತ್ಮಕ ಮಟ್ಟ ( Perce Level ) ದ ಅಥವಾ ಕಲ್ಪನಾತ್ಮಕ ಮಟ್ಟ ( Conceptual Level ) ದ— ಕ್ರಿಯೆ ಇರಲಿ ಅದಕ್ಕೆ ಮುಖ್ಯವಾದ ಮೂರು ತತ್ವಗಳು ಆಧಾರವಾಗಿವೆಯೆಂದು ಪ್ರೊ|| ಸ್ಪಿಯರ್‌ಮನ್‌ನು ಹೇಳುತ್ತಾನೆ: (೧) **ಅನುಭವಗ್ರಹಣ.** ಅಂದರೆ ಅನುಭವಿಸಲ್ಪಡುವ ವಸ್ತುವಿನ ಲಕ್ಷಣಗಳ ಜ್ಞಾನ ಮತ್ತು ಅನುಭವ ಹೊಂದುವ ವ್ಯಕ್ತಿಯ ಜ್ಞಾನ. ಒಂದು ಹೂವನ್ನು ನೋಡಿದಾಗ 'ಇದು ಗುಲಾಬಿಯ ಹೂವು' 'ಇದನ್ನು ನಾನು ನೋಡುತ್ತೇನೆ' ಎಂಬ ಅನುಭವವು ನನ್ನಲ್ಲಿ ಉಂಟಾಗುತ್ತದೆ. (೨) **ಸಂಬಂಧಗಳ ಊಹೆ.** ನಾವು ಎರಡು ಇಲ್ಲವೆ ಅನೇಕ ವಸ್ತುಗಳನ್ನು ನೋಡಿದಾಗ ಅವುಗಳಲ್ಲಿ ಸಾಮ್ಯ (ಹೋಲಿಕೆ), ವೈಷಮ್ಯ (ಭೇದ), ಸಾಮೀಪ್ಯ, ಪರಿಣಾಮ ಮುಂತಾದ ಯಾವುದಾದರೊಂದು ಸಂಬಂಧವನ್ನು ಊಹಿಸುತ್ತೇವೆ. 'ಪ್ರೇಮ' ಮತ್ತು 'ದ್ವೇಷ' ಎಂಬ ಶಬ್ದಗಳನ್ನು ಕೇಳಿದಾಗ ಅವು ವಿರೋಧ ಪದಗಳೆಂದು ನಾವು ಹೇಳುತ್ತೇವೆ. (೩) **ಪರಸ್ಪರ ವಸ್ತುಗಳ ಜೋಡಿಗಳ ಊಹೆ.** 'ತಂದೆ' ಎಂಬ ಶಬ್ದವನ್ನು ಕೇಳಿದ ಕೂಡಲೆ 'ಮಗ' ಅಥವಾ 'ಗುರು' ಎಂಬ ಶಬ್ದವನ್ನು ಕೇಳಿದ ಕೂಡಲೆ 'ಶಿಷ್ಯ' ಎಂಬ ಜೋಡಿಯ ಪದದ ಕಲ್ಪನೆಯು ನಮಗೆ ಉಂಟಾಗುತ್ತದೆ.

ಈ ನಿಯಮಗಳಿಗೆ ಅನುಸರಿಸಿಯೇ ವಿಚಾರಕ್ರಮವು ಸಾಗುತ್ತದೆ. ವಿಷಯ ಪ್ರತಿಪಾದನೆಯಲ್ಲಿಯೂ ವಿವೇಚನೆಯಲ್ಲಿಯೂ ಈ ನಿಯಮಗಳು ಶಿಕ್ಷಕನಿಗೆ ತುಂಬಾ ನೆರವಾಗುತ್ತವೆ. ಕಲಿಸಬೇಕಾದ ಹೊಸ ಸಂಗತಿಗಳು

ವಿದ್ಯಾರ್ಥಿಯ ಪೂರ್ವ ಜ್ಞಾನಕ್ಕೆ ಸಂಬಂಧಿಸಿರಬೇಕೆಂಬ ತತ್ವದ ಆಧಾರದ ಮೇಲಿಂದಲೇ ಹರ್ಬಾರ್ಟ್‌ನು ಪಾಠದ ಮೆಟ್ಟುಗಳನ್ನು ಯೋಚಿಸಿರುವನು.

**ಜ್ಞಾನದ ಬೆಳವಣಿಗೆಯೇ ಶಿಕ್ಷಣ.**— ಜ್ಞಾನದ ಬೆಳವಣಿಗೆಗೆ ಸಂಬಂಧವಾಗಿದ್ದ ಕೆಲವು ಸಮಸ್ಯೆಗಳನ್ನು ಇಲ್ಲಿ ಬಿಡಿಸಬೇಕಾದುದು ಅವಶ್ಯವೆನಿಸುವುದು. ಜ್ಞಾನವು ಶಿಕ್ಷಣದ ತಿರುಳು. ಜ್ಞಾನದಲ್ಲಿ ಎರಡು ಭಾಗಗಳನ್ನು ಮಾಡಲಾಗಿದೆ—(೧) **ಪ್ರತ್ಯಕ್ಷಜ್ಞಾನ.** (೨) **ಕಲ್ಪನಾತ್ಮಕ ಜ್ಞಾನ.** ಇಂದ್ರಿಯಗಳು ಜ್ಞಾನದ ಹೆಬ್ಬಾಗಿಲುಗಳಾಗಿರುವುದರಿಂದ ಅನೇಕ ಶಿಕ್ಷಣಜ್ಞರು ಇಂದ್ರಿಯ ಶಿಕ್ಷಣಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟಿರುವರು. ವಿದ್ಯಾಭ್ಯಾಸ ಮಾಡಿಸುವಾಗ ಆದಷ್ಟು ಹೆಚ್ಚು ಇಂದ್ರಿಯಗಳ ಉಪಯೋಗ ಮಾಡಿಕೊಳ್ಳಬೇಕೆಂದು ಹಿಂದೆಯೆ ಹೇಳಲಾಗಿದೆ. ಚಿಕ್ಕಮಕ್ಕಳ ಅಭ್ಯಾಸದಲ್ಲಂತೂ ಅವರ ಜ್ಞಾನದ ಬೆಳವಣಿಗೆಗೆ ಪಂಚೇಂದ್ರಿಯಗಳೇ ಮುಖ್ಯ ಸಾಧನಗಳು. ವಸ್ತುಗಳನ್ನು ಪ್ರತ್ಯಕ್ಷ ನೋಡಿ ಮುಟ್ಟಿ ತಿಳಿದುಕೊಳ್ಳುವುದು ಅವರಿಗೆ ಸುಲಭವಾಗುವುದು. ಇಂದ್ರಿಯಗಳ ಸಹಾಯವಿಲ್ಲದಲೆ ವಿಚಾರಮಾಡುವುದು ದೊಡ್ಡವರಿಗೇ ಕಠಿಣವೆನಿಸಿದಾಗ ಸಣ್ಣ ಬಾಲಕರಿಗೆ ಅದೆಷ್ಟು ಬಿಗಿಯಾಗಬಹುದು! ಚಿಕ್ಕಮಕ್ಕಳೂ ಅಶಿಕ್ಷಿತರೂ ಸ್ಥೂಲವಾದ ಪ್ರತ್ಯಕ್ಷಜ್ಞಾನದ ಮಟ್ಟದಲ್ಲಿಯೇ ವ್ಯವಹರಿಸುತ್ತಾರೆ. ಕಲ್ಪನಾತ್ಮಕ ಮಟ್ಟನ್ನು ಏರಿ ಮನಸ್ಸಿನಲ್ಲಿಯೇ ಆಲೋಚಿಸುವುದು ಅವರಿಗೆ ಅಸಾಧ್ಯವಾದುದು ಅಂತೆಯೇ ಅವರ ಅಧ್ಯಾಪನದಲ್ಲಿ ಜ್ಞಾನೇಂದ್ರಿಯಗಳ ಶಿಕ್ಷಣಕ್ಕೆ ವಿಶೇಷ ಮಹತ್ವವನ್ನು ಕೊಡಲಾಗಿದೆ. ಆದರೆ ಹೊಸ ಮನಶ್ಶಾಸ್ತ್ರವು ಕೇವಲ ಜ್ಞಾನೇಂದ್ರಿಯಗಳೆ ಬೌದ್ಧಿಕ-ಶಿಕ್ಷಣದ ಮೂಲಗಳೆಂದು ಭಾವಿಸುವುದಿಲ್ಲ. ಏಕೆಂದರೆ ಶರೀರದ ಅವಯವಗಳ ಚಟುವಟಿಕೆಯೂ ಶಿಕ್ಷಣದ ತಳಹದಿಯಾಗಿದೆ. ಆಧುನಿಕ ಶಿಕ್ಷಣತಜ್ಞಗಳಾದ ಮೊಂಟೇಸರಿ ಅವರ ಶಿಕ್ಷಣಪದ್ಧತಿಯ ವೈಶಿಷ್ಟ್ಯವು **ಚಟುವಟಿಕೆ.** ಈ ಚಟುವಟಿಕೆಗೆ ಇಂದ್ರಿಯ-ಶಿಕ್ಷಣವು ಅವಶ್ಯ. ಆದುದರಿಂದ ಇಂದ್ರಿಯ ಶಿಕ್ಷಣವನ್ನು ಕೊಡಲು ಮೊಂಟೇಸರಿ ಸಾಲೆಯಲ್ಲಿ ‘ ಬೋಧನಾತ್ಮಕ ಉಪಕರಣಗಳನ್ನು ’ (Didactic Apparatus) ಉಪಯೋಗಿಸಲಾಗುತ್ತದೆ. ಈ ಉಪಕರಣಗಳಲ್ಲಿ ಅಳತೆಯ ಕೋಲುಗಳು, ಕಟ್ಟಿಗೆಯ ಗುಂಡುಗಳು, ಭೂಮಿತಿಯ ಆಕೃತಿಗಳನ್ನು ಸೇರಿಸಲಿಕ್ಕೆ ಚೌಕಟ್ಟುಗಳು, ಬೇರೆ ಬೇರೆ ತರದ ಸಾಮಾನು

ಗಳನ್ನು ಹಾಕಲಿಕ್ಕೆ ಪೆಟ್ಟಿಗೆಗಳು, ಅಲ್ಲದೆ ಬಣ್ಣಬಣ್ಣದ ಉಣ್ಣೆಗಳು ಮುಂತಾದುವು ಇರುತ್ತವೆ. ಈ ಉಪಕರಣಗಳ ಸಹಾಯದಿಂದ ಮೊಂಟೀಸರಿ ಶಾಲೆಗಳಲ್ಲಿ ಮೂರು ನಾಲ್ಕು ವರುಷದ ಮಕ್ಕಳು ಒಂದಿಲ್ಲೊಂದು ಚಟುವಟಿಕೆ ಯಲ್ಲಿ ಹೆಚ್ಚು ಕಾಲವನ್ನು ಕಳೆಯುತ್ತಾರೆ. ಇಂತಹ ಚಟುವಟಿಕೆಗಳು—ಅಭ್ಯಾಸಗಳು—ಮೇಲ್ತರದ ಬುದ್ಧಿಯ ಕಾರ್ಯಸಿದ್ಧಿಗೆ ತಳಹದಿಯೆಂದು ಡಾ|| ಮೊಂಟೀಸರಿ ಅವರು ಅಭಿಪ್ರಾಯಪಡುತ್ತಾರೆ. ಅವರ ಹೇಳಿಕೆಯು ಕೆಲಮಟ್ಟಿಗೆ ನಿಜವಿದೆ.

ಮಕ್ಕಳಿಗೆ ಇಂದ್ರಿಯಗಳ ಅನುಭವವು ಹೆಚ್ಚಾಗಿ ದೊರೆಯಬೇಕು. ಪಟ್ಟಣದ ಹುಡುಗರಿಗೆ ಹಳ್ಳಿಯ ಎಷ್ಟೊ ಸಂಗತಿಗಳೂ ಹಳ್ಳಿಯ ಹುಡುಗರಿಗೆ ಪಟ್ಟಣದ ಎಷ್ಟೊ ಸಂಗತಿಗಳೂ ಗೊತ್ತಿರುವುದಿಲ್ಲ. ಇವುಗಳ ಜ್ಞಾನವನ್ನು ಪ್ರತ್ಯಕ್ಷವಾಗಿ ಮಾಡಿಕೊಡಲು ಶಾಲೆಯ ಪ್ರವಾಸಗಳನ್ನು ಏರ್ಪಡಿಸಬೇಕು. ಪಾಲಕರು ಮಕ್ಕಳನ್ನು ಜಾತ್ರೆಗಳಿಗೆ, ತೀರ್ಥಕ್ಷೇತ್ರಗಳಿಗೆ ಸೃಷ್ಟಿಸೌಂದರ್ಯದ ಐತಿಹಾಸಿಕ ಮುಂತಾದ ಸ್ಥಳಗಳಿಗೆ ಕರೆದುಕೊಂಡು ಹೋಗಬೇಕು. ಪ್ರವಾಸವು ಒಂದು ಬಗೆಯ ಶಿಕ್ಷಣವೇ. ಅದರಿಂದ ಪ್ರತ್ಯಕ್ಷಜ್ಞಾನವು ಉಂಟಾಗುತ್ತದೆ. ಪ್ರತ್ಯಕ್ಷ ಅನುಭವವು ಇಲ್ಲದಿದ್ದರೆ ಚಿಕ್ಕಮಕ್ಕಳಿಗೆ ವಾಚನ ಪಾಠಗಳು ನಿಷ್ಪ್ರಯೋಜಕವೆನಿಸುವುವು ಎಂಬುದರಲ್ಲಿ ಸಂದೇಹವಿಲ್ಲ. ಸಮುದ್ರವನ್ನು ಎಂದೂ ನೋಡದ ಮಗುವಿಗೆ ಕಡಲಪಯಣದ ಪಾಠವು ನೀರಸವಾಗುವುದು. ಗಣಿತ, ಇತಿಹಾಸ, ಭೂಗೋಲ, ಶಾಸ್ತ್ರೀಯ ವಿಷಯ ಗಳನ್ನು ಕಲಿಸುವಾಗ ಆಯಾ ವಿಷಯಕ್ಕೆ ಸಂಬಂಧಿಸಿದ ಪ್ರತ್ಯಕ್ಷ ವಸ್ತುಗಳನ್ನು ಆದಷ್ಟು ಹೆಚ್ಚು ಉಪಯೋಗಿಸುವುದು ಉತ್ತಮ. ಅಲ್ಲದೆ ತಾವು ಕಲಿಯ ಬೇಕಾದ ವಿಷಯಗಳಿಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳು ಭಾಗವಹಿಸಬೇಕು. ಇತಿಹಾಸ ಪಾಠದಲ್ಲಿ ನಟನೆಗೆ ಯೋಗ್ಯವಾದ ಸನ್ನಿವೇಶ ಗಳು ವಿಪುಲವಾಗಿ ದೊರೆಯುವುವು. ವಿಷಯಗಳಿಗೆ ಅನುಗುಣವಾಗಿ ಪ್ರತಿಮೆ, ನಕಾಶ ಮೊದಲಾದ ಕೃತಿಗಳನ್ನು ಬಾಲಕರ ಕಡೆಯಿಂದ ಮಾಡಿಸಬೇಕು. ಬಾಲಕರು ಚಟುವಟಿಕೆಯುಳ್ಳವರು. ಅವರ ಈ ವೃತ್ತಿಯನ್ನು ಶಿಕ್ಷಣದಲ್ಲಿ ಚೆನ್ನಾಗಿ ಉಪಯೋಗಿಸಬೇಕು. ಮಕ್ಕಳು ಸ್ವಂತ ಕೃತಿಯಿಂದ ಕಲಿಯುವುದು ಹೆಚ್ಚು ಪರಿಣಾಮಕಾರಿಯಾಗುವುದು. ಇದುವೇ ಕ್ರೀಡಾಪದ್ಧತಿಯ ಶಿಕ್ಷಣದ

ರಹಸ್ಯ. ಆಟ ಮತ್ತು ಇನ್ನಿತರ ಸಾಮಾನ್ಯ ಚಟುವಟಿಕೆಗಳು ನೈತಿಕ ಶಿಕ್ಷಣಕ್ಕೆ ಯೋಗ್ಯವಾದ ಸಾಧನಗಳು. "ಮಾಡಿ ಕಲಿ" ಎಂಬ ಶ್ರೇಷ್ಠ ತತ್ವವು ಬೋಧಿಸುವುದಾದರೂ ಇದೆ. "ಮಾಡಿ ಕಲಿ" ಎಂಬ ತತ್ವವು ಕ್ರಿಯೆಗೂ ಬುದ್ಧಿಗೂ ನಿಕಟಸಂಬಂಧವುಂಟೆಂಬುದನ್ನು ತೋರಿಸುತ್ತದೆ. ಕೆಲಸಮಾಡುವಾಗ ಬುದ್ಧಿಯ ಸಹಾಯವು ಬೇಕೇಬೇಕು. ಕಾರ್ಯಮಾಡು ವುದು ಇಲ್ಲವೆ ಪ್ರಯೋಗ ನಡೆಯಿಸುವುದು ಒಂದು ತೆರನಾದ ವಿಚಾರವೇ. ಇದಕ್ಕೆ ಕ್ರಿಯಾತ್ಮಕ ಅಥವಾ ವ್ಯಾವಹಾರಿಕ ಕಲ್ಪನಾಶಕ್ತಿ ಎಂದು ಮೇಲೆ ಹೇಳಿದ್ದೇವೆ. ವೈಜ್ಞಾನಿಕರ ಮತ್ತು ಸಂಶೋಧಕರ ವಿಚಾರಶಕ್ತಿಯೂ ಇದೇ ಬಗೆಯದಾಗಿರುತ್ತದೆ ಬುದ್ಧಿಶಾಲಿಗಳಾದವರು ಕೈಕೆಲಸದಲ್ಲಿ ಅಥವಾ ಶಾರೀರಿಕ ಉದ್ಯೋಗದಲ್ಲಿ ತೊಡಗುವುದು ಗೌಣವೆಂದು ತಿಳಿಯುವ ಹಳೆಯ ನಂಬುಗೆಗೆ ಮನಶ್ಶಾಸ್ತ್ರದ ಆಧಾರವಿಲ್ಲ

ಇನ್ನೊಂದು ವಿಷಯ—ಡಾ|| ಮೊಂಟೇಸರಿ ಅವರು ಯಕ್ಷಿಣಿ ಕಥೆಗಳನ್ನು ಅಥವಾ ಕಟ್ಟುಕಥೆಗಳನ್ನು ಕಟುತರವಾಗಿ ಟೀಕಿಸುತ್ತಾರೆ; ಖಂಡಿಸುತ್ತಾರೆ ಏಕೆಂದರೆ ಅವು ಮಕ್ಕಳ ತರ್ಕಶಕ್ತಿಯನ್ನು ಕುಂಠಿತ ಮಾಡುತ್ತವೆಯಂತೆ; ಮಕ್ಕಳು ಭ್ರಮೆಗೆ ಮೋಹಿತರಾಗಿ ವಸ್ತುಸ್ಥಿತಿಯನ್ನು ಮರೆಯುತ್ತಾರಂತೆ. ಈ ಆರೋಪವು ಕೆಲಮಟ್ಟಿಗೆ ನಿಜವಾದುದೇ. ಮಕ್ಕಳು ಕಟ್ಟುಕಥೆಗಳಲ್ಲಿ ವಿಶ್ವಾಸವಿಡುವುದರಿಂದ ಮೂಢನಂಬುಗೆಗೆ ಆಸ್ಪದವಿತ್ತಂತಾಗುತ್ತದೆ ಮೊಂಟೇಸರಿ ಅವರ ಎಚ್ಚರಿಕೆಯನ್ನು ಮುಖ್ಯವಾಗಿ ಭಾರತೀಯರು ಗಮನಿಸ ಬೇಕು. ನಮ್ಮಲ್ಲಿ ಎಷ್ಟೋ ಜನರು ಮೂಢನಂಬುಗೆಗಳ ಬಲೆಗೆ ಸಿಕ್ಕಿರುವರು. 'ರಾವಣನು ಹತ್ತು ತಲೆಯುಳ್ಳ ರಾಕ್ಷಸನು,' 'ಹನುಮಂತನು ಬಾಲವುಳ್ಳ ವಾನರನು' ಎಂದು ಚಿಕ್ಕಮಕ್ಕಳ ಮನದಲ್ಲಿ ಉಂಟಾದ ಕಲ್ಪನೆಗಳು ಅವರು ಬೆಳೆದು ದೊಡ್ಡವರಾದಾಗಲೂ ಅವರನ್ನು ಬಿಟ್ಟಿರುವುದಿಲ್ಲ. ಶೂರಪುರುಷರು ರಾಕ್ಷಸರೇ? ಕಪಿಗಳು ಸೈನ್ಯಾಧಿಕಾರವನ್ನು ವಹಿಸಬಲ್ಲುವೆ? ಇವು ಕವಿಯ ಕೇವಲ ಉತ್ಪ್ರೇಕ್ಷೆಗಳು ಎಂದು ತಿಳಿಯುವವರು ಎಷ್ಟು ಜನ? ಮಕ್ಕಳ ಪಠ್ಯಪುಸ್ತಕಗಳಲ್ಲಿ ಅಸಂಗತ ಸಂಗತಿಗಳನ್ನು ಐತಿಹಾಸಿಕವೆಂದು ಬೋಧಿಸುವ ಪಾಠಗಳು ಇರಕೂಡದು. ಈ ದುಸ್ಥಿತಿಯು ದೂರಾಗಬೇಕಾದರೆ ಬಾಲ್ಯ ದಲ್ಲಿಯೆ ಮಕ್ಕಳ ಚಿಕಿತ್ಸಕ ಬುದ್ಧಿಗೆ ಉತ್ತೇಜನವನ್ನು ಕೊಡಬೇಕು.

ಯಾವುದು ಸತ್ಯ, ಯಾವುದು ಭ್ರಮೆ ಎಂದು ತಿಳಿದುಕೊಳ್ಳುವ ವಿಚಾರಶಕ್ತಿಯನ್ನು ಅವರಲ್ಲಿ ಬೆಳೆಯಿಸಬೇಕು. ವಿವೇಕಕ್ಕೆ ಅಥವಾ ತರ್ಕಕ್ಕೆ ಅನರ್ಹವಾದುದು ತ್ಯಾಜ್ಯವೆಂಬ ಬುದ್ಧಿಯನ್ನು ಅವರಲ್ಲಿ ಬಲಪಡಿಸಬೇಕು. ಸತ್ಯಶೋಧಕ ಬುದ್ಧಿಯನ್ನು ನಾವು ಪ್ರೋತ್ಸಾಹಿಸಿದರೂ ಕಟ್ಟುಕಥೆಗಳಿಗೆ ಶಿಕ್ಷಣದಲ್ಲಿ ಒಂದು ಸ್ಥಾನವುಂಟು. ವಿಚಿತ್ರ ಕಲ್ಪನೆಗಳಲ್ಲಿ ಮಗ್ನನಾಗುವುದು ಬಾಲಕನ ಸ್ವಭಾವ. ಇದಕ್ಕೆ ನಾವು 'ಕೃತಕ ನಂಬಿಗೆ' ಎಂದು ಹಿಂದೆ ಹೇಳಿದ್ದೇವೆ (೬೫–೬೭). ಒಮ್ಮೊಮ್ಮೆ ಮಗುವಿಗೆ ಬಿಕ್ಕಟ್ಟಿನ ಪ್ರಸಂಗಗಳು ಬರುವುದರಿಂದ ಅವನ ಭಾವವಿಮೋಚನೆಗೆ ಕೆಲವೊಂದು ಅವಕಾಶವನ್ನು ಒದಗಿಸಿಕೊಡಬೇಕಾಗುತ್ತದೆ. ಕಟ್ಟುಕಥಗಳಲ್ಲಿಯೂ 'ಕೃತಕ ನಂಬಿಗೆ'ಯ ಆಟಗಳಲ್ಲಿಯೂ ಇಂಥ ಅವಕಾಶಕ್ಕೆ ಅನುವು ದೊರಕುವುದು.

ಪಾಠ ಕಲಿಸುವಾಗ ಮಕ್ಕಳಿಗೆ ವಿಚಾರಪ್ರಚೋದಕ ಪ್ರಶ್ನೆಗಳನ್ನು ಕೇಳಬೇಕು; ಅವರ ಜಿಜ್ಞಾಸೆಯನ್ನು ಪ್ರೋತ್ಸಾಹಿಸಬೇಕು. ಶಿಕ್ಷಕನು ತಾನಾಗಿಯೆ ಎಲ್ಲವನ್ನೂ ಹೇಳಿಬಿಡಬಾರದು. ಹೀಗೆ ಮಾಡುವುದರಿಂದ ವಿದ್ಯಾರ್ಥಿಗಳ ವಿಚಾರಕ್ಕೆ ಅವಕಾಶವಿತ್ತಂತೆ ಆಗುವುದಿಲ್ಲ. ಬಾಲಕರ ಅನುಭವ, ವಿಚಾರಶಕ್ತಿ ಮತ್ತು ಕಲ್ಪನೆಗಳನ್ನು ಅನುಲಕ್ಷಿಸಿ ಅವರು ಮಾತನಾಡುವ ಭಾಷೆಯಲ್ಲಿಯೆ ವಿವರಣೆಯನ್ನು ಮಾಡಬೇಕು.

ಜ್ಞಾನವು ಶಿಕ್ಷಣದ ತಿರುಳು ಆದುದರಿಂದ ಅದು ಹೇಗೆ ಅಭಿವೃದ್ಧಿ ಹೊಂದುತ್ತದೆ? ಅದನ್ನು ಅಭಿವೃದ್ಧಿಗೊಳಿಸಬೇಕಾದ ಸಾಧನಗಳಾವುವು? ಎಂಬುದನ್ನು ಕುರಿತು ಈ ಪ್ರಕರಣದಲ್ಲಿ ವಿವೇಚಿಸಲಾಗಿದೆ. ಆದರೆ ಕೇವಲ ಬುದ್ಧಿಯ ಬೆಳವಣಿಗೆಯಿಂದ ಮನುಷ್ಯನು ಪರಿಪೂರ್ಣನಾಗುವನೆಂದು ಭಾವಿಸಲಾಗದು. ಅವನಲ್ಲಿ **ಶೀಲ** ಎಂಬ ಇನ್ನೊಂದು ಮಹತ್ವದ ಅಂಶ ಉಂಟು. **ಶೀಲ**ವಿಲ್ಲದ ಶಿಕ್ಷಣ ದೇವರಿಲ್ಲದ ದೇಗುಲದಂತೆ. ಆದುದರಿಂದ ಶೀಲವನ್ನು ಹೇಗೆ ಬೆಳೆಯಿಸಿಕೊಂಡು ಕಾಯ್ದುಕೊಳ್ಳಬೇಕು? ಶೀಲಕ್ಕೂ ಶಿಕ್ಷಣಕ್ಕೂ ಎಷ್ಟು ಅತ್ಯಂತ ಹತ್ತಿರದ ಸಂಬಂಧವಿದೆ? ಮುಂತಾದುವುಗಳನ್ನು ಕುರಿತು ಮುಂದಿನ ಪ್ರಕರಣದಲ್ಲಿ ವಿವೇಚಿಸಲಾಗುವುದು.

೧೪

# ಮನಸ್ಸಿನ ಹೋರಾಟ

ಮನುಷ್ಯನ ಬೆಳವಣಿಗೆಯು ಸರ್ವಾಂಗಸುಂದರವಾಗಿಯೂ ಸುಸಂಬದ್ಧವಾಗಿಯೂ ನಾಗಿದರೆ ಅವನಲ್ಲಿ ಉತ್ತಮ ಶೀಲವು ನೆಲೆಗೊಳ್ಳುತ್ತದೆ; ವ್ಯಕ್ತಿತ್ವವು ವಿಕಸಿತವಾಗುತ್ತದೆ. ಆದರೆ ಈ ಕ್ರಿಯೆಯು ಸುಸೂತ್ರವಾಗಿ ಸಾಗುವುದಿಲ್ಲ. ಮಗುವಿಗೆ ಪ್ರೌಢವೆನೆಯು ಪ್ರಾಪ್ತವಾಗುವ ವರೆಗೆ ಅನೇಕ ಊಹಿಸಲು ಅಸಾಧ್ಯವಾದ ಎಡರು-ತೊಡರುಗಳು, ಅನುವು-ಆಪತ್ತುಗಳು ಬಂದೊದಗುತ್ತವೆ; ಬೇನೆಬೇಸರಿಕೆಗಳು ಬರುತ್ತವೆ. ಆದುದರಿಂದ ಅವನ ಬೆಳವಣಿಗೆಯು ಕುಂಠಿತವಾಗುತ್ತದೆ, ವ್ಯಕ್ತಿತ್ವದ ವಿಕಾಸವು ಆಗದೆ ಅದು ಬಾಡಿಹೋಗುತ್ತದೆ. ಈ ಬಗೆಯ ವಿಘ್ನಗಳಿಗೆ ಬಲಿಯಾಗಿ, ಪರಿಸ್ಥಿತಿಯ ಸೆಳವಿಗೆ ಸಿಕ್ಕು ಅದೆಷ್ಟೋ ಜನರು ವಂಚಕರೂ ದುರ್ಗುಣಿಗಳೂ ಅವ್ಯಾವಹಾರಿಕರೂ ಆಗಿರುವುದನ್ನೂ ಆಗುವುದನ್ನೂ ನಾವು ನೋಡುತ್ತೇವೆ. ಹೀಗೇಕೆ ಆಗುವುದು ? ಎಂಬ ಪ್ರಶ್ನೆಯು ಸಹಜವಾಗಿ ಉದ್ಭವಿಸುವುದು. ಈ ಪ್ರಶ್ನೆಗೆ ಉತ್ತರವನ್ನು ಮನಶ್ಶಾಸ್ತ್ರವು ಕೊಡಬಲ್ಲುದು. ಆದುದರಿಂದ ಈ ವಿಷಯವನ್ನು ಪ್ರಸ್ತುತ ಅಧ್ಯಾಯದಲ್ಲಿ ಸಂಕ್ಷೇಪವಾಗಿ ವಿವೇಚಿಸುವ.

**ಅಜಾಗ್ರತಾವಸ್ಥೆ** (The Unconscious).— ಬೆಳವಣಿಗೆಯಲ್ಲಿ ನ್ಯೂನತೆಗಳು ಏಕೆ ಉಂಟಾಗುತ್ತವೆ ? ಮಕ್ಕಳಲ್ಲಿ ದುರ್ಗುಣಗಳು ಏಕೆ ಕಂಡುಬರುತ್ತವೆ ? ಅವುಗಳನ್ನು ಹೋಗಲಾಡಿಸುವ ಬಗೆ ಯಾವುದು ? ಇವೇ ಮುಂತಾದ ಸಮಸ್ಯೆಗಳನ್ನು ಬಿಡಿಸಲು ಮನೋವಿಶ್ಲೇಷಣದ ಹೊಸ ಸಿದ್ಧಾಂತಗಳು ನಮಗೆ ನೆರವಾಗುತ್ತವೆ. ಮನಸ್ಸನ್ನು ವಿಭಜನೆ ಮಾಡಿ ಅದರ ನಿಜಸ್ವರೂಪವನ್ನು ವಿವೇಚಿಸುವ ಶಾಸ್ತ್ರವೇ ಮನೋವಿಶ್ಲೇಷಣ. ಸಿಗ್ಮಂಡ್ ಫ್ರಾಯ್ಡ್ ಎಂಬವನು ಇದರ ಸಂಶೋಧಕನು. ಅವನು ಮನಸ್ಸಿನಲ್ಲಿ ಮೂರು ಭಾಗಗಳನ್ನು ಕಲ್ಪಿಸುತ್ತಾನೆ :— (೧) ಜಾಗ್ರತ ಅವಸ್ಥೆ

(The Conscious), (೨) ಉಪಜಾಗ್ರತ ಅವಸ್ಥೆ (The Pre-conscious) ಮತ್ತು (೩) ಅಜಾಗ್ರತ ಅವಸ್ಥೆ (The Unconscious).* ಮೊದಲನೆಯ ಅವಸ್ಥೆಯಲ್ಲಿ ಮನೋವ್ಯಾಪಾರಗಳ ಅರಿವು ಮನುಷ್ಯನಿಗೆ ಸಂಪೂರ್ಣವಾಗಿ ಇರುತ್ತದೆ. ಎರಡನೆಯ ಅವಸ್ಥೆಯಲ್ಲಿಯ ಮನೋವೃತ್ತಿಗಳ ಅರಿವು ಪ್ರತ್ಯಕ್ಷವಾಗಿ ಇರದಿದ್ದರೂ ಅವುಗಳನ್ನು ನಾವು ಸುಲಭವಾಗಿ ನೆನಪಿಗೆ, ಜಾಗ್ರತಾವಸ್ಥೆಗೆ ತಂದುಕೊಳ್ಳಬಹುದು. ಆದರೆ ಮೂರನೆಯ ಭಾಗದಲ್ಲಿ ನೆಲೆಸಿರುವ ಚಿತ್ತವೃತ್ತಿಗಳ ಅರಿವು ನಮಗೆ ಸ್ವಲ್ಪವಾದರೂ ಇರುವುದಿಲ್ಲ. ಅರಿತುಕೊಳ್ಳಲು ಭಗೀರಥ ಪ್ರಯತ್ನಪಟ್ಟರೂ ಅಂತರಂಗದ ಮನೋಕ್ರಿಯೆಗಳು ಒಮ್ಮೆಮ್ಮೆ ಸ್ಮೃತಿಪಥಕ್ಕೆ ಬರುವುದೇ ಇಲ್ಲ ಆದರೆ ಕೆಲವು ಸಂದರ್ಭಗಳಲ್ಲಿ—ಸ್ವಪ್ನದಲ್ಲಿ, ಹಗಲುಗನಸು ಅಥವಾ ಭ್ರಮೆಯಲ್ಲಿ, ಪ್ರಜ್ಞಾಹೀನವಾಗಿರುವ ದೆಸೆಯಲ್ಲಿ, ಹುಚ್ಚು ಹಿಡಿದಾಗಿನ ಅವಸ್ಥೆಯಲ್ಲಿ—ಇವು ವಿಕೃತ ರೂಪಗಳನ್ನು ತಾಳಿ ಹೊರಗೆ ಕಾಣಿಸಿಕೊಳ್ಳುವುವು. ಜಾಗ್ರತ ಅವಸ್ಥೆಯು ಮನಸ್ಸಿನ ಕೇವಲ ಸ್ವಲ್ಪ ಭಾಗವೆಂದೂ ಮತ್ತು ಅಜಾಗ್ರತ ಅವಸ್ಥೆಯು ದೊಡ್ಡ ಭಾಗವೆಂದೂ ಫ್ರಾಯ್ಡ್‌ನು ಅಭಿಪ್ರಾಯಪಡುತ್ತಾನೆ ಅವನು ಅಜಾಗ್ರತಾವಸ್ಥೆಯನ್ನು ಒಂದು ಕೋಣೆಗೂ ಜಾಗ್ರತಾವಸ್ಥೆಯನ್ನು ಬೇರೆ ಒಂದು ಕೋಣೆಗೂ ಹೋಲಿಸುತ್ತಾನೆ. ಈ ಎರಡೂ ಕೋಣೆಗಳ ಮಧ್ಯದಲ್ಲಿ ಅಜಾಗ್ರತಾವಸ್ಥೆಯ ಪ್ರದೇಶವಿರುತ್ತದೆ. ಈ ನಡುಮನೆಯಲ್ಲಿ ವಿವೇಕ ಎಂಬ ಕಾವಲುಗಾರನು ಅಥವಾ ಮೇಲ್ವಿಚಾರಕನು ಇರುತ್ತಾನೆ. ಅಜಾಗ್ರತಾವಸ್ಥೆಯಲ್ಲಿಯ ಕಲ್ಪನೆಗಳಾಗಲಿ ಭಾವನೆಗಳಾಗಲಿ ಜಾಗ್ರತಾವಸ್ಥೆಯ ಕೋಣೆಗೆ ಪ್ರವೇಶವನ್ನು ಪಡೆದುಕೊಳ್ಳಬೇಕಾದರೆ ಮೊದಲು ಈ ಮೇಲ್ವಿಚಾರಕನ ಅಪ್ಪಣೆಯನ್ನು ಪಡೆಯಬೇಕಾಗುತ್ತದೆ. ವಿವೇಕವು ತನ್ನ ಯಜಮಾನನಾದ ವ್ಯಕ್ತಿಯ ಗೌರವಕ್ಕೂ ಪ್ರಗತಿಗೂ ಬಾಧೆ ಬರುವಂಥ ಕುವಿಚಾರಗಳಿಗೆ ಅಪ್ಪಣೆ

* ಶ್ರೀಮಾನ್ ಎನ್. ಎಸ್. ನಾರಾಯಣಶಾಸ್ತ್ರಿ ಅವರು ಭಾಷಾಂತರಿಸಿದಂತೆ ಮನಸ್ಸಿನ ಈ ಅವಸ್ಥೆಗಳಿಗೆ ‘ ಪ್ರಬುದ್ಧ ಚೇತನ ’, ‘ ಅನಾವಿಷ್ಕೃತ ಚೇತನ ’ ಮತ್ತು ‘ ಸುಪ್ತ ಚೇತನ ’ವೆಂದೂ ಇಟ್ಟುಕೊಳ್ಳಬಹುದು. —ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕ ಮಾಲೆ: “ ಕನಸುಗಳು ” ಪುಟ ೭-೧೦ ಮತ್ತು ೫೮-೬೦ ನೋಡಿ. ಶಿಕ್ಷಕರು ಈ ಚಿಕ್ಕ ಪುಸ್ತಕವನ್ನು ಸಂಪೂರ್ಣ ಓದುವುದು ಒಳಿತು.

ಯನ್ನು ಕೊಡುವುದಿಲ್ಲ. ಹೀಗೆ ಪ್ರತಿಬಂಧಿಸಲ್ಪಟ್ಟ ವಿಚಾರಗಳು ಮತ್ತು ಭಾವಗಳು ಹೊರಗೆ ಬರುವ ಉದ್ದೇಶದಿಂದ ವಿವೇಕದ ಕೂಡ ಅರ್ಥಾತ್ ವ್ಯಕ್ತಿಯ ಮುಖ್ಯವಾದ ಮನೋವೃತ್ತಿಯ ಕೂಡ—ಪ್ರಧಾನ ಅನುರಾಗದ ಕೂಡ—ಹೋರಾಡತೊಡಗುವುವು. ಇದಕ್ಕೇ **ಮನಸ್ಸಿನ ಹೋರಾಟ**ವೆನ್ನುವರು. ಮನಸ್ಸಿನ ಈ ಹೋರಾಟವೇ ಅಸ್ವಾಭಾವಿಕವಾದ ಎಲ್ಲ ಬಗೆಯ ವಿಪರೀತ ವರ್ತನಕ್ಕೆ ಮೂಲ ಕಾರಣವೆಂದು ಮನೋವಿಶ್ಲೇಷಣಜ್ಞರು ಹೇಳುತ್ತಾರೆ.

ಫ್ರಾಯ್ಡ್‌ನು ಮನಸ್ಸಿನಲ್ಲಿ ಭಾಗಗಳನ್ನು ಮಾಡಿ ಅವುಗಳನ್ನು ಕೋಣೆಗಳಿಗೆ ಹೋಲಿಸಿರುವುದು ಕೇವಲ ರೂಪಕಾಲಂಕಾರವು. ಮನಸ್ಸಿನಲ್ಲಿ ಹೀಗೆ ಭಾಗಗಳನ್ನು ಮಾಡುವುದು ಕೃತ್ರಿಮವಾದುದು. ಇದಕ್ಕೆ ಮನಸ್ಸಿನ 'ವಿಭಾಗವಾದ'ವೆಂದು ಎನ್ನಬಹುದು. ಆದರೆ ಮನಸ್ಸು ಅಖಂಡವಾದುದು. ಮ್ಯಾಕ್‌ಡೂಗಲ್‌ನು ಜಾಗ್ರತ ಅವಸ್ಥೆಗೆ 'ಅನುಭವ'ವೆಂತಲೂ ಉಪಜಾಗ್ರತ ಮತ್ತು ಅಜಾಗ್ರತಾವಸ್ಥೆಗಳಿಗೆ 'ಮನಸ್ಸಿನ ವ್ಯೂಹ'ವೆಂತಲೂ ಕರೆಯುತ್ತಾನೆ. ಈ ವ್ಯೂಹವು ಚೇತನಾತ್ಮಕವಾದುದು.

ನಮ್ಮ ಎಷ್ಟೋ ಆಶೆ, ಆಕಾಂಕ್ಷೆ, ದ್ವೇಷ, ಅಸೂಯೆ, ಕಾಮ, ಮುನಿಸು ಮೊದಲಾದ ಮನೋವೃತ್ತಿಗಳನ್ನು ನಾವು ಹೊರಗೆ ತೋರಗೊಡುವುದಿಲ್ಲ. ಸಮಾಜದ ಭಯದಿಂದಾಗಲಿ, ಮೇಲಾಧಿಕಾರಿಗಳ ಭಯದಿಂದಾಗಲಿ, ಸರಕಾರದ ಭಯದಿಂದಾಗಲಿ ಅಥವಾ ನೀತಿಯ ಭಯದಿಂದಾಗಲಿ ಅವುಗಳನ್ನು ಮನಸ್ಸಿನಲ್ಲಿಯೇ ನುಂಗಿಕೊಳ್ಳುತ್ತೇವೆ. ಹೀಗೆ ಮನದೊಳಗೆ ಬಚ್ಚಿಟ್ಟ ನಮ್ಮ ಎಲ್ಲ ಬಯಕೆಗಳು ಅಜಾಗ್ರತಾವಸ್ಥೆಯನ್ನು ಸೇರಿ ಸಮಯವರಿತು ಪ್ರಕಾಶಕ್ಕೆ ಬರಲು ಹವಣಿಸುತ್ತವೆ.

ಜಾಗ್ರತಾವಸ್ಥೆಯ ಪ್ರಧಾನ ಅನುರಾಗವು (Master Sentiment) ಅಜಾಗ್ರತಾವಸ್ಥೆಯ ಈ ಸ್ವಾರ್ಥಪರವಾದ, ಹೀನಪೆಸೆಯ ಮನೋವೃತ್ತಿಗಳನ್ನು ನಿರ್ಬಂಧದಲ್ಲಿಡಲು ಪ್ರಯತ್ನಿಸುತ್ತದೆ. ಆದರೆ ಅಜಾಗ್ರತಾವಸ್ಥೆಯ ಮನೋವೃತ್ತಿಗಳು ಜಾಗ್ರತಾವಸ್ಥೆಯ ಪ್ರಧಾನವೃತ್ತಿಯ ಬಂಧನದಿಂದ ಹೊರಹೊಮ್ಮಲು ಪ್ರಯತ್ನಿಸುತ್ತವೆ. ಈ ಹೋರಾಟವು ಮಗುವಿನ ಮನಸ್ಸನ್ನು

ಆಕ್ರಮಿಸಿದಾಗ ಯಾವುದನ್ನು ಮಾಡಬೇಕು, ಯಾವುದನ್ನು ಮಾಡಬಾರದು ಎಂಬುದನ್ನು ನಿರ್ಣಯಿಸುವುದು ಕೆಲವು ಸಲ ಅವನಿಗೆ ಬಿಗಿಯಾಗುತ್ತದೆ. ಆದುದರಿಂದ ಫ್ರಾಯ್ಡ್‌ನು ಹೇಳುವುದೇನೆಂದರೆ, ಮನಸ್ಸಿನ ಈ ಎರಡೂ ಅವಸ್ಥೆಗಳ ಮನೋವೃತ್ತಿಗಳನ್ನು ಸೂಕ್ಷ್ಮವಾಗಿ, ಕೂಲಂಕುಷವಾಗಿ ತಿಳಿದು ಕೊಳ್ಳಬೇಕು. ಅವುಗಳಲ್ಲಿ ಹೋರಾಟವು ನಿರಂತರವಾಗಿ ಇದ್ದೇ ಇರುವುದು. ಈ ಹೋರಾಟವನ್ನು ನಿಲ್ಲಿಸಿ, ಪರಸ್ಪರ ಸ್ನೇಹಭಾವದಿಂದ ಅವು ಯೋಗ್ಯವಾದ ಮಾರ್ಗದಲ್ಲಿ ವರ್ತಿಸುವಂತೆ ಮಾಡಬೇಕು.

**ಮನಸ್ಸಿನ ಹೋರಾಟ** (Mental Conflict).— ಮಗುವಿನ ಬೆಳವಣಿಗೆಯು ನಿರ್ವಿಘ್ನವಾಗಿ, ಸುಸೂತ್ರನಾಗಿ ಸಾಗುವುದಿಲ್ಲ. ಒಂದು ಕಡೆಗೆ ಪ್ರವೃತ್ತಿಗಳೂ ಅನುರಾಗಗಳೂ ಅವನನ್ನು ಎಳೆಯುತ್ತವೆ. ಇನ್ನೊಂದು ಕಡೆಗೆ ಸಮಾಜದ ಭಯ ಮತ್ತು ನೀತಿಯ ಭಯ ಮೊದಲಾದುವು ಅವನನ್ನು ನಿರ್ಬಂಧಿಸುತ್ತವೆ ಈ ಎಳೆದಾಟದಲ್ಲಿ ಅವನು ಯಶಸ್ವಿಯಾಗಬೇಕಾದರೆ, ಆತ್ಮಗೌರವವನ್ನು ಕಾಯ್ದುಕೊಳ್ಳಬೇಕಾದರೆ ಅವನಲ್ಲಿ ಪ್ರಧಾನಪ್ರವೃತ್ತಿಯು ಪ್ರಬಲವಾಗಿರಬೇಕು. ಆದರೆ ಇದು ಕಷ್ಟಸಾಧ್ಯವಾದ ಮಾತು ಪ್ರವೃತ್ತಿಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡ ಜನರು ಅತಿ ವಿರಳ. ಸದಸದ್ವಿವೇಕಕ್ಕೆ ಒಳಪಡದ ವೃತ್ತಿಗಳೂ ಮನುಷ್ಯನಲ್ಲಿ ಬೆಳೆಯುತ್ತವೆ. ಅವು ವ್ಯಕ್ತಿಯ ಮುಖ್ಯವಾದ ಉದ್ದೇಶ ಅಥವಾ ಒಲುವಿನ ಕೂಡ ಹೋರಾಡುತ್ತವೆ. ಕೆಲವು ಪ್ರಸಂಗಗಳಲ್ಲಿ ಕ್ರೋಧವು ಪ್ರೇಮದೊಡನೆ, ಕುತೂಹಲವು ಭಯದೊಡನೆ ಹೋರಾಡುವುದು ನಮ್ಮೆಲ್ಲರ ಅನುಭವಕ್ಕೆ ಬಂದಿರಲು ಸಾಕು. ರಾಮಚಂದ್ರನು ಸೀತೆಯನ್ನು ಎರಡನೆಯ ಬಾರಿ ಅಡವಿಗೆ ಕಳುಹಿಸುವಾಗ ಆತ್ಮಗೌರವ ಮತ್ತು ಪತ್ನಿಪ್ರೇಮ ಎಂಬ ಎರಡು ಪ್ರವೃತ್ತಿಗಳ ಹೋರಾಟವನ್ನು ಅವನು ಅನುಭವಿಸಿದನು. ಸಣ್ಣಪುಟ್ಟ ಪ್ರಸಂಗಗಳಲ್ಲಿ ಸಹ ಮನಸ್ಸಿನಲ್ಲಿ ನಡೆಯುವ ಪ್ರವೃತ್ತಿಗಳ ಈ ತಿಕ್ಕಾಟವು ನಮ್ಮ ಅನುಭವಕ್ಕೆ ಬರುತ್ತದೆ. ಪ್ರೀತಿಯ ಪುತ್ರನಾಗಲಿ, ವಿದ್ಯಾರ್ಥಿಯೇ ಆಗಲಿ ಅಕ್ಷಮ್ಯ ಅಪರಾಧವನ್ನು ಮಾಡಿದಾಗ ಅವನನ್ನು ದಂಡಿಸಬೇಕೊ ದಂಡಿಸಬಾರದೊ ಎಂಬುದನ್ನು ವಿಚಾರಿಸುವಾಗ ಮನಸ್ಸಿನಲ್ಲಿ ಹೊಯ್ದಾಟವು ಉಂಟಾಗುತ್ತದೆ. ಏಕೆಂದರೆ, ಅಲ್ಲಿ ಅನೇಕ ಪ್ರವೃತ್ತಿಗಳು ಹೋರಾಟವನ್ನು ನಡೆಯಿಸಿರುತ್ತವೆ. ಕುರುಕ್ಷೇತ್ರ

ದಲ್ಲಿ ತನ್ನ ಅಣ್ಣತಮ್ಮಂದಿರಾದ ಕೌರವರೊಡನೆ ಯುದ್ಧ ಮಾಡುವ ಪ್ರಸಂಗವು ಒದಗಿದಾಗ ಅರ್ಜುನನ ಮನದಲ್ಲಿ ಇಂಥ ವಿರೋಧವೃತ್ತಿಗಳ—ಕರ್ತವ್ಯನಿಷ್ಠೆ ಮತ್ತು ಬಂಧುಪ್ರೇಮಗಳ—ಹೋರಾಟವು ನಡೆದಿತ್ತು. ಶ್ರೀಕೃಷ್ಣನು ತತ್ವ-ಬೋಧೆಯಿಂದ ಈ ಹೋರಾಟದಲ್ಲಿ ಸಂಧಾನವನ್ನು ಉಂಟುಮಾಡಿದನು. ಮನಸ್ಸಿನ ಇಂತಹ ಹೋರಾಟಗಳನ್ನು ನಾವು ಜಾಗ್ರತಾವಸ್ಥೆಯಲ್ಲಿಯೂ ಅನುಭವಿಸುತ್ತೇವೆ. ಆಗ ಈ ದುಃಖಕರವಾದ ಮನಸ್ಸಿನ ಸ್ಥಿತಿಯು ನಮಗೆ ಸ್ಪಷ್ಟವಾಗಿ ಗೊತ್ತಾಗುತ್ತದೆ ಆದರೆ ಮನಸ್ಸಿನ ಈ ಹೋರಾಟವು ಅಜಾಗ್ರತಾವಸ್ಥೆಯಲ್ಲಿ ಗುಪ್ತವಾಗಿಯೂ ನಡೆಯುತ್ತದೆಂಬ ಹೊಸ ಸಿದ್ಧಾಂತವನ್ನು ಮನೋವಿಶ್ಲೇಷಜ್ಞರು ಕಂಡುಹಿಡಿದಿದ್ದಾರೆ. ಅಜಾಗ್ರತಾವಸ್ಥೆಯು ಜಗಳಾಡುವ ಮನೋವೃತ್ತಿಗಳ ಯುದ್ಧದ ಭೂಮಿಯೆಂಬ ಅರಿವು ನಮಗೆ ಇರುವುದಿಲ್ಲ; ಅದು ಅವ್ಯಕ್ತವಾಗಿರುತ್ತದೆ.

ಮನಸ್ಸಿನಲ್ಲಿ ಹೋರಾಟವು ನಡೆದಾಗ ವ್ಯಕ್ತಿತ್ವದಲ್ಲಿ ಒಡಕು ಹುಟ್ಟುತ್ತದೆ; ಮನಸ್ಸು ಇಬ್ಭಾಗವಾಗುತ್ತದೆ ಪರಸ್ಪರ ವಿರೋಧವಾದ ಧ್ಯೇಯಗಳು ನಮ್ಮನ್ನು ಪ್ರೇರಿಸುವುದರಿಂದ ಯಾವುದನ್ನು ನಾವು ಸಾಧಿಸಬೇಕೆಂಬ ಸಮಸ್ಯೆಯು ಉದ್ಭವಿಸುತ್ತದೆ. ಪ್ರೇಮವೊ, ಮರ್ಯಾದೆಯೊ; ಪ್ರಣಯವೊ, ಸಮಾಜವೊ; ಬಂಧುಪ್ರೇಮವೊ, ಕರ್ತವ್ಯವೊ; ಸ್ವಾರ್ಥವೊ, ಪ್ರಾಮಾಣಿಕತನವೊ; ದೇವರೊ, ದುಡ್ಡೊ; ಲಾಭವೊ, ಆತ್ಮಗೌರವವೊ; ಮನೆಯೊ, ದೇಶವೊ; ಇವೇ ಮೊದಲಾದ ಸಮಸ್ಯೆಗಳ ಸಂದರ್ಭಗಳಲ್ಲಿ ಇಂಥ ದ್ವಂದ್ವವು ನಮ್ಮನ್ನು ಪೀಡಿಸುತ್ತದೆ. ಇದಕ್ಕೂ ಕಡಮೆ ತರಗತಿಯ ಸನ್ನಿವೇಶಗಳಲ್ಲಿ ಕಾಮ, ಭಯ, ಲೋಭ, ದ್ವೇಷ, ಪ್ರತೀಕಾರ ಮತ್ತು ದುರಭಿಮಾನ ಇವು ಮನುಷ್ಯನ ಶ್ರೇಷ್ಠವಾದ ವೃತ್ತಿಗಳೊಡನೆ ಹೋರಾಟವನ್ನು ಹೂಡುತ್ತವೆ. ಒಂದು ನಿರ್ಣಯಕ್ಕೆ ಬರುವ ವರೆಗೆ ಮನಸ್ಸಿನ ಹೋರಾಟದಲ್ಲಿ ಆಗುವ ಈ ವ್ಯಥೆಯನ್ನು ಸಹಿಸಬೇಕಾಗುತ್ತದೆ. ಆದರೆ ಅನಿಯಮಿತ ಕಾಲದ ವರೆಗೆ ಮನಸ್ಸು ಈ ಸ್ಥಿತಿಯಲ್ಲಿ ನಿಲ್ಲುವುದಿಲ್ಲ. ಹೋರಾಡುವ ವೃತ್ತಿಗಳಲ್ಲಿ ಶಾಂತತೆಯನ್ನಾಗಲಿ ಒಪ್ಪಂದವನ್ನಾಗಲಿ ಮಾಡಿಸುವುದಕ್ಕೆ ಅಥವಾ ಮಾಡುವುದಕ್ಕೆ ನಮ್ಮ ಮನಸ್ಸು ಕೆಲವು ದಾರಿಗಳನ್ನು ಹುಡುಕುತ್ತದೆ.

ಈ ಒಪ್ಪಂದವನ್ನುಂಟುಮಾಡಲಿಕ್ಕೆ ಮೂರು ಮಾರ್ಗಗಳಿವೆ :—

(೧) **ಐಕ್ಯತೆ** ( Integration ).— ಪ್ರವೃತ್ತಿಗಳು ಪರಸ್ಪರ ಹೋರಾಡದಂತೆ ಅವುಗಳಲ್ಲಿ ಐಕ್ಯತೆಯನ್ನು ಉಂಟುಮಾಡುವುದು—ಅವನ್ನು ವ್ಯಕ್ತಿತ್ವದಲ್ಲಿ ಸಮಾವೇಶಮಾಡುವುದು ಮನಸ್ಸಿನ ಹೋರಾಟವನ್ನು ನಿಲ್ಲಿಸುವುದಕ್ಕೆ ಒಂದು ಶ್ರೇಷ್ಠವಾದ ಮಾರ್ಗವು. ಇಂತಹ ಸಂಧಾನವುಂಟಾದ ಮೇಲೆ ಮನಸ್ಸು ಯಥಾವತ್ತಾಗಿ ತನ್ನ ಕಾರ್ಯವನ್ನು ಮಾಡುತ್ತದೆ. ಸ್ವಪ್ನಗಳನ್ನು ಪರಿಶೀಲಿಸಿ ನೋಡಿದರೆ ವಿರೋಧವೃತ್ತಿಗಳು ಯಾವುವೆಂಬುದು ಗೊತ್ತಾಗಿ ಅವುಗಳನ್ನು ವ್ಯಕ್ತಿತ್ವದೊಡನೆ ಸಂಬಂಧಿಸಲು ಸಾಧ್ಯವಾಗುತ್ತದೆ.

(೨) **ವಿಯೋಜನ** (Dissociation).— ಐಕ್ಯತೆಯು ಅಥವಾ ಸಂಧಾನವು ಎಷ್ಟೋ ಸಾರೆ ಶಕ್ಯವಾಗುವುದಿಲ್ಲ. ವಿರೋಧವೃತ್ತಿಗಳು ಅತ್ಯಂತ ಪ್ರಬಲವಾಗಿದ್ದಲ್ಲಿ ಪ್ರಧಾನವೃತ್ತಿಯ ಆಟವು ನಡೆಯುವುದಿಲ್ಲ. ಒಮ್ಮೆ ಒಂದು ವೃತ್ತಿಯು ಅಥವಾ ವೃತ್ತಿಗಳ ಸಮೂಹವು ಮನಸ್ಸನ್ನು ಆಕ್ರಮಿಸಿದರೆ ಮತ್ತೊಮ್ಮೆ ಅದಕ್ಕೆ ವಿರುದ್ಧವಾದ ವೃತ್ತಿಯು ಅಥವಾ ವೃತ್ತಿಗಳು ಮನಸ್ಸಿನ ಮೇಲೆ ಅಧಿಕಾರವನ್ನು ನಡೆಯಿಸುತ್ತವೆ. ಇಂಥ ಪ್ರಸಂಗಗಳಲ್ಲಿ ವಿವಿಧ ವ್ಯಕ್ತಿತ್ವವು ತಲೆದೋರುತ್ತದೆ. ಅಂದರೆ ಒಂದಕ್ಕೊಂದು ವಿರೋಧವಾದ ಪರ್ಯಾಯ ವ್ಯಕ್ತಿತ್ವಗಳು ಉಂಟಾಗುತ್ತವೆ; ಒಂದೇ ವ್ಯಕ್ತಿಯಲ್ಲಿ ಎರಡು ಭಿನ್ನವರ್ತನಗಳು ಕಂಡುಬರುತ್ತವೆ. ಈ ವಿರೋಧದ ಅರಿವು ಅದನ್ನು ಅನುಭವಿಸುವ ವ್ಯಕ್ತಿಗೆ ಉಂಟಾಗುವುದಿಲ್ಲ. ಒಂದು ಸ್ಥಿತಿಯಲ್ಲಿದ್ದಾಗ ಮತ್ತೊಂದು ಸ್ಥಿತಿಯ ಸ್ಮೃತಿಯು ನಾಶವಾಗುತ್ತದೆ. ಇಂಥ ದ್ವಿ-ವ್ಯಕ್ತಿತ್ವದ ಉದಾಹರಣೆಗಳು ಆಂಗ್ಲ ಸಾಹಿತ್ಯದಲ್ಲಿ ಹೇರಳವಾಗಿ ದೊರೆಯುತ್ತವೆ. ಇರೆನಾ (Irena) ಎಂಬ ಓರ್ವ ಚಿಕ್ಕ ಹುಡುಗೆಯು ಕಾಯಿಲೆಯಾಗಿ ಮಲಗಿದ ತನ್ನ ತಾಯಿಯ ಶುಶ್ರೂಷೆಯನ್ನು ಅತ್ಯಂತ ಶ್ರಮವಹಿಸಿ ಮಾಡುತ್ತಾಳೆ. ಇದರಲ್ಲಿ ಅವಳು ಗಂಡನ ಮನೆಯನ್ನೂ ಸಾಮಾಜಿಕ ಚಟುವಟಿಕೆಗಳನ್ನೂ ಮರೆಯುತ್ತಾಳೆ. ದುರ್ದೈವದಿಂದ ತಾಯಿಯು ತೀರಿಹೋಗಲು ಆ ಹುಡುಗೆಯು ಮೂರ್ಛೆಹೊಂದುತ್ತಾಳೆ; ಚೇತರಿಸಿದ ನಂತರ ತನ್ನ ತಾಯಿಯ ವಿಷಯಕ್ಕೆ ಎಲ್ಲವನ್ನೂ ಮರೆತು ಆನಂದದಿಂದ ಕಾಲಕಳೆಯುತ್ತಾಳೆ. ಒಮ್ಮೆ ದುಃಖದ

ಮತ್ತೊಮ್ಮೆ ಆನಂದದ ಸ್ಥಿತಿಗಳನ್ನು ಆ ಹುಡುಗಿಯು ಪರ್ಯಾಯದಿಂದ ಅನುಭವಿಸುತ್ತಾಳೆ. ಒಂದು ಸ್ಥಿತಿಯಲ್ಲಿ ಇದ್ದಾಗ ಮತ್ತೊಂದು ಸ್ಥಿತಿಯ ಅರಿವು ಆಕೆಗೆ ಉಂಟಾಗುವುದಿಲ್ಲ.

ದುಃಖದ ಪ್ರಸಂಗಗಳು ಬಂದಾಗ ಅವುಗಳನ್ನು ಎದುರಿಸಲು ಅಸಮರ್ಥರಾದವರು ಮನೆ ಬಿಟ್ಟು ಹೋಗುವರು. ಇಂಥ ಅನೇಕ ಜನರು ನಮ್ಮ ನಿದರ್ಶನಕ್ಕೆ ಬರುತ್ತಾರೆ. ತಂದೆತಾಯ್ಗಳ ಬಂಧನದಲ್ಲಿರಲು ಒಪ್ಪದ ಹುಡುಗನು ಊರೂರುಗಳನ್ನು ತಿರುಗುತ್ತ ಹೋಗಬಹುದು. ಪಾಲಕರ ಅಥವಾ ಗೆಳೆಯರ ಪ್ರೇಮವನ್ನು ಸಂಪಾದಿಸದ ಹುಡುಗನು ಜಡ್ಡನ್ನು ತಂದು ಕೊಳ್ಳಬಹುದು. ಇಂಥ ಪರ್ಯಾಯ ಅವಸ್ಥೆಯಲ್ಲಿದ್ದಾಗ ಜನರು ತಮ್ಮ ಪೂರ್ವದ ದುಃಖಮಯವಾಗಿದ್ದ ಸ್ಥಿತಿಯನ್ನು ಮರೆಯುತ್ತಾರೆ ಮನಸ್ಸಿನ ಹೋರಾಟವನ್ನು ತಪ್ಪಿಸಲಿಕ್ಕೆ ಮರೆವೂ ಒಂದು ಉಪಾಯವು. ಆದರೆ ಸುಸಂಬದ್ಧವಾದ ವ್ಯಕ್ತಿತ್ವವು ಇಲ್ಲಿ ಅಳವಟ್ಟಿರುವುದಿಲ್ಲ.

(೩) **ಪ್ರತಿಬಂಧ** (Repression) — ಮನಸ್ಸಿನ ಹೋರಾಟದ ಬಾಧೆಯನ್ನು ತಪ್ಪಿಸಲಿಕ್ಕೆ ಮೂರನೆಯ ಮಾರ್ಗವೆಂದರೆ ವಿರೋಧಿಸುವ ವೃತ್ತಿಗಳಿಗೆ ಪ್ರತಿಬಂಧವನ್ನು ಹಾಕುವುದು. ಒಮ್ಮೊಮ್ಮೆ ವಿರೋಧ ವೃತ್ತಿಯು ಅಷ್ಟೊಂದು ಪ್ರಬಲವಾಗಿರುವುದಿಲ್ಲ. ಆಗ ಮುಖ್ಯ ವ್ಯಕ್ತಿತ್ವವು ಅದನ್ನು ಪ್ರತಿಬಂಧಿಸಬಲ್ಲದು, ಹತ್ತಿಕ್ಕಬಲ್ಲದು. ಈ ಪ್ರತಿಬಂಧಿಸಲ್ಪಟ್ಟ ವೃತ್ತಿಯು ಪ್ರತ್ಯಕ್ಷವಾಗಿ ಅನುಭವವನ್ನು ನಿಯಂತ್ರಿಸದಿದ್ದರೂ ಅಪ್ರತ್ಯಕ್ಷ ರೀತಿಯಿಂದ ಒಂದು ವಿರೂಪವನ್ನು ತಾಳಿ ಅದು ಪ್ರಕಟವಾಗುತ್ತದೆ. ಮಹಾಪರಾಧವನ್ನು ಮಾಡಿದವನು ಲೇಡಿ ಮ್ಯಾಕ್‌ಬೆಥ್‌ಳ ಹಾಗೆ ಅಪರಾಧ ಮಾಡಿದ ಕೈಗಳನ್ನು ಸ್ವಚ್ಛವಾಗಿ ತೊಳೆದುಕೊಳ್ಳಲು ಉದ್ಯುಕ್ತನಾಗಬಹುದು; ಮಡಿ-ಮೈಲಿಗೆಗೆ ವಿಶೇಷ ಮಹತ್ವವನ್ನು ಕೊಡಬಹುದು; ತೀರ್ಥಯಾತ್ರೆಗಳಿಗೆ ಪದೇಪದೇ ಹೋಗಬಹುದು. ಯಾವುದಾದರೊಂದು ವೃತ್ತಿಯು ಪ್ರತಿಬಂಧಿಸಲ್ಪಟ್ಟಿದ್ದರೆ ಅದಕ್ಕೆ ವಿರೋಧವಾದ ವೃತ್ತಿಯ ನೆಳವಿಗೆ ಸಿಕ್ಕು, ನಾವು ಬಹಿರಂಗವಾಗಿ ಕಾರ್ಯವನ್ನು ಕೈಕೊಳ್ಳುವ ಪೂರ್ವದಲ್ಲಿ ಅನ್ಯೋನ್ಯ ವಿರೋಧವಾದ ಎರಡೂ ವೃತ್ತಿಗಳು, ಇಲ್ಲವೆ ಉದ್ದೇಶಗಳು ಅಥವಾ ಗುರಿಗಳು ನಮ್ಮನ್ನು ವಶಮಾಡಿ

ಕೊಳ್ಳಲಿಕ್ಕೆ ಪರಸ್ಪರ ಹೋರಾಡುತ್ತಿರುತ್ತವೆ. ಈ ಹೋರಾಟವನ್ನು ನಿಲ್ಲಿಸಲೋಸುಗ ವ್ಯಕ್ತಿಯು ಯಾವುದಾದರೂ ಸನ್ನಿವೇಶದ ಬಲದಿಂದಲೊ ಕಾರಣದಿಂದಲೊ, ಎರಡರಲ್ಲೊಂದು ಉದ್ದೇಶವನ್ನು ಅಂಗೀಕರಿಸಿ ಮತ್ತೊಂದನ್ನು ಪ್ರತಿಬಂಧಿಸುತ್ತಾನೆ. ಈ ಪ್ರತಿಬಂಧಿಸಲ್ಪಟ್ಟ ಪ್ರವೃತ್ತಿಯು ಅಥವಾ ಉದ್ದೇಶವು ವಿಕೃತರೂಪದಿಂದ ತನ್ನ ಕುರುಹನ್ನು ತೋರಿಸುತ್ತದೆ.

ಸ್ವಪ್ನದಲ್ಲಿ ಈ ತರದ ಸಂಕೇತಗಳು ವಿಪುಲವಾಗಿ ದೊರೆಯುತ್ತವೆ. ಮಾಧ್ಯಮಿಕ ಶಿಕ್ಷಣವನ್ನು ಪೂರೈಸಿದ ಒಬ್ಬ ತರುಣನು ವ್ಯಾಪಾರದಲ್ಲಿ ತೊಡಗಿ ಹಣವನ್ನು ಗಳಿಸಬೇಕೆಂಬ ಉತ್ಕಟೇಚ್ಛೆಯಿದ್ದರೂ ಹೆಚ್ಚು ವಿದ್ಯಾವಂತನಾಗ ಬೇಕೆಂಬ ಮಹತ್ವಾಕಾಂಕ್ಷೆಯಿಂದ ಕಾಲೇಜನ್ನು ಪ್ರವೇಶಿಸುತ್ತಾನೆ. ಎಂದರೆ, ಇಲ್ಲಿ ಅವನು ಹಣ ಗಳಿಸಬೇಕೆಂಬ ಇಚ್ಛೆಯನ್ನು ತಡೆದಂತಾಯಿತು. ಆದರೆ ಈ ಇಚ್ಛೆಯು ಅವನಲ್ಲಿ ಗುಪ್ತರೀತಿಯಿಂದ ವ್ಯಕ್ತವಾಗುತ್ತದೆ ಅಭ್ಯಾಸಕ್ಕೆ ಕುಳಿತರೆ ಲಕ್ಷ್ಯವು ಇಲ್ಲದಂತಾಗುತ್ತದೆ. ತಲೆನೋವು, ನಿದ್ರೆಬಾರದಿರುವುದು ಮೊದಲಾದವು ಅವನನ್ನು ಬಾಧಿಸತೊಡಗುತ್ತವೆ. ಅವನ ಸ್ವಪ್ನಗಳನ್ನು ಪರಿಶೀಲಿಸಿದರೆ ಅವು ದುಡ್ಡು ಗಳಿಸುವ ಯೋಜನೆಗಳಿಂದಲೇ ತುಂಬಿ- ಹೋಗಿರುತ್ತವೆ. ಶೇಖಮಹಮ್ಮದನ ಹಾಗೆ ಐಶ್ವರ್ಯದ ಹಗಲುಗನಸುಗಳನ್ನು ಕೂಡ ಅವನು ಅನುಭವಿಸುತ್ತಾನೆ. ತನ್ನಲ್ಲಿರುವ ದುಡ್ಡಿನ ಪ್ರೇಮವನ್ನು ಬಿಚ್ಚಿಹೇಳುವುದಕ್ಕೆ ಅವನಿಗೆ ನಾಚಿಕೆ. ಕನಸುಗಳು ವ್ಯಂಗ ವ್ಯಕ್ತಿತ್ವದ ಕುರುಹುಗಳು. ಪ್ರತಿಬಂಧಿಸಲ್ಪಟ್ಟ ಭಾವಗಳು ಮತ್ತು ಇಚ್ಛೆಗಳು ಒಂದಿಲ್ಲೊಂದು ರೀತಿಯಿಂದ ಕನಸಿನಲ್ಲಿ ವ್ಯಕ್ತವಾಗುತ್ತವೆ. ಎಷ್ಟೋ ಕನಸುಗಳು ನಮ್ಮ ನೈತಿಕ ಭಾವನೆಗೆ ಕಲಂಕವನ್ನು ತರುವಂಥವೂ ಇರುತ್ತವೆ. ಕನಸಿನ ಬಗ್ಗೆ ಮತ್ತು ಆ ವಿಷಯಗಳನ್ನೊಳಗೊಂಡ ಮನೋವಿಶ್ಲೇಷಣದ ಬಗ್ಗೆ ವಿಸ್ತಾರವಾಗಿ ಅಭ್ಯಾಸವನ್ನು ಮಾಡಬಯಸುವವರು ಫ್ರಾಯ್ಡ್ ಮತ್ತು ಯೂಂಗ್ ಇವರು ಬರೆದ ಗ್ರಂಥಗಳನ್ನು ಓದಬೇಕು.

ಕೆಲಕೆಲವು ಸ್ವಪ್ನಗಳು ಕೆಲಕೆಲವು ಸಂಗತಿಗಳ ಸಂಕೇತಗಳೆಂದು ಮನೋವಿಶ್ಲೇಷಣಜ್ಞರು ಹೇಳುತ್ತಾರೆ. ಕನಸಿನಲ್ಲಿಯ ಅರಸನು ತಂದೆಯನ್ನು ಸೂಚಿಸುತ್ತಾನಂತೆ. ಪ್ರಪಂಚದ ಸನ್ನಿವೇಶಗಳು ಪ್ರತಿಕೂಲವಿದ್ದಲ್ಲಿ ಭಯದ

ಕನಸು, ಮಾನಹಾನಿಯ ಕನಸು, ನಿದ್ರೆಯಲ್ಲಿ ತಿರುಗಾಡುವ ಕನಸು (Somnambulism) ಮುಂತಾದುವು ಬೀಳುತ್ತವೆ. ಹಗಲುಗನಸುಗಳು ಅಥವಾ ಭ್ರಮೆಗಳು ಈಡೇರದ ಇಚ್ಛೆಗಳ ಅಥವಾ ಕಾರ್ಯರೂಪಗಲ್ಲಿ ಬಾರದ ವೃತ್ತಿಗಳ ದ್ಯೋತಕಗಳು. ಚಿಕ್ಕಮಕ್ಕಳು ಮತ್ತು ಯುವಕರು ಹಗಲುಗನಸುಗಳನ್ನು ಕಾಣುವುದು ಬಹಳ. ಅವರು ಬಯಸಿದ ಉದ್ದೇಶಗಳು—ಸಾಹಸದ ಕಾರ್ಯ, ಗೆಳೆಯರಿಗಾಗಲಿ, ಬಂಧುಗಳಿಗಾಗಲಿ ದೊಡ್ಡ ಉಪಕಾರ ಅಥವಾ ಪ್ರತೀಕಾರಮಾಡುವುದು ಇತ್ಯಾದಿ—ಕೈಗೂಡಿರುವುದಿಲ್ಲ ಆಗ ಅವರು ತಮ್ಮ ಮನೋಸಾಮ್ರಾಜ್ಯದ ನಾಯಕ-ನಾಯಕೆಯರು ಆಗಿರುತ್ತಾರೆ. ಪರೀಕ್ಷೆಯಲ್ಲಿ ಬಹುಮಾನ ಅಥವಾ ಪ್ರಶಂಸೆಯನ್ನು ಪಡೆಯದಿದ್ದರೂ ಅದನ್ನು ಪಡೆದವರ ಹಾಗೆಯೆ ವಿಚಾರಮಗ್ನರಾಗುತ್ತಾರೆ. ನಿರಾಶೆಹೊಂದಿದ ಅಂತರ್ಮುಖರು ಮನೋಭ್ರಮೆಯಲ್ಲಿ ಪ್ರತಿಫಲವನ್ನು ಅರಸುತ್ತಾರೆ.

'ರೂಢಿಗಳು' ಅಥವಾ ಚಾಳಿಗಳು (Mannerisms) ಪ್ರತಿಬಂಧಿತ ವೃತ್ತಿಗಳ ಚಿಹ್ನೆಗಳು. ಸಣ್ಣ ತಪ್ಪುಗಳು, ಅಮುಖ್ಯವಾದ ಸಂಗತಿಗಳು ಮತ್ತು ವಿಲೋಪಗಳು ಅಜಾಗ್ರತಾವಸ್ಥೆಯಲ್ಲಿಯ ಹೋರಾಟದ ಪ್ರಕಟನೆಗಳೆಂದು ಫ್ರಾಯ್ಡ್‌ನ ಅನುಯಾಯಿಗಳ ಸಿದ್ಧಾಂತವು. ಮಾತನಾಡುವಾಗ, ಬರೆಯುವಾಗ ಮತ್ತು ನಡೆಯುವಾಗ ಒಮ್ಮೊಮ್ಮೆ ಪ್ರಮಾದಗಳು ಸಂಭವಿಸುತ್ತವೆ ತೊದಲ್ನುಡಿಯುವುದು ಸಹ ಮನಸ್ಸಿನ ಹೋರಾಟದ ಸಂಕೇತವೇ. ನಾವು ಅತ್ಯಂತ ಜಾಗರೂಕತೆಯಿಂದ ಕೆಲಸವನ್ನು ಮಾಡುತ್ತಿದ್ದರೂ ಸಹ ಆಕಸ್ಮಿಕವಾಗಿ ಅಪಘಾತಗಳು ಸಂಭವಿಸುತ್ತವೆ. ಕೈಯೊಳಗಿಂದ ಒಂದು ಪದಾರ್ಥವು ಜಾರಿ ಬೀಳುತ್ತದೆ; ಒಮ್ಮೊಮ್ಮೆ ಬರೆದುದನ್ನೇ ಗೀಟು ಹಾಕುತ್ತೇವೆ; ಮಾತನಾಡುವಾಗ ಹೇಳಬೇಕಾದುದನ್ನು ಹೇಳುವುದಿಲ್ಲ, ಉಗ್ಗುತ್ತೇವೆ. ಇಂಥ ಚಿಕ್ಕ ಸಂಗತಿಗಳು ಸಹ ಮನಸ್ಸಿನ ಹೋರಾಟದಿಂದಲೇ ಉಂಟಾಗುತ್ತವೆ. ಪ್ರತಿಬಂಧಿಸಲ್ಪಟ್ಟ ಭಾವಗಳೇ ಹೀಗೆ ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಳ್ಳುತ್ತವೆ. ಸಾಲೆಯ ಹುಡುಗನು ತನ್ನ 'ಎಕ್ಸರಸೈಜ್' ಪುಸ್ತಕವನ್ನು ಕೆಡಿಸುವುದು ಶಿಕ್ಷಕನ ಅಥವಾ ತಂದೆಯ ನಿರಂಕುಶ ಪ್ರಭುತ್ವದ ಉಲ್ಲಂಘನೆಯ ಸಂಕೇತವಾಗಿರಬಹುದು. ಮಗುವು ಗೃಹಪಾಠವನ್ನು ಅಥವಾ

ಹೇಳಿದ ಪಾಠವನ್ನು ಮಾಡಿಕೊಂಡು ಬರಲಿಕ್ಕೆ ಮೇಲಿಂದ ಮೇಲೆ ಮರೆಯು ವುದು ಅವನ ಅಲಕ್ಷ್ಯವಾಗಿರದೆ ಅಭ್ಯಾಸದ ಕಡೆಗೆ ಇರುವ ಅವನ ತಿರಸ್ಕಾರದ ವೃತ್ತಿಯಾಗಿರಬಹುದು.

ವಿಪರೀತವಾದ ಉತ್ಸಾಹವನ್ನು ಅಥವಾ ನಮ್ರತೆಯನ್ನು ಯಾವ ನಾದರೂ ತೋರಿಸುತ್ತಿದ್ದರೆ ತದ್ವಿರುದ್ಧವಾದ ಮನೋವೃತ್ತಿಯನ್ನು ಮರೆಮಾಜ ಲಿಕ್ಕೆ ಅವನು ಹಾಗೆ ಮಾಡುತ್ತಾನೆಂದು ತಿಳಿಯಬೇಕು, ಎಂದು ಮನೋ-ವಿಶ್ಲೇಷಣಜ್ಞರು ಹೇಳುತ್ತಾರೆ. ಆದುದರಿಂದ ಅತಿ ಲಜ್ಜೆಯು ಪ್ರತಿಬಂಧಿಸ ಲ್ಪಟ್ಟ ಕಾಮುಕತೆಯನ್ನು ಸೂಚಿಸಬಹುದು. ಅತಿ ವಿನಯವು ಧೂರ್ತತನದ ಲಕ್ಷಣವಾಗಿರಬಹುದು— (अति विनयं धूर्त लक्षणम्।). ಅತಿ ಸ್ವಚ್ಛತೆಯು ಬಚ್ಚಿಟ್ಟ ಅಪರಾಧದ ಬಾಹ್ಯ ಚಿಹ್ನವಾಗಿರಬಹುದು. ತನಗೆ ನೀಗದ ಕಾರ್ಯ ಕೈಕೊಳ್ಳುವ ಒಣ ಹೆಮ್ಮೆಯು ನ್ಯೂನ್ಯಭಾವ ( Inferiority Coplex ) ವಾಗಿರಬಹುದು ಅನ್ಯರಲ್ಲಿಯ ವಿಶಿಷ್ಟ ದೋಷಗಳನ್ನು ಎಣಿಸುವುದು ತನ್ನ ಲ್ಲಿಯೇ ಇದ್ದ ಅಂಥ ದೋಷಗಳನ್ನು ಮರೆಮಾಜುವ ಯತ್ನವಾಗಿರಬಹುದು.

**ಮಕ್ಕಳ ಅಪರಾಧಗಳು.**— ಶಿಕ್ಷಕನು ಮನಸ್ಸಿನ ಹೋರಾಟದ ಮತ್ತು ಮನೋವೃತ್ತಿಗಳ ಪ್ರತಿಬಂಧನದ ತತ್ವಗಳನ್ನು ತಿಳಿದುಕೊಳ್ಳುವುದು ಅಗತ್ಯವಾದುದು. ಏಕೆಂದರೆ ಇದರಿಂದ ಬಾಲಕರ ಮತ್ತು ತರುಣರ ಅಪರಾಧದ ಕಾರಣಗಳನ್ನು ಹಾಗು ಅವುಗಳ ನಿವಾರಣೋಪಾಯಗಳನ್ನು ಕಂಡುಹಿಡಿಯುವುದು ಸುಲಭವಾಗುತ್ತದೆ.

ಸುಳ್ಳುಹೇಳುವುದು.— ಬೆಳೆಯುವ ಮಗುವು ತನ್ನನ್ನು ಸುತ್ತಿಕೊಂಡ ಸಾಮಾಜಿಕ ಜೀವನಕ್ಕೆ ಹೊಂದಿಕೊಂಡು ಹೋಗಲು ಅಸಮರ್ಥನಾಗು ತ್ತಾನೆ. ಆಗ ಅವನಲ್ಲಿ ವಿಚಿತ್ರ ವರ್ತನೆಗಳು ಮತ್ತು ದುರ್ನಡತೆಗಳು ಕಂಡು 'ಬರುತ್ತವೆ. ಸುಳ್ಳುಹೇಳುವುದು ಇಂಥ ಒಂದು ದುರ್ನಡತೆಯ ಗುಣವು. ದಂಡವನ್ನೊ, ಕಷ್ಟಗಳನ್ನೊ ತಪ್ಪಿಸಲೋಸುಗ ಬುದ್ಧಿಪೂರ್ವಕವಾಗಿ ಸುಳ್ಳು ಹೇಳುವುದು ನಿಜವಾದ ಅಸತ್ಯತೆಯು. ಆದರೆ ಮಕ್ಕಳು ಅನೇಕ ಸಲ ಮನಸ್ಸಿನ ಹೋರಾಟದ ಪರಿಣಾಮವಾಗಿ ಏನೊಂದು ಉದ್ದೇಶವಿಲ್ಲದೆ ಸುಳ್ಳು ಹೇಳುವುದೂ ಉಂಟು. ಆದರೆ ಇದು ಮನೋಜಾಡ್ಯದ ಲಕ್ಷಣವು. ಭಾವನಾ

ಪ್ರಪಂಚದಲ್ಲಿ ವ್ಯವಹರಿಸುವ ಬಾಲಕರಿಗೆ ಯಾವುದು ಸತ್ಯ, ಯಾವುದು ಭ್ರಮೆ ಎಂಬುದು ತಿಳಿಯುವುದು ದುಸ್ತರ. ಅವರು ತಮ್ಮ ಮನಸ್ಸಿಗೆ ತೋಚಿದ್ದನ್ನೇ ಹೇಳಿಬಿಡುತ್ತಾರೆ. ಇವು ' ಬಿಳೀ ಸುಳ್ಳು 'ಗಳು. ಗಾಳಿಗೋಪುರಗಳನ್ನು ಕಟ್ಟುವ ತರುಣರು ತಮ್ಮ ಪೌರುಷವನ್ನು ಬೆಳಗುವ ಸುಳ್ಳು ಮಾತುಗಳನ್ನು ಆಡುತ್ತಾರೆ. ಆತ್ಮಪ್ರತಿಷ್ಠಾ-ಪ್ರವೃತ್ತಿಯು ವ್ಯವಹಾರದಲ್ಲಿ ನಿಷ್ಫಲವಾದಾಗ ಅದು ಈ ತರದ ಸುಳ್ಳುಮಾತುಗಳಲ್ಲಿ ಕಾಣಿಸಿಕೊಳ್ಳುತ್ತದೆ.

ಕಳವುಮಾಡುವುದು.—ಬುದ್ಧಿಪೂರ್ವಕವಾಗಿ ಕಳವುಮಾಡುವುದು ಕಾರ್ಯಸಕ್ತವಾದ ಸಂಗ್ರಹ-ಪ್ರವೃತ್ತಿಯು. ಆದರೆ ಅಜಾಗ್ರತಾವಸ್ಥೆಯಲ್ಲಿಯ ವೃತ್ತಿಗಳು ಸಹ ಒಮ್ಮೊಮ್ಮೆ ಮಕ್ಕಳನ್ನು ಕಳವು ಮಾಡಹಚ್ಚುವುವು. ಕಳವು ಪಾಲಕರ ವಿರುದ್ಧ ನಡೆಯಿಸಿದ ಬಂಡಾಯವೇ. ಒಮ್ಮೊಮ್ಮೆ ಪ್ರತಿಬಂಧಿಸಲ್ಪಟ್ಟ ಕಾಮಪ್ರವೃತ್ತಿಯು ಕಳವಿನ ರೂಪದಲ್ಲಿ ವ್ಯಕ್ತವಾಗುತ್ತದೆ. ಬಾಲಕನ ಕಾಮಪ್ರವೃತ್ತಿಯನ್ನು ಜಾಗ್ರತಗೊಳಿಸಿ ಆ ಸಮಯಕ್ಕೆ ಯಾವುದಾದರೊಂದು ವಸ್ತುವನ್ನು ಕದಿಯುವ ಉಪಾಯವನ್ನು ಅವನ ದುಷ್ಟ ಗೆಳೆಯರು ಸೂಚಿಸಬಹುದು; ಅವನ ಕಾರ್ಯವು ಅಲ್ಲಿ ಸಫಲವಾಗಲೂಬಹುದು. ಇಂಥ ಅನೇಕ ಪ್ರಸಂಗಗಳು ಬಂದರೆ ಮಗುವಿಗೆ ಕದಿಯುವ ಹುಚ್ಚೇ ( Kleptomania ) ಹಿಡಿಯಬಹುದು. ಯಾಕೆಂದರೆ ಅವನ ಕಾಮಪ್ರವೃತ್ತಿಯು ವಿಕೃತರೂಪುಗೊಂಡು ಕದಿಯುವ ಚಟದಲ್ಲಿ ತೃಪ್ತಿಹೊಂದುತ್ತದೆ. ಹೀಗೆ ಪ್ರವೃತ್ತಿಯ ಇಚ್ಛೆಯು ಈಡೇರದಿದ್ದಲ್ಲಿ ಸಂಗ್ರಹಪ್ರವೃತ್ತಿಯು ಪ್ರಚೋದನಗೊಳ್ಳುವುದೆಂದು ಸಾಮಾನ್ಯವಾಗಿ ಹೇಳಬಹುದು. ಕಳವು ಮಾಡುವ ಹುಡುಗನನ್ನು ದಂಡಿಸಿ ಸಾಲೆಯಿಂದ ಹೊರಗೆ ಹಾಕುವುದು ಅವನನ್ನು ಸುಧಾರಿಸುವ ಮಾರ್ಗವಾಗುವುದಿಲ್ಲ. ಆದರೆ ಕಳವಿನ ಮೂಲ ಕಾರಣವನ್ನು ಕಂಡುಹಿಡಿದು ಮಗುವನ್ನು ತಿದ್ದುವ ಉಪಾಯಗಳನ್ನು ಶಿಕ್ಷಕರು ಕೈಕೊಳ್ಳಬೇಕು.

ತಿರುಗಾಡುವುದು.— ಕೆಲವು ವ್ಯೈಗಳ್ಳ ಹುಡುಗರಿಗೆ ತಿರುಗಾಡುವ ಹುಚ್ಚು ಬಹಳ. ಅವರು ಸಾಲೆಗೆ ಹೋಗದೆ ತಪ್ಪಿಸಿ ಎಲ್ಲಿಯಾದರೂ ಹೊರಗೆ ತಿರುಗಾಡಿ ಮನೆಯನ್ನು ಸೇರುವರು. ಮನೆಯಲ್ಲಿ ಪಾಲಕರನ್ನು

ಕೇಳಿದರೆ ' ನಮ್ಮ ಹುಡುಗನು ಸಾಲೆಗೆ ಹೋಗುತ್ತಾನೆ ' ಎಂದೇ ಅವರು ಹೇಳುತ್ತಾರೆ. ತಂದೆಯ ಅಧಿಕಾರದಿಂದ ಪಾರಾಗಬೇಕೆಂಬ ಹುಡುಗನು ಹಾಗೆ ಮಾಡುತ್ತಾನೆ ಅವನು ಸ್ವಾತಂತ್ರ್ಯಪ್ರಿಯನಾದ್ದರಿಂದ ಪಾರತಂತ್ರ್ಯವನ್ನು ಧಿಃಕರಿಸುವನು. ತಂದೆಯ ವಿರುದ್ಧವಾದ ಈ ಕ್ರಾಂತಿಯ ಅರಿವು ಬಾಲಕನಿಗೆ ಒಮ್ಮೊಮ್ಮೆ ಇರುತ್ತದೆ; ಒಮ್ಮೊಮ್ಮೆ ಇರುವುದೂ ಇಲ್ಲ. ಆದರೂ ಅಜಾಗ್ರತಾವಸ್ಥೆಯಲ್ಲಿ ಮನಸ್ಸಿನ ಹೋರಾಟವು ನಡೆದಿದ್ದರಿಂದಲೇ ಅವನು ಸಾಲೆ-ಮನೆಗಳನ್ನು ಬಿಟ್ಟು ಅಂಡಲೆಯತೊಡಗುವನು.

ಅಂತರ್ಮುಖನಾಗುವುದು.— ಬಾಹ್ಯಪ್ರಪಂಚಕ್ಕೆ ಹೊಂದಿಕೊಂಡು ಹೋಗುವುದು ಯುವಕನಿಗೆ ಕಷ್ಟವೆನಿಸುತ್ತದೆ. ಆದುದರಿಂದ ಅವನು ಅಂತರ್ಮುಖನಾಗುತ್ತಾನೆ; ಹಗಲುಗನಸುಗಳನ್ನು ಕಾಣುತ್ತಾನೆ; ಕೃತಕ ನಂಬಿಗೆಯ ಮನೋರಾಜ್ಯದಲ್ಲಿ ಆನಂದವನ್ನು ಹೊಂದುತ್ತಾನೆ, ಬೇಸರಿಕೆ, ಆಯಾಸ, ಇಲ್ಲವೆ ಯಾವುದಾದರೊಂದು ಕಾಲ್ಪನಿಕ ಕಾಯಿಲೆಯ ನೆವದಿಂದ ಸುಮ್ಮನೆ ಹಾಸಿಗೆ ಹಿಡಿದು ಮಲಗಬಯಸುತ್ತಾನೆ. ಸತ್ಯವಾದ ಜಗತ್ತಿನಿಂದ ತಪ್ಪಿಸಿಕೊಳ್ಳಬೇಕೆಂಬುವೇ ಇದಕ್ಕೆ ಅನೇಕ ಸಲ ಕಾರಣವಾಗಿರುತ್ತದೆ. ಆದರೆ ಇಂಥ ಆಯಾಸಕ್ಕೆ ವಿಶ್ರಾಂತಿಯು ಔಷಧವಲ್ಲ. ಅಂತರ್ಮುಖನಾದ ಯುವಕನು ಬಾಹ್ಯ ಚಟುವಟಿಕೆಗಳಲ್ಲಿ ಭಾಗವನ್ನು ವಹಿಸುವಂತೆ ಮಾಡುವುದೇ ನಿಜವಾದ ಉಪಾಯವು. ಇಂಥ ಪ್ರಸಂಗಗಳಲ್ಲಿ ಆಟಗಳನ್ನು ಆಡಿಸುವುದು ಶ್ರೇಷ್ಠವಾದ ಮಾರ್ಗವು. ಒಮ್ಮೊಮ್ಮೆ ಮನೋವಿಶ್ಲೇಷಣದ ಸಹಾಯದಿಂದ ಗುಪ್ತವಾಗಿದ್ದ ಕಾರಣಗಳನ್ನು ಕಂಡುಹಿಡಿದು ತಕ್ಕ ಉಪಾಯಗಳನ್ನು ಮಾಡಬೇಕಾಗುತ್ತದೆ. ಮಕ್ಕಳ ಹಗಲುಗನಸುಗಳು ಒಮ್ಮೊಮ್ಮೆ ಪರಾವಲಂಬನದ ದ್ಯೋತಕಗಳಾಗಿರುತ್ತವೆ. ಆದುದರಿಂದ ಪಾಲಕರೂ ಶಿಕ್ಷಕರೂ ಅವರಿಗೆ ಸ್ವಾವಲಂಬನವನ್ನು ಕಲಿಸಬೇಕು. ಅತಿಪ್ರೇಮದಿಂದ ಮಕ್ಕಳು ಕೆಡುವುದುಂಟು. ಆದುದರಿಂದ ಪಾಲಕರೂ ಶಿಕ್ಷಕರೂ ಅತಿ ಪ್ರೇಮವನ್ನು ತೋರಿಸಬಾರದು. ಯೋಗ್ಯವಾದ ಪ್ರೇಮದಿಂದ ಅವರನ್ನು ಸನ್ಮಾರ್ಗಕ್ಕೆ ಹಚ್ಚಬೇಕು.

ದಂಗೆಮಾಡುವುದು.— ತರುಣ-ತರುಣಿಯರೂ ಬಾಲಕ-ಬಾಲಿಕೆಯರೂ ಪ್ರವೃತ್ತಿಗಳ ಪ್ರವಾಹಕ್ಕೆ ಸಿಲುಕಿಬಿಡುತ್ತಾರೆ. ಅವರಲ್ಲಿ ಪ್ರಬಲ

ವಾದ ಆತ್ಮಪ್ರತಿಷ್ಠಾಪ್ರವೃತ್ತಿಯು ಪ್ರತಿಬಂಧಿಸಲ್ಪಡುವುದರಿಂದ ಅದು ದಂಗೆಯ ರೂಪದಲ್ಲಿ ವ್ಯಕ್ತವಾಗುತ್ತದೆ. ಮುಖ್ಯವಾಗಿ ತರುಣರು ಸ್ವಾತಂತ್ರ್ಯವನ್ನೂ ಪ್ರಭುತ್ವವನ್ನೂ ಪಡೆಯುವದಕ್ಕಾಗಿ ತಂದೆ-ತಾಯಂದಿರ ವಿರುದ್ಧ, ಶಿಕ್ಷಕರ ಅಥವಾ ಸಾಲೆಯ ಶಾಸನಗಳ ವಿರುದ್ಧ ಬಂಡಾಯವೆಬ್ಬಿಸುವ ಸಂಭವ ಉಂಟು. ಪುಂಡ ತರುಣರು ಸಮಾಜದ ಕಂಟಕರಾಗಬಹುದು ಆದುದರಿಂದ ಯುವಕರನ್ನು ಸಹಾನುಭೂತಿಯಿಂದ ನಡೆಯಿಸಿಕೊಂಡು ಅವರ ಉತ್ಸಾಹವೃತ್ತಿಯು ಸಮಾಜ ಸೇವೆಯಲ್ಲಿ ಉದಾತ್ತ ಪರಿವರ್ತನೆಯನ್ನು ಹೊಂದುವಂತೆ ಪ್ರಯತ್ನಿಸಬೇಕು. ದುರ್ನಡತೆಗಳಲ್ಲಿ ವ್ಯಕ್ತವಾಗಬಹುದಾದ ಯುವಕರ ಕಾಮಪ್ರವೃತ್ತಿಯನ್ನೂ ಉದಾತ್ತ ಚಟುವಟಿಕೆಗಳಲ್ಲಿ ಪರಿವರ್ತಿಸಬೇಕು.

**ನಿವಾರಣೋಪಾಯ** — ಅಜಾಗ್ರತಾವಸ್ಥೆಯಲ್ಲಿಯ ಮನಸ್ಸಿನ ಹೋರಾಟವು ಮಕ್ಕಳ ಅನೇಕ ಅಪರಾಧಗಳಿಗೆ ಕಾರಣವಾಗಿರುತ್ತದೆ. **ಈ ಹೋರಾಟವನ್ನು ಹೋಗಲಾಡಿಸಬೇಕಾದರೆ ಪ್ರವೃತ್ತಿಗಳನ್ನು ಉದಾತ್ತಗೊಳಿಸಬೇಕು** (ಪುಟ೪೯–೫೩); **ವ್ಯಕ್ತಿತ್ವದಲ್ಲಿ ಏಕರೂಪತೆಯನ್ನು ಉಂಟುಮಾಡಬೇಕು.** ಮಕ್ಕಳನ್ನು ವೃಥಾ ದಂಡಿಸುವುದರಿಂದ ಚೆನ್ನಾದ ಪರಿಣಾಮವಾಗದೆ ಕೆಟ್ಟ ಪರಿಣಾಮವೇ ಆಗಬಹುದು. ತಾರುಣ್ಯವು ಸ್ವಾತಂತ್ರ್ಯದ ಕಾಲವು. ತರುಣರನ್ನು ನಿರ್ಬಂಧಿಸುವುದರಿಂದ ಅವರ ವಿರೋಧವೃತ್ತಿಯು—ಹಗೆತನವು ಮತ್ತಿಷ್ಟು ಪುಷ್ಟಿಗೊಳ್ಳುವುದು; ಮನೆ, ಸಾಲೆ, ಸಮಾಜಗಳು ತಮ್ಮ ವೈರಿಗಳೆಂದು ಬಗೆದು ಅವುಗಳೊಡನೆ ಹಗೆತನದಿಂದ ಕಾದುವರು. ಶಿಕ್ಷಕರು ತಾವು ತಂದೆತಾಯಂದಿರ ಮುಯ್ಯಾಳುಗಳೆಂದು ಭಾವಿಸಿ ಅವರೊಡನೆ ಅತ್ಯಂತ ಪ್ರೀತಿಯಿಂದಲೂ ಸಹಾನುಭೂತಿಯಿಂದಲೂ ವರ್ತಿಸಬೇಕು; ಮಕ್ಕಳ ಅಪರಾಧಗಳನ್ನು ತಾವೇ ಕಂಡುಹಿಡಿದು ಅವುಗಳ ಕಾರಣಗಳನ್ನು ಪರಿಶೀಲಿಸಬೇಕಲ್ಲದೆ ಅವರಿಂದಲೇ ಹೊರಡಿಸಬೇಕೆಂಬ ಹವ್ಯಾಸಕ್ಕೆ ಹೋಗಬಾರದು. ಏಕೆಂದರೆ ತಮ್ಮ ಅಪರಾಧಗಳ ಕಾರಣವು ಮಕ್ಕಳಿಗೇ ಗೊತ್ತಿರುವುದಿಲ್ಲ. ಮನೋವಿಶ್ಲೇಷಣದ ಸಹಾಯದಿಂದ ಅಪರಾಧಗಳ ನಿವಾರಣೋಪಾಯಗಳನ್ನು ಕಂಡುಹಿಡಿಯಬೇಕು. ಹೊಸ ಶಿಕ್ಷಣವು ಹೊಸ ಸಮಾಜವನ್ನು ನಿರ್ಮಿಸಬೇಕಾದ ತರುಣರ ವರ್ತನದ ಸಮಸ್ಯೆಗಳನ್ನು ಹೊಸ ಮನಶ್ಶಾಸ್ತ್ರದ ದೃಷ್ಟಿಯಿಂದ ಬಿಡಿಸಬೇಕು.

ಮನೋರೋಗವನ್ನು ಹೋಗಲಾಡಿಸಬೇಕಾದರೆ, ಮನಸ್ಸಿನ ಹೋರಾಟವನ್ನು ನಿಲ್ಲಿಸಬೇಕಾದರೆ ರೋಗಿಯ **ಮನಸ್ಸಿನ ಪರಿಶೋಧನೆ**ಯನ್ನು ಮತ್ತು ಅವನ **ಮನಸ್ಸಿನ ಪುನರ್ವ್ಯವಸ್ಥೆ**ಯನ್ನು ಕೈಕೊಳ್ಳಬೇಕು. ರೋಗಿಯ ಮನಸ್ಸನ್ನು ಪರಿಶೋಧಿಸಲಿಕ್ಕೆ ಅವನೊಡನೆ ಸಹಾನುಭೂತಿಪರ ಸಂಭಾಷಣೆಯು ಮತ್ತು ಅವನ ಸ್ವಪ್ನ-ವಿಭಜನೆಯು ಮುಖ್ಯ ಸಾಧನಗಳು. ಇವುಗಳ ಮುಖಾಂತರ ಅವನ ಈಡೇರದ ಬಯಕೆಗಳನ್ನು ಕಂಡುಹಿಡಿಯಬಹುದು, ಗುಪ್ತವಾಗಿರಿಸಿದ ಅವನ ರಾಗದ್ವೇಷಾದಿಗಳನ್ನು ಗುರುತಿಸಬಹುದು. ಮನೋಜಾಡ್ಯದ ಕಾರಣಗಳನ್ನು ಕಂಡುಹಿಡಿದ ಬಳಿಕ ಮನಸ್ಸನ್ನು ಪುನಃ ವ್ಯವಸ್ಥಿತಗೊಳಿಸುವ ಉಪಾಯಗಳನ್ನು ಕೈಕೊಳ್ಳಬೇಕು. ವೈದ್ಯನು—ಶಿಕ್ಷಕನೇ ಆಗಲಿ ಅಥವಾ ಬೇರೆ ಯಾವ ವ್ಯಕ್ತಿಯೇ ಆಗಲಿ—ಸಹಾನುಭೂತಿಯುಳ್ಳವನೂ ಚತುರನೂ ಉದಾತ್ತ ಧ್ಯೇಯವುಳ್ಳವನೂ ಇದ್ದರೆ ರೋಗಿಯ ಮನಸ್ಸನ್ನು ಶುದ್ಧಗೊಳಿಸುವುದರಲ್ಲಿ ಬೇಗನೆ ಯಶಸ್ವಿಯಾಗುವನು. ತನ್ನ ತಾನರಿಯುವುದು ರೋಗನಿವಾರಣೆಯ ಮೊದಲನೆಯ ಉಪಾಯ. ಅಂದರೆ ತನ್ನ ಮನಸ್ಸಿನ ವೃತ್ತಿಗಳನ್ನು ತಾನೇ ಪರೀಕ್ಷಿಸಿ ಅವುಗಳಲ್ಲಿ ತೋರುವ ಆತ್ಮವಂಚಕತನವನ್ನು ಮತ್ತು ಅಪ್ರಾಮಾಣಿಕತನವನ್ನು ಬಿಟ್ಟುಬಿಡಬೇಕು. ಮಕ್ಕಳಲ್ಲಿ ಒಂದು ಪ್ರಧಾನ ಅನುರಾಗವನ್ನು ಬೆಳೆಯಿಸುವುದು ಎರಡನೇ ಉಪಾಯ. ಅದರಿಂದ ಶೀಲದಲ್ಲಿ ಏಕರೂಪತೆಯು ಉಂಟಾಗುತ್ತದೆ. ಜೀವನದಲ್ಲಿ ಯಾವುದಾದರೊಂದು ಗುರಿ ಅಥವಾ ಧ್ಯೇಯವನ್ನು ಇಟ್ಟುಕೊಂಡು ಅದರ ಸಾಧನೆಗಾಗಿ ವ್ಯಕ್ತಿಯ ಸರ್ವ ಚೈತನ್ಯಗಳನ್ನು ಅರ್ಪಿಸುವುದರಿಂದ ಈ ಐಕ್ಯತೆಯು ಸುಲಭವಾಗಿ ಉಂಟಾಗುವುದು. ದೇವರು, ಸಮಾಜ, ಕುಟುಂಬ, ದೇಶ ಮೊದಲಾದ ಒಂದು ವಿಷಯದ ಬಗೆಗೆ ಅನುರಾಗವು ರೂಪುಗೊಳ್ಳಬಹುದು. ಜೀವನದಲ್ಲಿ ಒಂದು ತತ್ವದೃಷ್ಟಿಯನ್ನು ಇಟ್ಟುಕೊಂಡು ವ್ಯವಹರಿಸುವುದು ಮೂರನೆಯ ಉಪಾಯ. ಮನುಷ್ಯನಲ್ಲಿ ತತ್ವದೃಷ್ಟಿಯು ಅಥವಾ ಸದಸದ್ವಿವೇಕವು ಬೆಳೆದ ಹಾಗೆ ಯಾವುದರ ಬೆಲೆಯು ಎಷ್ಟೆಂಬುದು ಗೊತ್ತಾಗುತ್ತದೆ. ಐಶ್ವರ್ಯಕ್ಕಿಂತ ಸದ್ಗುಣಗಳೇ ಶ್ರೇಷ್ಠವೆಂದೂ, ಲಾಭಕ್ಕಿಂತ ಪ್ರಾಮಾಣಿಕತನವೇ ಮಿಗಿಲೆಂದೂ, ಇಹಲೋಕದ ಸುಖಕ್ಕಿಂತ ಪರಲೋಕದ ಸಾಧನೆಯೇ ಶ್ರೇಷ್ಠವೆಂದೂ ಮುಂತಾಗಿ ತತ್ವಜ್ಞಾನಿಯು ನಿರ್ಧರಿಸಿರುವನು. ಎಲ್ಲ ಪ್ರಸಂಗ

ಗಳಲ್ಲಿಯೂ ಸಾರಾಸಾರ ವಿಚಾರಮಾಡಿ ಶ್ರೇಷ್ಠ ಮಾರ್ಗವನ್ನೇ ಅವನು ಕೈಕೊಳ್ಳುವನು. ಮಕ್ಕಳಲ್ಲಿ ಈ ರೀತಿಯ ಸುಸಂಘಟಿತ ವ್ಯಕ್ತಿತ್ವವು ನೆಲೆಗೊಳ್ಳುವಂತೆ ಶಿಕ್ಷಕರೂ ತಂದೆತಾಯಿಗಳೂ ನೆರವಾಗಬೇಕು.

ಮನೋಜಾಡ್ಯವು ಪರಿಹಾರವಾಗಿ ಶ್ರೇಷ್ಠ ವ್ಯಕ್ತಿತ್ವವು ಮಕ್ಕಳಲ್ಲಿ ಮನೋಹರವಾಗಿ ಬೆಳೆದುಬರಬೇಕಾದರೆ ಶೀಲಸಂವರ್ಧನೆಯು ಬೇಕು. ಶೀಲವಿಲ್ಲದ ಕೇವಲ ಬೌದ್ಧಿಕ ಬೆಳವಣಿಗೆಯಿಂದ ಏಕರೂಪತೆಯ ಸುಸಂಘಟಿತ ವ್ಯಕ್ತಿತ್ವವು ಸಾಧಿಸಲಾರದು. ಮನುಷ್ಯನಿಗೆ ಗುಣಗಳೇ ಭೂಷಣವು. ಶೀಲವಿಲ್ಲದ ಜ್ಞಾನ ಕಾಡಬೆಳದಿಂಗಳಂತೆ! ಶೀಲದೊಡನೆ ಜ್ಞಾನವೂ ಇದ್ದರೆ ವ್ಯಕ್ತಿತ್ವಕ್ಕೆ ಕಳೆಬರುತ್ತದೆ (सम्यक् ज्ञानं क्रिया सहितम्।) ಜಾಗ್ರತಾವಸ್ಥೆಯಲ್ಲಿಯ ಅಥವಾ ಅಜಾಗ್ರತಾವಸ್ಥೆಯಲ್ಲಿಯ ಮನಸ್ಸಿನ ಹೋರಾಟವು ನಿಂತು ಏಕರೂಪತೆಯ ಸುಸಂಬದ್ಧ ವ್ಯಕ್ತಿತ್ವವು ನೆಲೆಗೊಳ್ಳಬೇಕಾದರೆ ಪ್ರವೃತ್ತಿಗಳು ಉದಾತ್ತತೆಯನ್ನು ಹೊಂದಿ ಸುವ್ಯವಸ್ಥಿತ ಶೀಲವಾಗಿ ಪರಿಣಮಿಸಬೇಕಾಗುತ್ತದೆ. ಸುಸಂಘಟಿತ ವ್ಯಕ್ತಿತ್ವವನ್ನು ಸಂಪಾದಿಸುವ ಕಾರ್ಯವು ಬಾಲ್ಯದಾರಭ್ಯ ತಾರುಣ್ಯಾವಸ್ಥೆಯ ವರೆಗೆ ಕ್ರಮೇಣ ಸಾಗುತ್ತದೆ. ಈ ಕಾರ್ಯಕ್ಕೆ ಪ್ರೋತ್ಸಾಹನೆಯನ್ನಿತ್ತು ವ್ಯಕ್ತಿತ್ವವನ್ನು ಯೋಗ್ಯ ಮಾರ್ಗದಲ್ಲಿ ಅಭಿವೃದ್ಧಿಗೊಳಿಸುವುದು ಸರ್ವ ಶಿಕ್ಷಣ ಸಂಸ್ಥೆಗಳ ಪರಮಧ್ಯೇಯವಾಗಿದೆ.

ಈ ವ್ಯಕ್ತಿವಿಕಾಸದ ವಿಷಯವನ್ನು ಕುರಿತು ಕೊನೆಯದಾದ ಮುಂದಿನ ಪ್ರಕರಣದಲ್ಲಿ ಪ್ರಸ್ತಾಪಿಸಲಾಗುವುದು.

೧೫

# ಮನೋವಿಕಾಸ ಮತ್ತು ವ್ಯಕ್ತಿತ್ವ

ಮನುಷ್ಯನ ಎಲ್ಲ ವರ್ತನೆಗಳಿಗೆ ಪ್ರವೃತ್ತಿಗಳೇ ಮೂಲ ಕಾರಣಗಳೆಂದು ಹಿಂದೆಯೇ ಹೇಳಲಾಗಿದೆ. ಆದರೆ ಅವು ಅಸಂಸ್ಕೃತ ರೀತಿಯಲ್ಲಿ ಉಳಿಯದೆ ವ್ಯಕ್ತಿಯ ಜೀವಮಾನದಲ್ಲಿ ರೂಪಾಂತರಗೊಳ್ಳುತ್ತವೆ. ಪರಿಸ್ಥಿತಿಯೊಡನೆ ವ್ಯವಹರಿಸುವ ಮನಸ್ಸು ವಿಕಾಸಹೊಂದುತ್ತ ಹೋಗುತ್ತದೆ. ಅದು ಹೀಗೆ ವಿಕಾಸಹೊಂದುವಾಗ ಕೆಲವೊಂದು ವೃತ್ತಿಗಳನ್ನು ಸಂಪಾದಿಸುತ್ತದೆ. ಈ ಸಂಪಾದಿಸಿದ ವೃತ್ತಿಗಳೇ ಮನುಷ್ಯನ ವರ್ತನವನ್ನು ಬಲವಾಗಿ ನಿಯಂತ್ರಿಸುತ್ತವೆ; ಮತ್ತು ಅವನಿಗೆ ಒಂದು ವ್ಯಕ್ತಿತ್ವವನ್ನೂ ತಂದುಕೊಡುತ್ತವೆ. ಉಜ್ವಲ ವ್ಯಕ್ತಿಗಳನ್ನು ತಯಾರಿಸುವುದು ಶಿಕ್ಷಣದ ಆದ್ಯ ಕರ್ತವ್ಯವಾದುದರಿಂದ ವ್ಯಕ್ತಿತ್ವ ವಿಕಾಸದ ಕ್ರಮವನ್ನು ಈ ಪ್ರಕರಣದಲ್ಲಿ ವಿವೇಚಿಸುವ.

**ರೂಢಿ ಅಥವಾ ಚಟ** (Habit).— ಮನುಷ್ಯನ ಆಚಾರ-ವಿಚಾರಗಳನ್ನು ನಿಯಂತ್ರಿಸುವ ವೃತ್ತಿಗಳಿಗೆ 'ಚಟಗಳು' ಎಂದು ಹೇಳಬಹುದು. ಅವನು ತನ್ನ ಕೆಲಸಗಳನ್ನು ಪ್ರತಿನಿತ್ಯ ಸಾಮಾನ್ಯವಾಗಿ ಒಂದೇ ರೀತಿಯಿಂದ ಮಾಡುತ್ತಾನೆ. ಏಳುವುದು—ಮಲಗುವುದು, ಉಣ್ಣುವುದು—ತಿನ್ನುವುದು, ಉಡುಗೆ-ತೊಡುಗೆಗಳನ್ನು ಧರಿಸುವುದು—ಕಳೆಯುವುದು, ಉದ್ಯೋಗ ವ್ಯವಸಾಯಗಳನ್ನು ನಡೆಸುವುದು ಮೊದಲಾದ ನಮ್ಮ ಪ್ರತಿನಿತ್ಯದ ಕಾರ್ಯಗಳು ಯಾಂತ್ರಿಕ ವರ್ತನಗಳಂತೆ ತೋರುತ್ತವೆ. ಹಾಗೆ ಮಾಡುವುದು ನಮಗೆ ರೂಢಿಯಾಗಿರುತ್ತದೆ. ಮನುಷ್ಯನೆಂದರೆ ಚಟಗಳ ಒಂದು ಸಿವಡು ಎಂದೇ ಹೇಳಬಹುದು; ಮತ್ತು ಅವನ ಜೀವನವೆಂದರೆ ಅನೇಕ ಆವೃತ್ತಿಗಳನ್ನು ಹೊಂದುತ್ತಿರುವ ಒಂದೇ ದಿವಸದ ಕಾರ್ಯಕ್ರಮವೆಂದು ಹೇಳಬಹುದು. ನಮ್ಮ ಕೆಲಸಗಳಲ್ಲಿ ನೂರಕ್ಕೆ ತೊಂಬತ್ತರಷ್ಟು ಪಾಲು ರೂಢಿಗಳಾಗಿ ಪರಿಣಮಿ-

ಸುವುದರಿಂದ ಮಕ್ಕಳಲ್ಲಿ ಒಳ್ಳೆಯ ರೂಢಿಗಳನ್ನು ಹೇಗೆ ನೆಲೆಗೊಳಿಸ ಬೇಕೆಂಬುದು ಮಹತ್ವದ ಸಮಸ್ಯೆಯಾಗಿದೆ.

ಯಾವುದಾದರೊಂದು ಕ್ರಿಯೆಯನ್ನು ಬಹುಕಾಲದ ವರೆಗೆ ಮೇಲಿಂದ ಮೇಲೆ ಮಾಡುವುದರಿಂದ ಅದು ಚಟವಾಗಿ ಪರಿಣಮಿಸುತ್ತದೆ. ಚಟವು ಅಥವಾ ರೂಢಿಯು ಒಮ್ಮೆ ನೆಲೆಗೊಂಡ ಮೇಲೆ ಕಾರ್ಯವು ಅನಾಯಾಸ ವಾಗಿ ನಡೆಯುತ್ತದೆ; ಅದರಲ್ಲಿ ಪ್ರವೀಣತೆಯು ಕಂಡುಬರುತ್ತದೆ, ಮತ್ತು ಮುಂದೆ ಅದು ಅದೇ ರೀತಿಯಾಗಿ ವ್ಯಕ್ತವಾಗುತ್ತದೆ. ಈಸಲಿಕ್ಕೆ ಅಥವಾ ಬರೆಯಲಿಕ್ಕೆ ಕಲಿಯುವಾಗ ಮೊದಲು ತೋರಿದ ಅಸಂಗತ ಮತ್ತು ಅಷ್ಟಾಳ ಕ್ರಿಯೆಗಳು ಕ್ರಮೇಣ ಮಾಯವಾಗುತ್ತವೆ. ಅನಂತರ ಅವು ರೂಢವಾದ ಮೇಲೆ ಒಂದೇ ಹಾದಿಯನ್ನು ಹಿಡಿಯುತ್ತವೆ. ಪ್ರತಿಯೊಬ್ಬನ ಬರೆವಣಿಗೆ ಯಾಗಲಿ ರುಜುವಾಗಲಿ ಒಂದೇ ತೆರನಾಗಿ ಇರುತ್ತದೆ. ಇಂಥ ರೂಢಿಗಳು ಶಾರೀರಿಕ ಚಟುವಟಿಕೆಗಳಿಗೆ ಸಂಬಂಧಪಟ್ಟಿರುವುದರಿಂದ ಇವಕ್ಕೆ ಶಾರೀರಿಕ ರೂಢಿಗಳೆಂದು ಅನ್ನಬಹುದು. ಇವಲ್ಲದೆ ವಿಚಾರಸರಣಿಗೆ ಸಂಬಂಧಪಟ್ಟ ಬೌದ್ಧಿಕ ರೂಢಿಗಳೂ ನಡತೆಗೆ ಸಂಬಂಧಪಟ್ಟ ನೈತಿಕ ರೂಢಿಗಳೂ ಇರುವವು.

**ಉದ್ದೇಶದ ಮಹತ್ವ.**— ರೂಢಿಗಳು ಪುನರಾವರ್ತನೆಯಿಂದ ಉಂಟಾಗುವುವೆಂದು ಯಂತ್ರವಾದಿಗಳು ಹೇಳುವರು. "ಕಲಿಯುವ ಕ್ರಮ" ಎಂಬ ಪ್ರಕರಣದಲ್ಲಿ ವಿವರಿಸಿದಂತೆ ಸೋಪಾಧಿಕ ಪ್ರತಿಕ್ರಿಯೆಯೇ (ಪರಾ-ವರ್ತನ ಕ್ರಿಯೆಯೇ) ರೂಢಿ ಎಂದು ಅವರ ಪ್ರತಿಪಾದನೆ. ಪ್ಯಾವ್ಲೋವನ ನಾಯಿಗೆ ಗಂಟೆಯ ಸಪ್ಪಳವನ್ನು ಕೇಳಿದಾಗ, ಆಹಾರವಿರದಿದ್ದರೂ ಜೊಲ್ಲು ಸುರಿಸುವುದು ರೂಢಿಯಾಗಿತ್ತು. ಸನ್ನಿವೇಶಕ್ಕೆ ತಕ್ಕ ಪ್ರತಿಕ್ರಿಯೆಯಿಂದ ನರಗಳ ಮಂಡಲದಲ್ಲಿ ಒಂದು ದಾರಿಯು ಬೀಳುವುದು. ಅದೇ ಸನ್ನಿವೇಶವು, ಪುನಃ ಪುನಃ ಬಂದರೆ ಪ್ರತಿಕ್ರಿಯೆಯು ಪುನರಾವೃತ್ತಿಗೊಳ್ಳುತ್ತದೆ. ಈ ಪುನರಾವೃತ್ತಿಗಳಿಂದ ನರಗಳ ಮಂಡಲದಲ್ಲಿ ಬಿದ್ದ ದಾರಿಯು ತೀಡಿದಂತಾಗಿ ಪುನಃ ಆ ಕ್ರಿಯೆಯನ್ನು ಮಾಡುವುದು ಸುಲಭವಾಗುತ್ತದೆ. ಮತ್ತು ಮುಂದೆ ಅದು ಒಂದು ಚಟ ಅಥವಾ ಸ್ವಭಾವವಾಗಿ ಪರಿಣಮಿಸುತ್ತದೆ. ಈ ವಿವರಣೆ ಯಲ್ಲಿ ತಥ್ಯಾಂಶವುಂಟು. ಇದು ಅಂಗಕೌಶಲ್ಯದ ಶಾರೀರಿಕ ರೂಢಿಗಳಿಗೆ

ಹೆಚ್ಚಾಗಿ ಅನ್ವಯಿಸುತ್ತದೆ. ಆದರೆ ಕೇವಲ ಯಾಂತ್ರಿಕ ಪುನರಾವರ್ತನೆಯಿಂದ ರೂಢಿಗಳು ಉಂಟಾಗುತ್ತವೆ ಎಂದು ತಿಳಿಯುವುದು ತಪ್ಪು. ಕಲಿಯುವುದರಲ್ಲಿ ಯಾವುದಾದರೊಂದು **ಉದ್ದೇಶವಿದ್ದರೆ ಮಾತ್ರ** ರೂಢಿಯು ನೆಲೆಗೊಳ್ಳುವುದು ಮತ್ತು ಪ್ರಗತಿಯು ಕಾಣುವುದು ಎಂಬುದು ಪ್ರಯೋಗದಿಂದ ಸಿದ್ಧವಾಗಿದೆ. ಒಂದು ಪ್ರಯೋಗದಲ್ಲಿ, ಹೆಚ್ಚಿಗೆ ಸಂಬಳವನ್ನು ಕೊಡುವ ಆಸೆಯನ್ನು ಹುಟ್ಟಿಸಿದಾಗ ಮಾತ್ರ ಸುದ್ದಿಯನ್ನು ಕಳಿಸುವುದನ್ನು ಕಲಿಯುತ್ತಿದ್ದ ಟೆಲಿಗ್ರಾಫ್ ಲೇಖಕರು ತಮ್ಮ ಕಾರ್ಯದಲ್ಲಿ ಪ್ರವೀಣತೆಯನ್ನು ತೋರಿಸಿದರು. ಅರ್ಥವಾಗದ ಅಕ್ಷರಗಳ ಸಾಲನ್ನು ಬಾಯಿಪಾಠ ಮಾಡುವ ಪ್ರಯೋಗದಲ್ಲಿ ಕಲಿಯುವವನ ಉತ್ಸಾಹವು ಕಡಿಮೆಯಾದಂತೆ ಹೆಚ್ಚು ಸಲ ಪುನರಾವರ್ತನೆ ಮಾಡುವುದು ಅವಶ್ಯವೆನಿಸಿತು. ಎಲ್ಲ ಚಟಗಳ ಸಮಸ್ಯೆಯು ಇದೇ ತೆರನಾದುದು. ಉದ್ದೇಶವನ್ನಿಟ್ಟುಕೊಂಡು ಕ್ರಿಯೆಗಳನ್ನು ಪದೇ ಪದೇ ಮಾಡುವುದರಿಂದ ಮಾತ್ರ ರೂಢಿಯು, ಚಟವು ಬೀಳುತ್ತದೆ. ಮನಃಪೂರ್ವಕವಾದ ಸಾಹಸವಿಲ್ಲದಿದ್ದರೆ ಕೇವಲ ಪುನರಾವೃತ್ತಿಯಿಂದ ರೂಢಿಯು ನೆಲೆಗೊಳ್ಳುವುದು ಅಸಂಭವ. ಯಾಂತ್ರಿಕ ಪುನರಾವರ್ತನೆಯನ್ನು ಅವಲಂಬಿಸಿದರೆ ಕಲಿಯುವುದು ಕಠಿಣವಾಗುವುದು; ಪ್ರಗತಿಯು ಮೆಲ್ಲಗೆ ಸಾಗುವುದು; ಮತ್ತು ಕಲಿತದ್ದು ಬೇಗನೆ ಮರೆಯುವುದು. ಚೆನ್ನಾಗಿ ಬರೆಯಲು ಕಲಿಯಬೇಕೆಂಬ ಉದ್ದೇಶವಿದ್ದರೆ ಮಗುವು ಸುಂದರ ಅಕ್ಷರಗಳನ್ನು ಬರೆಯಬಲ್ಲನು. ಬಿಟ್ಟೀಬೇಸರದಿಂದ ಅಕ್ಷರಗಳನ್ನು ಕೇವಲ ತೀಡುವುದರಿಂದ ಪ್ರಯೋಜನವೇನು ? ಆಸಕ್ತಿ ಅಥವಾ ಸಾಹಸವಿಲ್ಲದೆ ಯಾವ ಕಾರ್ಯವನ್ನು ಎಷ್ಟು ಬಾರಿ ಮಾಡಿದರೇನು ? ಅದು ರೂಢಿಯಾಗದು.

ಚಟಗಳು ಒಳ್ಳೆಯವೂ ಆಗಿರಬಹುದು, ಕೆಟ್ಟವೂ ಆಗಿರಬಹುದು. ತಂಬಾಕು ಸೇವನೆ, ಸುರಾಪಾನ ಮೊದಲಾದುವು ದುಶ್ಚಟಗಳು. ನಸುಕಿನಲ್ಲಿ ಏಳುವುದು, ವ್ಯಾಯಾಮ ಮಾಡುವುದು, ಸ್ವಚ್ಛವಾದ ಬಟ್ಟೆಗಳನ್ನು ಧರಿಸುವುದು, ಹೊತ್ತಿಗೆ ಸರಿಯಾಗಿ ಕೆಲಸಮಾಡುವುದು ಮೊದಲಾದುವು ಒಳ್ಳೆಯ ಚಟಗಳು. ಒಳ್ಳೆಯ ರೂಢಿಗಳು ನಮ್ಮಲ್ಲಿ ನೆಲೆಗೊಳ್ಳಬೇಕಾದರೆ ಮತ್ತು ಕೆಟ್ಟ ಚಟಗಳು ನಮ್ಮನ್ನು ಬಿಟ್ಟು ತೊಲಗಬೇಕಾದರೆ ನಾವು ಕೆಲವು ನಿಯಮಗಳನ್ನು ಅನುಸರಿಸಬೇಕಾಗುತ್ತದೆ. ಅಭ್ಯಾಸದಿಂದ ರೂಢಿಯು

ಬಲಗೊಳ್ಳುವುದೆಂಬುದು ಮೊದಲನೆಯ ನಿಯಮ. ಅಭ್ಯಾಸವು ತಪ್ಪಿದರೆ ಕೆಲಸದಲ್ಲಿ ನೈಪುಣ್ಯವು ಕಡಿಮೆಯಾಗುತ್ತದೆ. ಕಾರ್ಯದಲ್ಲ ಉದ್ದೇಶವಿದ್ದರೆ ರೂಢಿಯು ದೃಢಗೊಳ್ಳಲಿಕ್ಕೆ ಸಹಾಯವಾಗುವುದು. ಸಂಪಾದಿಸಬೇಕಾದ ರೂಢಿಯ ಮಹತ್ವವನ್ನರಿತು ಒಂದು ನಿಶ್ಚಿತ ಗುರಿ ಅಥವಾ ಧ್ಯೇಯವನ್ನಿಟ್ಟು ಕೊಳ್ಳಬೇಕು. ಉದ್ದೇಶವನ್ನಿಟ್ಟುಕೊಳ್ಳುವುದು ಎರಡನೆಯ ನಿಯಮ. ಹೊಸ ರೂಢಿಯು ಚೆನ್ನಾಗಿ ಬೇರೂರುವ ವರೆಗೆ ಅಪವಾದಕ್ಕೆ ಆಸ್ಪದವನ್ನು ಕೊಡಬಾರದು. ಇದು ಮೂರನೆಯ ನಿಯಮ ಮಾಡುವುದನ್ನು ಒಮ್ಮೆ ಬಿಟ್ಟರೆ ಏನಾಯಿತೆಂದು ಉದಾಸೀನರಾದರೆ ಬಹುದಿನದ ಅಭ್ಯಾಸವು ವ್ಯರ್ಥ ವಾಗುತ್ತದೆ. ದೃಢಸಂಕಲ್ಪದಿಂದ ಕಾರ್ಯವನ್ನು ಪ್ರಾರಂಭಿಸುವುದು ನಾಲ್ಕನೆಯ ನಿಯಮ. ನಮ್ಮ ಉದ್ದೇಶವನ್ನು ಸಫಲಗೊಳಿಸುವ ಯಾವ ಪ್ರಸಂಗವನ್ನೂ ನಾವು ಬಿಡಬಾರದು.

ರೂಢಿಗಳು ನಮ್ಮನ್ನು ಬಲವಾಗಿ ಆಳುವವು. ಒಮ್ಮೆ ಅಂಟಿಕೊಂಡ ಚಟವನ್ನು ಬಿಡುವುದು ಬಹಳ ಕಠಿಣವಾಗುತ್ತದೆ. ಅಂತೆಯೆ 'ಚಟವು ಎರಡನೆಯ ಸ್ವಭಾವ'ವೆಂದು ಪಾಶ್ಚಾತ್ಯರಲ್ಲಿ ನಾಣ್ಣುಡಿಯುಂಟು. ಇದೇ ರೀತಿಯ ಅಭಿಪ್ರಾಯವು ನಮ್ಮಲ್ಲಿಯೂ ಉಂಟು. ಸಾಮಾಜಿಕ ಮತ್ತು ಧಾರ್ಮಿಕ ಸಂಪ್ರದಾಯಗಳು ಸಹ ಒಂದು ಬಗೆಯ ಚಟಗಳೇ (ರೂಢಿಗಳೇ). ಶಾಸ್ತ್ರಸಮ್ಮತವಿರದಿದ್ದರೂ ಸಮಾಜದ ರೂಢಿಗಳ ವಿರುದ್ಧ ವರ್ತಿಸುವುದು ಕಠಿಣವಾಗುತ್ತದೆ. ಶಾಸ್ತ್ರಕ್ಕಿಂತ ರೂಢಿಯೇ ಬಲವಾದುದು (**शास्त्राद्रूढिर्बलीयसी**). ಕೆಟ್ಟ ಚಟಗಳನ್ನು ಬಿಡುವುದು ಬಹು ಕಷ್ಟದ ಕೆಲಸ. ಚಟಗಳನ್ನು ಬಿಡುವುದಾಗಲಿ ಕಲಿಯುವುದಾಗಲಿ ಅವೇ ತತ್ವಗಳನ್ನು ಅವಲಂಬಿಸಿವೆ. ದುಶ್ಚಟದಿಂದ ದೂರಾಗಬೇಕೆಂಬ ದೃಢಸಂಕಲ್ಪವನ್ನು ಇಟ್ಟು ಕೊಳ್ಳಬೇಕು. ಬೇಡಾದ ಚಟಗಳಿಗೆ ಅನುಕೂಲವಾದ ಸಂದರ್ಭಗಳಿಂದ ದೂರಾಗಬೇಕು; ಪ್ರತಿಕೂಲವಾದ ಪರಿಸ್ಥಿತಿಯನ್ನು ತಂದುಕೊಳ್ಳಬೇಕು. ಕೆಟ್ಟ ಚಟಕ್ಕೆ ಪ್ರತಿಯಾಗಿ ಒಳ್ಳೆಯದಾದ ಒಂದು ಹೊಸ ಚಟವನ್ನು ಸಾಧಿಸ ಬೇಕು. ಅಥವಾ ಬೇಡಾದ ಚಟವು ನಮ್ಮನ್ನು ಎಳೆಯುವ ಸಮಯದಲ್ಲಿ ಮನಸ್ಸನ್ನು ಬಿಗಿಹಿಡಿದು ಅದನ್ನು ಮತ್ತೊಂದು ಕಾರ್ಯದಲ್ಲಿ ತೊಡಗಿಸ ಬೇಕು. ಮತ್ತು ಆ ಹಳೆಯ ಚಟವನ್ನು ಹೊಡೆದೋಡಿಸಿ ಹೊಸ ಚಟವ

ನಮ್ಮಲ್ಲಿ ನೆಲೆಗೊಳ್ಳುವ ವರೆಗೆ ಬಹಳ ಎಚ್ಚರಿಕೆಯಿಂದ ನಡೆಯಬೇಕು. ಮರೆವು ತಪ್ಪಿ ಹಳೆಯ ಚಟಕ್ಕೆ ಬಲಿಬಿದ್ದಾಗ ಪ್ರಾಯಶ್ಚಿತ್ತವನ್ನು ತಕ್ಕೊಳ್ಳುವುದೂ ಒಳಿತು.

**ಅನುರಾಗಗಳು ಅಥವಾ ರಸಗಳು** (Sentiments).—ಆಧುನಿಕ ಮನಶ್ಶಾಸ್ತ್ರಜ್ಞರು ರೂಢಿಯ ವಿಷಯವನ್ನು ಬೇರೆ ರೀತಿಯಿಂದ ( ಅನುರಾಗಗಳ ದೃಷ್ಟಿಯಿಂದ ) ವಿವೇಚಿಸುತ್ತಾರೆ. ಯಾವುದಾದರೊಂದು ಪ್ರವೃತ್ತಿಯ ಸೇವೆಗಾಗಿಯೆ ಚಟಗಳು ಜನ್ಮತಾಳುವುವೆಂದು ಮ್ಯಾಕ್‌ಡೂಗಲ್ಲನು ಪ್ರತಿಪಾದಿಸುತ್ತಾನೆ. ಚಟಗಳು ಉದ್ದೇಶಸಿದ್ಧಿಯ ಸಾಧನಗಳು. ಒಂದು ರೀತಿಯಲ್ಲಿ ವ್ಯಕ್ತವಾದ ಪ್ರವೃತ್ತಿಯು ಪುನಃ ಅದೇ ರೀತಿಯಲ್ಲಿ ವ್ಯಕ್ತವಾಗುತ್ತದೆ. ಹಾಗೆಯೆ ಮೊದಲಿನಂತೆ ಮುಂದಕ್ಕೂ ಮಾಡುತ್ತ ಹೋಗುವುದರಿಂದ ಅದು ರೂಢಿಯಾಗುತ್ತದೆ. ಸರ್ಕಸ್ಸಿನಲ್ಲಿ ನಾಯಿಯು ತನ್ನ ಹಿಂಗಾಲ ಮೇಲೆ ನಡೆಯುವುದನ್ನೂ ಕರಡಿಯು ಬೈಸಿಕಲ್ ಹೊಡೆಯುವುದನ್ನೂ ತೋರಿಸುತ್ತಾರೆ. ಸರ್ಕಸ್ಸಿನ ಪ್ರಾಣಿಗಳಿಗೆ ಆಶ್ಚರ್ಯಕರವಾದ ಕ್ರಿಯೆಗಳನ್ನು ಕಲಿಸುವಾಗ ಆಹಾರ ಮತ್ತು ಭಯಪ್ರವೃತ್ತಿಗಳನ್ನು ಉಪಯೋಗಿಸುತ್ತಾರೆ. ಇಚ್ಛಿಸಿದ ಕಾರ್ಯವನ್ನು ಮಾಡಿದರೆ ಅವುಗಳಿಗೆ ಆಹಾರವನ್ನು ಕೊಡುವರು, ಇಲ್ಲವಾದರೆ ಅವುಗಳನ್ನು ದಂಡಿಸುವರು. ಆದುದರಿಂದ ರೂಢಿಗಳು ಉಂಟಾಗಲಿಕ್ಕೆ ಮೂಲ ಕಾರಣಗಳೆಂದರೆ ಪ್ರವೃತ್ತಿಗಳೆ.

ಮನುಷ್ಯನ ವರ್ತನವನ್ನು ಪ್ರಚೋದನಗೊಳಿಸುವ ಮೂಲಕಾರಣಗಳು ಶುದ್ಧ ಪ್ರವೃತ್ತಿಗಳಷ್ಟೇ ಅಲ್ಲ. ಅವುಗಳ ರೂಪಾಂತರಗಳಾದ ಭಾವಗ್ರಂಥಿ (Engram Ccmplex) ಗಳೂ ಅನುರಾಗ (Sentiment) ಗಳೂ ಮನುಷ್ಯನ ವರ್ತನವನ್ನು ನಿಯಂತ್ರಿಸುತ್ತವೆ. ಪ್ರವೃತ್ತಿಗಳ ರೂಪಾಂತದರಲ್ಲಿ ಮನೋವಿಕಾಸವು ಕಂಡುಬರುತ್ತದೆ. ಪ್ರವೃತ್ತಿಗಳಿಗೆ ಸಂಬಂಧಿಸಿದ ಅನುಭವ ಪರಿಣಾಮಗಳು ಒಟ್ಟುಗೂಡಿ ಭಾವಗ್ರಂಥಿಗಳಾಗುತ್ತವೆಂಬುದನ್ನು ಮೂರನೆಯ ಪ್ರಕರಣದಲ್ಲಿ ಹೇಳಲಾಗಿದೆ. ಕಲ್ಲಿನ ಪೆಟ್ಟು ತಿಂದ ನಾಯಿಯ ಅನುಭವಶೇಷಗಳು ಸಂಸಕ್ತಿ ಹೊಂದಿರುವುದರಿಂದಲೇ ನೆಲಕ್ಕೆ ಬಾಗಿದವನನ್ನು ಕಂಡು ಅದು ಓಡಿಹೋಗುತ್ತದೆ. ಅದರ ಭಾವಗ್ರಂಥಿಯು ಜಾಗ್ರತಗೊಂಡಿರುವುದರಿಂದ

ಅದು ಹೀಗೆ ವರ್ತಿಸುತ್ತದೆ. ಮೇಲೆ ವಿವರಿಸಿದ ರೂಢಿಯ ಕ್ರಿಯೆಗಳಿಗೆಲ್ಲ ಈ ತರದ ಭಾವಗ್ರಂಥಿಗಳೇ ಕಾರಣಗಳು. ಬಾಯಪಾಠ ಮಾಡಿದ ಒಂದು ಪದ್ಯದ ಎಲ್ಲ ಶಬ್ದಗಳು ಕೂಡಿ ಒಂದು ಭಾವಗ್ರಂಥಿಯಾಗುತ್ತದೆ. ಅದರ ಲ್ಲಿಯ ಒಂದು ಶಬ್ದವನ್ನು ಅನ್ನುವುದರಿಂದ ಅದರ ಮುಂದಿನ ಶಬ್ದಗಳು ತಾವಾಗಿಯೆ ಸ್ಮೃತಿಪಥಕ್ಕೆ ಬರುತ್ತವೆ. ಮೇಲೆ ಉದಾಹರಿಸಿದ ಪ್ಯಾವ್ಲೊ-ಲೋವನ ನಾಯಿಯಲ್ಲಿ ಭಾವಗ್ರಂಥಿಯು ಉಂಟಾದುದರಿಂದ ಅದರ ಆಹಾರ ಸನ್ನಿವೇಶಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಒಂದು ಸಂಗತಿಯು (ಗಂಟೆಯ ಸಪ್ಪಳವು) ಸಂಭವಿಸಿದರೆ ಉಳಿದ ಸಂಗತಿಗಳು (ಜೊಲ್ಲು ಸುರಿಸು ವುದು) ಸಹಜವಾಗಿಯೆ ಉದ್ಭವಿಸುತ್ತವೆ.

ಮನುಷ್ಯನ ಬಹುಭಾಗದ ವರ್ತನಗಳಿಗೆ ಮುಖ್ಯ ಕಾರಣಗಳು ಅನುರಾಗ ಗಳು ಅಥವಾ ರಸಗಳು. ಪ್ರವೃತ್ತಿಗಳು ವಿಕಾಸಹೊಂದಿ ಭಾವಗ್ರಂಥಿಗಳಾಗು ವಂತೆ ಭಾವಗ್ರಂಥಿಗಳು ವಿಕಾಸಹೊಂದಿ ಅನುರಾಗಗಳಾಗುತ್ತವೆ. ಒಂದು ವಿಷಯಕ್ಕೆ ಸಂಬಂಧಿಸಿದ ಭಾವಗ್ರಂಥಿಗಳು ಕ್ರಮಗೊಂಡು ಮನಸ್ಸಿನ ಒಂದು ಸ್ಥಿರಭಾಗವಾದರೆ ಅದಕ್ಕೆ ನಾವು ಅನುರಾಗವೆಂದು ಕರೆಯುತ್ತೇವೆ. ಅನುರಾಗ ಗಳಿಗೆ ಸ್ಥಿರವೃತ್ತಿಗಳೆಂದೂ ಕರೆಯುವುದುಂಟು. **ಅನುರಾಗವೆಂದರೆ ಒಂದು ವಸ್ತು, ವಿಷಯ ಅಥವಾ ವ್ಯಕ್ತಿಯ ಬಗೆಗೆ ನಮ್ಮಲ್ಲಿ ದೃಢಗೊಂಡ ಮನೋವೃತ್ತಿ.** ಬೀಡಿ ಸೇದುವುದು ಒಂದು ಅನುರಾಗ. ಬೀಡಿ ಸೇದಿ ಹೊಗೆ ಬಿಡುವಾಗ ಆನಂದಿಸುವುದು, ಬೀಡಿ, ಬೆಂಕೀ ಕಡ್ಡಿಗಳು ಸಿಗದೆ ಇದ್ದಾಗ ದುಃಖಿಸುವುದು, ಸಿಕ್ಕರೆ ಹಿಗ್ಗುವುದು ಮೊದಲಾದ ಅನುಭವ ಗಳು ಮೇಲಿಂದ ಮೇಲೆ ಸಂಭವಿಸಿ ಬೀಡಿ ಸೇದುವ ಒಂದು ಅನುರಾಗವು ಉಂಟಾಗುವುದು. ಅದರಂತೆ ಸ್ತ್ರೀಯರಲ್ಲಿ ಕಂಡುಬರುವ ವಸ್ತ್ರಾಲಂಕಾರದ ಪ್ರೇಮವೂ ಒಂದು ಅನುರಾಗವೇ. ಸ್ವದೇಶಪ್ರೇಮವೂ ಅನುರಾಗವೇ ಆಗಿದೆ. ಪ್ರೇಮವು ಅನುರಾಗವಿದ್ದಂತೆ ದ್ವೇಷವೂ ಒಂದು ಅನುರಾಗವು ಒಬ್ಬ ಮನುಷ್ಯನಿಗೆ ಬೀಡಿ ಸೇದುವುದು ಸೇರುವುದಿಲ್ಲ. ಅದನ್ನು ಅವನು ದ್ವೇಷಿಸು ತ್ತಾನೆ. ಹೀಗೆ ಅವನಿಗೆ ಬೇಡಾದ ವಸ್ತುಗಳು ಗೋಚರಿಸಿದಾಗ ಅವನ್ನು ಅವನು ತಿರಸ್ಕರಿಸುತ್ತಾನೆ. ಹೀಗೆ ತಿರಸ್ಕರಿಸುವುದೇ ಅವನ ಮನೋವೃತ್ತಿ ಯಾಗಿ ಕೊನೆಗೆ ಅದು ಅನುರಾಗವಾಗಿ ಪರಿಣಮಿಸುತ್ತದೆ. ಒಬ್ಬನು ತನ್ನ

ಒರಟು ನಡತೆಯಿಂದ ಪದೇಪದೇ ನಮ್ಮಲ್ಲಿ ಜುಗುಪ್ಸೆಯನ್ನು ಉಂಟು ಮಾಡುತ್ತಿದ್ದರೆ ಅವನನ್ನು ಕಂಡಾಗೆಲ್ಲ ನಾವು ಜುಗುಪ್ಸೆಪಡುತ್ತೇವೆ. ಅವನ ವಿಚಾರವು ಬಂದಾಗಲೂ ನಮಗೆ ಜುಗುಪ್ಸೆಯಾಗುತ್ತದೆ. ಒಬ್ಬನನ್ನು ಪ್ರೀತಿಸ ತೊಡಗಿದರೆ ಅವನಲ್ಲಿ ನಮ್ಮ ಪ್ರೇಮವು ಹೆಚ್ಚಾಗುತ್ತ ಹೋಗುತ್ತದೆ. ಪ್ರೇಮ, ದ್ವೇಷ ಮೊದಲಾದ ಅನುರಾಗಗಳು ಮನುಷ್ಯನಲ್ಲಿ ಆಜೀವ ಉಳಿಯಬಲ್ಲವು.

ಒಳ್ಳೆಯದನ್ನು ಪ್ರೀತಿಸಲಿಕ್ಕೂ ಕೆಟ್ಟದುದನ್ನು ದ್ವೇಷಿಸಲಿಕ್ಕೂ ಶಿಕ್ಷಣವು ಮಕ್ಕಳಿಗೆ ಕಲಿಸಬೇಕೆಂಬ ಮಾತನ್ನು ಎಲ್ಲರೂ ಸಹಜವಾಗಿ ಒಪ್ಪುತ್ತಾರೆ. ಬಂಧುಭಾವ ಸಹಕಾರ ಮೊದಲಾದ ಅನುರಾಗಗಳನ್ನು ಹುಟ್ಟಿಸುವುದು ಸಾಲೆಯ ಅಧ್ಯಾಪನದ ಒಂದು ಮುಖ್ಯ ಕಾರ್ಯವಾಗಿದೆ ಯಾವ ವಿಷಯವನ್ನೇ ಕಲಿಸಲಿ ಮೊದಲು ಅದರಲ್ಲಿ ವಿದ್ಯಾರ್ಥಿಯ ಪ್ರೇಮ ವುಂಟಾಗುವಂತೆ ಮಾಡುವುದು ಶಿಕ್ಷಕನ ಕರ್ತವ್ಯವಾಗಿದೆ.

**ಯಾವುದಾದರೊಂದು ವಸ್ತುವಿನ ಬಗೆಗೆ ಒಂದು ಇಲ್ಲವೆ ಅನೇಕ ಪ್ರವೃತ್ತಿಗಳು ಸಂಯೋಜಿತವಾಗುವುದರಿಂದ** ಆ ವಸ್ತುವಿನ ಬಗ್ಗೆ ಅನು-ರಾಗವುಂಟಾಗುತ್ತದೆ. ಆ ಪ್ರವೃತ್ತಿಗಳು ವ್ಯಕ್ತವಾದಾಗ ನಾವು ಆ ವಸ್ತುವಿಗೆ ಸಂಬಂಧಿಸಿದ ಒಂದು ವಿಶಿಷ್ಟ ಅನುಭವವನ್ನು ಹೊಂದುತ್ತೇವೆ. ಅನುರಾಗವು ಮನಸ್ಸಿನ ಒಂದು ಸ್ಥಿರವಾದ ಮತ್ತು ಕಾರ್ಯನಿರ್ವಾಹಕ ಘಟಕವಾಗಿರುತ್ತದೆ. ಅನುರಾಗವು ಅಭ್ಯಾಸದಿಂದ ಬಲವಡುತ್ತದೆ; ಅಭ್ಯಾಸ ತಪ್ಪಿದರೆ ಅದು ಬಲಗುಂದುತ್ತದೆ. ಅನುರಾಗಗಳು ಬೆಳೆದ ಹಾಗೆ ಜೀವನದ ವ್ಯವಹಾರಗಳಲ್ಲಿ ಒಂದು ಬಗೆಯ ಸ್ಥಿರತೆಯೂ ಕ್ರಮವೂ ಪ್ರಾಪ್ತವಾಗುತ್ತವೆ. ನಡತೆಯಲ್ಲಿ ನಿಶ್ಚಲತೆಯುಂಟಾಗುತ್ತದೆ. ಪ್ರತಿಯೊಬ್ಬರ ಅನುರಾಗಗಳ ಆಧಾರದಿಂದ ಅವರವರ ಭವಿತವ್ಯತೆಯನ್ನು ನಾವು ಕಂಡುಹಿಡಿಯಬಹುದು. ಅನುರಾಗಗಳಲ್ಲಿ ಎಲ್ಲಕ್ಕೂ ಪ್ರಬಲವಾದ ಒಂದು ಪ್ರಧಾನ ಅನುರಾಗವು ( Master Sentiment ) ಇರುತ್ತದೆ. ಮನುಷ್ಯನ ಬಾಳುವೆಯಲ್ಲಿ ಅನುರಾಗಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ನಮ್ಮ ಸರ್ವ ಉದ್ದೇಶಗಳಿಗೂ ದೀರ್ಘಸಾಹಸಗಳಿಗೂ ಅನುರಾಗಗಳೇ ಮೂಲ **ಸೂತ್ರಗಳು. ಪ್ರಧಾನ** ಅನುರಾಗವು ಮನುಷ್ಯನ ಸಂಪೂರ್ಣ ಬಾಳುವೆಯ **ಚಟುವಟಿಕೆ**

ಗಳನ್ನು ನಿರ್ದೇಶಿಸುತ್ತವೆ. ಅದು ಜೀವನದ ಧ್ಯೇಯವನ್ನು ನಿರ್ಧರಿಸುತ್ತ ದೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಮನುಷ್ಯನ ಜೀವನದಲ್ಲಿ ಅನುರಾಗಗಳು ಎಷ್ಟು ಪ್ರಬಲವಾಗಿರುತ್ತವೆಂಬುದನ್ನು ಕೆಳಗಿನ ಉದಾಹರಣೆಗಳಿಂದ ಕಾಣ ಬಹುದು. ಉಜ್ವಲ ದೇಶಾಭಿಮಾನಿಯು ದೇಶದ ಕಲ್ಯಾಣಕ್ಕಾಗಿ ತನ್ನ ಸರ್ವಸ್ವ ವನ್ನೇ ಧಾರೆಯೆರೆಯುತ್ತಾನೆ. ಯುದ್ಧಕಾಲದಲ್ಲಾಗಲಿ ಶಾಂತಿಕಾಲದಲ್ಲಾಗಲಿ ಅವನು ನಿರಂತರವಾಗಿ ದೇಶಹಿತದ ಚಟುವಟಿಕೆಗಳಲ್ಲಿ ತೊಡಗಿರುತ್ತಾನೆ. ರಣರಂಗದಲ್ಲಿ, ಶಾಯಿದೆಮಂದಿರದಲ್ಲಿ, ಲೇಖನದಲ್ಲಿ, ಭಾಷಣದಲ್ಲಿ, ಪ್ರತಿಯೊಂದು ಕಾರ್ಯದಲ್ಲಿ ತನ್ನ ದೇಶಾಭಿಮಾನವನ್ನು ಉಕ್ಕಿ ಹರಿಸುತ್ತಾನೆ. ತನ್ನ ದೇಶವನ್ನು ರಕ್ಷಿಸುವುದರಲ್ಲಿಯೂ ಅದರ ಉನ್ನತಿಯನ್ನು ಸಾಧಿಸುವುದರ ಲ್ಲಿಯೂ ತನ್ನ ಆಯುಷ್ಯವನ್ನೇ ಸವೆಸುತ್ತಾನೆ. ದೇಶಸೇವೆಯಲ್ಲಿ ತನ್ನ ಸರ್ವ ಚೈತನ್ಯಗಳನ್ನು ನಿರರ್ಗಳವಾಗಿ ಸೂರೆಗೈಯುತ್ತಾನೆ. ರಾಷ್ಟ್ರದ ಸೇವೆಯಲ್ಲಿ ಮಡಿಯುವ ಪ್ರಸಂಗಬಂದರೂ ಹೆದರದೆ ರಾಷ್ಟ್ರಧ್ವಜವನ್ನು ಪ್ರೇಮದಿಂದ ಮುದ್ದಾಡಿ, ತಾಯ್ನಾಡದೇವಿಯ ಅಡಿಯಲ್ಲಿ ತನ್ನ ಜೀವನಪುಷ್ಪವನ್ನು ಅತ್ಯಂತ ಭಕ್ತಿಯಿಂದ ಸಲ್ಲಿಸುತ್ತಾನೆ. ಮನುಷ್ಯನ ಇಂತಹ ಅನುಭವಗಳಿಗೂ ಸಾಹಸಗಳಿಗೂ ಕಾರಣವಾದುದು 'ಪಾಲನಪ್ರವೃತ್ತಿ'ಯೆಂದಾಗಲಿ 'ಸೋಪಾಧಿಕ ಪ್ರತಿಕ್ರಿಯೆ'ಯೆಂದಾಗಲಿ ಹೇಳುವುದು ಸಮಂಜಸವಾಗ ಲಾರದು. ಆದರೆ ಇವುಗಳಿಗೆ ವಿಶಿಷ್ಟ ಅನುರಾಗಗಳೇ ಕಾರಣವಾಗಿರು ತ್ತವೆ ದೇಶಾನುರಾಗದಂತೆ ಮಾತೃ–ಅನುರಾಗದ ಉದಾಹರಣೆಯನ್ನೂ ನಾವು ತೆಗೆದುಕೊಳ್ಳಬಹುದು. ತಾಯಿಯು ಹೊಟ್ಟೆಯ ಕರುಳಾದ ತನ್ನ ಮಗನನ್ನು ಜೋಪಾನಮಾಡಲು, ಅಭಿವೃದ್ಧಿಗೆ ತರಲು ಎಷ್ಟು ಕಷ್ಟದ ಪರಂಪರೆಗಳು ಬೆಟ್ಟದಂತೆ ಬಂದರೂ ಅವನ್ನು ಸಹಿಸುತ್ತಾಳೆ; ಮಗನ ಕಲ್ಯಾಣವೇ ತನ್ನ ಕಲ್ಯಾಣವೆಂದು ಬಗೆಯುತ್ತಾಳೆ. ಮ್ಯಾಕ್‌ಡೂಗಲ್ಲನು ತನ್ನ ಸುಪ್ರಸಿದ್ಧವಾದ "ಸಾಮಾಜಿಕ ಮನಶ್ಶಾಸ್ತ್ರ" (*Social Psychology*) ಎಂಬ ಗ್ರಂಥದಲ್ಲಿ ಅನುರಾಗಗಳ ವಿಷಯವನ್ನು ಸವಿಸ್ತಾರವಾಗಿ ಪ್ರತಿಪಾದಿಸಿದ್ದಾನೆ. ಅದರಲ್ಲಿ ಅವನು ಹೇಳುವುದೇನಂದರೆ— **ಪ್ರವೃತ್ತಿ ಗಳಿಂದ ನೇರವಾಗಿ ಉದ್ಭವಿಸುವ ಕ್ರಿಯೆಗಳು ದೊಡ್ಡವನಾದವನಲ್ಲಿ ಬಹಳ ಕಡಿಮೆ. ಪ್ರೌಢನಾದವನು ಒಮ್ಮೊಮ್ಮೆ ಕೂಡಲೇ ಭಯಚಕಿತ**

**ನಾಗಬಹುದು ಅಥವಾ ಕೋಪಾವಿಷ್ಟನಾಗಬಹುದು. ಆದರೆ ಅವನ ಅಸಂಖ್ಯಾತ ಚಟುವಟಿಕೆಗಳಿಗೆ ಅನುರಾಗಗಳೇ ಉಗಮಸ್ಥಾನಗಳು ಆಗಿರುತ್ತವೆ.**

ಯಾವುದಾದರೊಂದು ವಸ್ತು ಅಥವಾ ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಪ್ರವೃತ್ತಿಗಳು ಅದರ ಸುತ್ತಲೂ ಕ್ರಮದಿಂದ ವ್ಯವಸ್ಥಿತವಾಗಿ ಬೆಳೆದು ಅನುರಾಗಗಳಾಗಿ ಪರಿಣಮಿಸುತ್ತವೆ. ಕೆಲವು ವಸ್ತುಗಳು ನಮ್ಮ ಪ್ರೇಮಕ್ಕೆ ಪಾತ್ರವಾಗಿದ್ದರೆ ಕೆಲವು ವಸ್ತುಗಳು ನಮ್ಮ ದ್ವೇಷಕ್ಕೆ ಪಾತ್ರವಾಗಿರುತ್ತವೆ. ಹೀಗೆ ನಮ್ಮಲ್ಲಿ ಉಂಟಾದ ಅನುರಾಗಗಳನ್ನು ಬೇರೆ ಬೇರೆ ವರ್ಗಗಳಿಗೆ ಸೇರಿಸಬಹುದು. ಮ್ಯಾಕ್‌ಡೂಗಲ್‌ನು ಅನುರಾಗಗಳಲ್ಲಿ ಒಂಬತ್ತು ಗುಂಪುಗಳನ್ನು ಮಾಡುತ್ತಾನೆ:—(೧) ಪ್ರೇಮ, (೨) ದ್ವೇಷ, (೩) ಗೌರವ (ಭಕ್ತಿ), (೪) ತಿರಸ್ಕಾರ, (೫) ಸ್ನೇಹ, (೬) ಜಡವಸ್ತುಗಳಲ್ಲಿ ಅನುರಾಗ (ಪುಸ್ತಕ, ಕೋಟು, ವೀಣೆ, ಕೊಳಲು, ಚಿತ್ರ, ಕುರ್ಚಿ, ಮನೆ, ತೋಟ ಇತ್ಯಾದಿ), (೭) ಸಮುದಾಯ-ವಸ್ತುಗಳಲ್ಲಿ ಅನುರಾಗ ( ಮಠ, ಶಾಲೆ, ಮೇಳ, ಸಂಗಡ, ದೇಶ, ಜಾತಿ, ಪಂಥ, ವ್ಯವಸಾಯ ಇತ್ಯಾದಿ ), (೮) ಅಮೂರ್ತ ವಸ್ತುಗಳಲ್ಲಿ ಅನುರಾಗ ( ಪ್ರಾಮಾಣಿಕತನ, ಧೈರ್ಯ, ಔದಾರ್ಯ, ನ್ಯಾಯಪರತೆ, ನಿರ್ದಯೆ, ಕೀಳುತನ, ಚಂಚಲತೆ ಇತ್ಯಾದಿ) ಮತ್ತು (೯) ಆತ್ಮಗೌರವ.

ಅಮೂರ್ತ ವಸ್ತುಗಳಲ್ಲಿ ಉಂಟಾದ ನೈತಿಕ ಅನುರಾಗಗಳು ಮತ್ತು ಆತ್ಮಗೌರವವು ಮಕ್ಕಳ ಶೀಲಸಂವರ್ಧನೆಗೆ ಸಂಬಂಧಿಸಿದ ವಿಷಯಗಳಾದುದರಿಂದ ಅವುಗಳನ್ನು ಕುರಿತು ಇಲ್ಲಿ ಸ್ವಲ್ಪ ವಿವೇಚಿಸುವ.

ನೈತಿಕ ಅನುರಾಗಗಳು ಸಹವಾಸದ ಫಲಗಳು. ' ಜತೆಯಂತೆ ಮತಿ ' ಎಂಬ ನಾಣ್ಣುಡಿಯುಂಟು. ಮಗುವು ಯಾರ ಸಹವಾಸದಲ್ಲಿ ಬೆಳೆದು ದೊಡ್ಡವನಾಗುತ್ತಾನೆಯೊ ಅವರ ಗುಣಗಳನ್ನು ತಾನೂ ಕಲಿಯುತ್ತಾನೆ. ಶಾಲೆ, ಗುಂಪು, ಮನೆ ಮತ್ತು ಮಠಗಳ ವರ್ಚಸ್ಸು ಮಕ್ಕಳ ಮೇಲೆ ಬೀಳುತ್ತದೆ. ತನ್ನ ಪೂಜ್ಯ ಜನರು ಶ್ಲಾಘಿಸುವ ಗುಣಗಳನ್ನು ತಾನೂ ಶ್ಲಾಘಿಸುತ್ತಾನೆ; ಅವರು ತಿರಸ್ಕರಿಸುವ ಗುಣಗಳನ್ನು ತಾನೂ ತಿರಸ್ಕರಿ

ಸುತ್ತಾನೆ. ಸಹವಾಸಿಗಳು ಸುಳ್ಳು, ಮೋಸಗಾರಿಕೆ, ಕಳ್ಳತನ ಮೊದಲಾದವುಗಳನ್ನು ತಿರಸ್ಕರಿಸಿದರೆ ಮಗುವೂ ಅವುಗಳನ್ನು ತಿರಸ್ಕರಿಸುತ್ತಾನೆ. ಅವರು ಧೈರ್ಯ, ಸಾಹಸ, ಸತ್ಯ, ನ್ಯಾಯ ಮೊದಲಾದ ಗುಣಗಳನ್ನು ಹೊಗಳಿದರೆ ತಾನೂ ಹೊಗಳುತ್ತಾನೆ. ಮಕ್ಕಳಲ್ಲಿ ಸಾತ್ವಿಕ ಅನುರಾಗಗಳು—ಸತ್ಯ, ಸಹಾನುಭೂತಿ, ದಯೆ, ಧೈರ್ಯ, ಅಹಿಂಸೆ, ಪ್ರಾಮಾಣಿಕತನ ಮೊದಲಾದವು—ಮೊಳೆತು ಫಲಬಿಡುವಂತೆ ಅವುಗಳನ್ನು ಪ್ರೇರಿಸಬೇಕು, ಪೋಷಿಸಬೇಕು ಮಕ್ಕಳು ಮೊದಲು ತಮ್ಮ ಸಂಪರ್ಕದಲ್ಲಿ ಬರುವ ಸದ್ಗುಣಿಗಳನ್ನು ಬಳಿಕ ಅವರ ಸದ್ಗುಣಗಳನ್ನು ಪ್ರೀತಿಸಲು ಕಲಿಯುತ್ತಾರೆ. ಆದುದರಿಂದ ಪಾಲಕರು ಮತ್ತು ಶಿಕ್ಷಕರು ಆದರ್ಶ ವ್ಯಕ್ತಿಗಳಾಗಿರಬೇಕು ಬಾಲಕರು ಬೆಳೆದು ದೊಡ್ಡವರಾದ ಮೇಲೆ ತಾವು ಮೆಚ್ಚುವ ಸದ್ಗುಣಗಳ ನಾಯಕರನ್ನು ಇತಿಹಾಸದಿಂದಾಗಲಿ, ಸಾಹಿತ್ಯದಿಂದಾಗಲಿ ಇಲ್ಲವೆ ಜೀವನದಿಂದಾಗಲಿ ಆರಿಸಿಕೊಳ್ಳುವರು. ಅಲ್ಲಿ ಬುದ್ಧ ಅಥವಾ ಬಸವ, ಕ್ರಾಯಿಸ್ಟ ಅಥವಾ ಮುಹಮ್ಮದ, ಗಾಂಧಿ ಅಥವಾ ಟಾಗೋರ ಮೊದಲಾದವರು ಅವರನ್ನು ಆಕರ್ಷಿಸಬಹುದು ಆ ಶ್ರೇಷ್ಠ ವ್ಯಕ್ತಿಗಳ ಉದಾತ್ತ ಜೀವನವು ಅವರಲ್ಲಿ ನೈತಿಕ ಸದ್ಗುಣಗಳನ್ನು ವಿಕಾಸಗೊಳಿಸಲು ಸಹಾಯವಾಗುವುದು.

ಆತ್ಮಗೌರವ ಅಥವಾ ಆತ್ಮಾನುರಾಗವೆಂದರೆ 'ನಾನು, ನನ್ನದು' ಎಂಬ ಭಾವನೆ. ಇದೇ ಪ್ರಧಾನ ಅನುರಾಗವು. ಆತ್ಮಾನುರಾಗದಲ್ಲಿ ವಿಧೇಯ ಮತ್ತು ಆತ್ಮಪ್ರತಿಷ್ಠೆ ಪ್ರವೃತ್ತಿಗಳು ಮುಖ್ಯವಾದ ಅಂಶಗಳಾಗಿರುತ್ತವೆ. ಆತ್ಮವಿಚಾರವು ಶೈಶವಾವಸ್ಥೆಯಿಂದ ಪ್ರೌಢಾವಸ್ಥೆಯ ವರೆಗೆ ವಿಕಾಸ ಹೊಂದುತ್ತ ಹೋಗುತ್ತದೆ. ಮಗುವಿಗೆ ತನ್ನ ದೇಹ ಬೇರೆ, ಇತರ ಎಲ್ಲ ವಸ್ತುಗಳು ಬೇರೆ ಎಂಬ ಭಾವನೆಯು ಮೊದಲು ಒಡಮೂಡುತ್ತದೆ. ಬಳಿಕ ವಸ್ತುಗಳು ಬೇರೆ, ವ್ಯಕ್ತಿಗಳು ಬೇರೆ ಎಂಬ ಕಲ್ಪನೆಯು ಬರುತ್ತದೆ. ತನ್ನಂತೆ ಇತರ ವ್ಯಕ್ತಿಗಳೂ ಉಂಟೆಂಬ ಕಲ್ಪನೆ ಬಂದಾಗ ಆತ್ಮಾನುರಾಗವು ಪ್ರಾರಂಭವಾಗುತ್ತದೆ. ಇತರರು ತನ್ನ ವಿಷಯಕ್ಕೆ ತಾಳುವ ಅಭಿಪ್ರಾಯವನ್ನು ಅವನು ನಂಬುತ್ತಾನೆ. ಈ ಸಂಗತಿಯನ್ನು ಎಲ್ಲ ಶಿಕ್ಷಕರು ನೆನಪಿನಲ್ಲಿಡಬೇಕು. 'ಮಗುವಿಗೆ ನೀನು ತುಂಟ, ತುಡುಗ, ದಡ್ಡ, ಸೋಮಾರಿ' ಎಂದು ಹೇಳತೊಡಗಿದರೆ ಅವನು ಹಾಗೇ ಆಗುವ ಸಂಭವವುಂಟು. ಆತ್ಮಾನುರಾಗದಲ್ಲಿ

'ಅಹಂಕಾರ' 'ಮಮಕಾರ'ಗಳು ಬೆರೆತಿರುವುದರಿಂದ ಅದು ಅವನ ವ್ಯಕ್ತಿತ್ವವನ್ನು ನಿರ್ಧರಿಸುತ್ತದೆ.

ಬೋಧೆ ಸಂವೇದನೆ ಮತ್ತು ಸಂಕಲ್ಪ ಎಂಬವು ಮನಸ್ಸಿನ ಮೂರು ಅಂಶಗಳು. ಜ್ಞಾನ ಅಥವಾ ಬೋಧೆಯು ವಿಕಾಸಹೊಂದುವಂತೆ ವೇದನೆ-ಸಂಕಲ್ಪಗಳೂ ವಿಕಾಸಹೊಂದುತ್ತವೆ ಈ ವಿಕಾಸಕ್ಕೆ ಮೂಲಾಧಾರಗಳು ಪ್ರವೃತ್ತಿಗಳೇ. ಪ್ರವೃತ್ತಿಗಳು ಕ್ರಮೇಣ ಸುವ್ಯವಸ್ಥಿತಗೊಂಡು ಭಾವಗಳು ಅಥವಾ ಮನೋಗ್ರಂಥಿಗಳು (Complexes) ಆಗುತ್ತವೆ. ಈ ಭಾವಗಳು ಅಭಿವೃದ್ಧಿಯನ್ನು ಹೊಂದಿ ನಮ್ಮ ಸರ್ವ ಚಟುವಟಿಕೆಗಳನ್ನು ನಿಯಂತ್ರಿಸುವ ಸ್ಥಿರವಾದ ಅನುರಾಗಗಳಾಗುತ್ತವೆ. ಈ ಅನುರಾಗಗಳು ಸುಸಂಬದ್ಧವಾದರೆ ಸರ್ವವ್ಯಾಪಕವಾದ ಶೀಲವು ( Character ) ರೂಪುಗೊಳ್ಳುತ್ತದೆ. ಇದೇ ಮನೋವಿಕಾಸ.

**ವ್ಯಕ್ತಿತ್ವ.**— ಉತ್ತಮ ವ್ಯಕ್ತಿಗಳನ್ನು ತಯಾರಿಸುವುದೇ ಶಿಕ್ಷಣದ ಸರ್ವ ಕಾರ್ಯಕಲಾಪಗಳ ಹೆಗ್ಗುರಿಯಾದುದರಿಂದ ಅದನ್ನು ಸಾಧಿಸುವ ಬಗೆ ಯಾವುದೆಂಬುದನ್ನು ಇಲ್ಲಿ ಸಂಕ್ಷೇಪವಾಗಿ ನಿರೂಪಿಸುವ. ವ್ಯಕ್ತಿತ್ವ (Personality) ದಲ್ಲಿ ಐದು ಮುಖ್ಯ ಅಂಶಗಳು ಉಂಟೆಂದು ಮ್ಯಾಕ್‌ಡೂಗಲ್ಲ್‌ನು ಹೇಳುತ್ತಾನೆ:— ಮನಸ್ಸಿನ ಒಲವು (Disposition), ಚಿತ್ತವೃತ್ತಿ ( Temper ), ಸ್ವಭಾವವೈಚಿತ್ರ್ಯ ( Temperament ), ಬುದ್ಧಿ (Intellect) ಮತ್ತು ಶೀಲ (Character). ಇವಲ್ಲದೆ ವ್ಯಕ್ತಿಯ ಶರೀರ ವೈಶಿಷ್ಟ್ಯಗಳೂ ಅಪ್ರತ್ಯಕ್ಷ ರೀತಿಯಿಂದ ಪರಿಣಾಮವನ್ನುಂಟುಮಾಡುತ್ತವೆ. ಆದರೆ ಮಾನಸಿಕ ಅಂಶಗಳು ಅತ್ಯಂತ ಪ್ರಮುಖವಾದವುಗಳು.

ಬೇರೆ ಬೇರೆ ಮಕ್ಕಳಲ್ಲಿ ಬೇರೆ ಬೇರೆ ಪ್ರವೃತ್ತಿಗಳು ಪ್ರಬಲವಾಗಿರುವುದರಿಂದ ಅವರ ಒಲವುಗಳೂ ಭಿನ್ನವಾಗಿರುತ್ತವೆ. ಬಾಲಕರಲ್ಲಿ ಕುತೂಹಲವುಳ್ಳವರು, ಅಂಜುಬುರುಕರು, ಛಲವುಳ್ಳವರು, ನಮ್ರರು ಹೀಗೆ ವಿವಿಧ ಸ್ವಭಾವವುಳ್ಳವರನ್ನು ನಾವು ಕಾಣುತ್ತೇವೆ. ಪ್ರವೃತ್ತಿಗಳು ಹುಟ್ಟು ಗುಣಗಳಾಗಿದ್ದರೂ ಅಭ್ಯಾಸದಿಂದ ಮುಖ್ಯವಾಗಿ ಬಾಲ್ಯದಲ್ಲಿ ಅವು ಬಲಗೊಳ್ಳುತ್ತವೆ. ಭಯಪ್ರವೃತ್ತಿಯನ್ನು ಮೇಲಿಂದ ಮೇಲೆ ಪ್ರೇರಿಸಿ ಸ್ವಭಾವತಃ ಪುಕ್ಕನಲ್ಲದವನನ್ನು ಪುಕ್ಕನನ್ನಾಗಿ ಮಾಡಬಹುದು. ಅದರಂತೆ

ಗರ್ವ, ದುರಭಿಮಾನ, ಅಹಂಕಾರಗಳು ಆತ್ಮಪ್ರತಿಷ್ಠೆಯ ವಿವಿಧ ರೂಪಗಳು. ಅಶ್ಲೀಲವಾದ ಸಂಭಾಷಣೆ, ಕಾದಂಬರಿ, ಸಿನೇಮಾ ನಾಟಕ ಮೊದಲಾದವುಗಳಿಂದ ಕಾಮಪ್ರವೃತ್ತಿಯು ಬಲಗೊಳ್ಳಬಹುದು. ಆದುದರಿಂದ ಶಿಕ್ಷಕನು ಪ್ರವೃತ್ತಿಗಳನ್ನು ಯೋಗ್ಯಮಾರ್ಗದಲ್ಲಿ ಪರಿವರ್ತಿಸಬೇಕು. ಜನರ ಚಿತ್ತವೃತ್ತಿಯಲ್ಲಿಯೂ ಭಿನ್ನತೆಯುಂಟು. ಕೆಲವರು ದೃಢನಿಶ್ಚಯವುಳ್ಳವರಾಗಿದ್ದರೆ ಬೇರೆ ಕೆಲವರು ಚಂಚಲವೃತ್ತಿಯವರಾಗಿರುತ್ತಾರೆ. ಕೆಲವರು ಚಟುವಟಿಕೆಯುಳ್ಳವರಿದ್ದರೆ ಮತ್ತೆ ಕೆಲವರು ಶಾಂತವೃತ್ತಿಯವರಿರುತ್ತಾರೆ. ಕೆಲವರು ಜಯಾಪಜಯಗಳಿಂದ, ಸುಖದುಃಖಗಳಿಂದ ವೇದನೆಹೊಂದುವವರಿದ್ದರೆ ಕೆಲವರು ವೇದನಾರಹಿತರಾಗಿರುತ್ತಾರೆ. ಸ್ವಭಾವಭಿನ್ನತೆಯಿಂದ ಮನುಷ್ಯರಲ್ಲಿ ಸ್ಥೂಲವಾಗಿ ಸೋಮಾರಿಗಳೂ ಶೀಘ್ರಕೋಪಿಗಳೂ ಅಂತರ್ಮುಖಿಗಳೂ ಬಹಿರ್ಮುಖಿಗಳೂ ಆಗಿರುತ್ತಾರೆ. ಹೀಗೆ ನಾವು ಭಿನ್ನಭಿನ್ನ ಸ್ವಭಾವದ ಜನರನ್ನು ಈ ಜಗತ್ತಿನಲ್ಲಿ ಕಾಣುತ್ತೇವೆ. ಯೋಗ್ಯ ಸನ್ನಿವೇಶದಿಂದ ಸ್ವಭಾವವನ್ನು ತಿದ್ದುವುದು ಶಕ್ಯವಿದೆ.

ಸಾಂಖ್ಯ, ಯೋಗ ಮೊದಲಾದ ಹಿಂದೂ ದಾರ್ಶನಿಕರು ಮನುಷ್ಯವರ್ಗವನ್ನು ಸತ್ವ, ರಜ, ತಮ ಎಂಬ ಮೂರು ಗುಣದವರನ್ನಾಗಿ ವಿಭಾಗಿಸುತ್ತಾರೆ. ಸಾತ್ವಿಕ ಸ್ವಭಾವದವರು ವಿವೇಕಿಗಳೂ ಶಾಂತಸ್ವಭಾವದವರೂ ಆಗಿರುತ್ತಾರೆ. ರಜೋಗುಣ ಪ್ರಾಧಾನ್ಯವಾಗಿದ್ದವರು ಚಟುವಟಿಕೆಯುಳ್ಳವರಿರುತ್ತಾರೆ. ತಮೋಗುಣವು ಪ್ರಾಧಾನ್ಯವಾಗಿದ್ದಲ್ಲಿ ಸೋಮಾರಿಗಳೂ ಆಲಸಿಗಳೂ ಆಗಿರುತ್ತಾರೆ. ಜನರನ್ನು ಈ ರೀತಿಯಾಗಿ ವಿಭಾಗಿಸುವುದೂ ಒಂದು ವಿಧಾನ. ಇಲ್ಲಿ ಮುಖ್ಯವಾಗಿ ತಿಳಿದುಕೊಳ್ಳುವ ಸಂಗತಿಯಾವುದೆಂದರೆ ಗುಣಗಳಾಗಲಿ ಪ್ರವೃತ್ತಿಗಳಾಗಲಿ ಅವು ಹುಟ್ಟುವಾಗಲೆ ನಮ್ಮನ್ನು ಹಿಂಬಾಲಿಸುವ ಸಹಜ ವೈಶಿಷ್ಟ್ಯಗಳು.

ಸುಸಂಬದ್ಧವಾಗಿ ಬೆಳೆದ ವ್ಯಕ್ತಿತ್ವದಲ್ಲಿ ಬುದ್ಧಿ ಮತ್ತು ಶೀಲ ಇವು ಮುಖ್ಯವಾದ ಅಂಶಗಳು. ವಿಶೇಷದಿಂದ ಸಾಮಾನ್ಯ ಕಲ್ಪನೆಗೆ ಸಾಗುವುದು ಬುದ್ಧಿ ಬೆಳವಣಿಗೆಯ ಲಕ್ಷಣವು. ಮಗುವು ಮೊಟ್ಟಮೊದಲು ಒಂದು ಗುಬ್ಬಿಯನ್ನು ನೋಡಿದಾಗ ಅವನ ಮನಸ್ಸಿನಲ್ಲಿ ಗುಬ್ಬಿಯ ಗುಣಗಳ ಸಂಸ್ಕಾರವು ಮೂಡುತ್ತದೆ. ಅನಂತರ ಅನೇಕ ಗುಬ್ಬಿಗಳನು

ನೋಡಿ ಸಾಮಾನ್ಯವಾಗಿ ಗುಬ್ಬಿ ಅಂದರೇನೆಂಬ ಕಲ್ಪನೆಯು ಅವನಲ್ಲಿ ಉಂಟಾಗುತ್ತದೆ. ಆಮೇಲೆ ಮಗುವು ಕಾಗೆ, ಹದ್ದು, ಪಾರಿವಾಳ ಮೊದಲಾದ ಖೇಚರಗಳನ್ನು ನೋಡಿ ಪಕ್ಷಿಜಾತಿಯ ಕಲ್ಪನೆಯನ್ನು ತಂದುಕೊಳ್ಳುತ್ತಾನೆ. ಈ ರೀತಿಯಾಗಿ ಜ್ಞಾನವು ಕ್ರಮಗೊಂಡರೆ ಬುದ್ಧಿಯು ಸುಸಂಬದ್ಧವಾಗಿದೆಯೆಂದು ಹೇಳಬಹುದು. ಆದರೆ ಕೆಲವು ವ್ಯಕ್ತಿಗಳಲ್ಲಿ ಬುದ್ಧಿಯು ಈ ರೀತಿಯಾಗಿ ಸುವ್ಯಸ್ಥಿತಗೊಂಡಿರುವುದಿಲ್ಲ. ಅವರಲ್ಲಿಯ ಕೆಲ ಕೆಲವು ಪ್ರವೃತ್ತಿಗಳು ಒಟ್ಟುಗೂಡಿ ಒಂದೊಂದು ಅನುರಾಗವಾಗಿರಬಹುದು. ಆದರೆ ಈ ವಿವಿಧ ಅನುರಾಗಗಳು ಒಂದು ಕ್ರಮದಲ್ಲಿ ಒಟ್ಟುಗೂಡಿರುವುದಿಲ್ಲ. ಒಬ್ಬ ಮನುಷ್ಯನಲ್ಲಿ ಧಾರ್ಮಿಕ ಅನುರಾಗ ಮತ್ತು ವಿಜ್ಞಾನದ ಅನುರಾಗ ಆಳವಟ್ಟಿರಬಹುದು. ಇಂಥವನು ಧರ್ಮಾಚರಣೆಗಳನ್ನು ನಡೆಸುವಾಗ ಕುಟುಂಬವನ್ನೂ ವಿಜ್ಞಾನವನ್ನೂ ಮರೆಯಬಹುದು. ಶಾಸ್ತ್ರಶೋಧನೆಯಲ್ಲಿ ತೊಡಗಿದಾಗ ಧರ್ಮತತ್ವಗಳನ್ನು ಉಲ್ಲಂಘಿಸಬಹುದು; ತನ್ನ ಕುಟುಂಬವನ್ನು ಅಲಕ್ಷಿಸಬಹುದು. ಕುಟುಂಬದ ಸಲುವಾಗಿ ದುಡಿಯುವಾಗ ಧರ್ಮವನ್ನೂ ವಿಜ್ಞಾನವನ್ನೂ ತೊರೆಯಬಹುದು. ಹೀಗೆ ಅವನ ಆಚಾರ-ವಿಚಾರಗಳು ಅನ್ಯೋನ್ಯ ವಿರೋಧವಾಗಿರಬಹುದು. ಆಯಾ ಕಾಲದಲ್ಲಿ ಅವುಗಳಲ್ಲಿ ಅವನು ನಂಬುಗೆಯನ್ನಿಡುತ್ತಾನೆ. ಮನಸ್ಸಿನಲ್ಲಿ ಈ ತೆರನಾದ ವಿಭಾಗಗಳು ಉಂಟಾದರೆ ಬುದ್ಧಿವಿಕಾಸವು ಯೋಗ್ಯರೀತಿಯಲ್ಲಿ ಕ್ರಮಗೊಂಡಿಲ್ಲವೆಂದು ತಿಳಿಯಬೇಕು.

**ಬುದ್ಧಿಯನ್ನು ಸುಸಂಬದ್ಧಗೊಳಿಸುವುದೇ ನಿಜವಾದ ಶಿಕ್ಷಣವಾಗಿದೆ.** ಅನುರಾಗಗಳು ಒಂದಕ್ಕೊಂದು ವಿರೋಧವಾಗಿ ವರ್ತಿಸದಂತೆ ಅವುಗಳನ್ನು ಒಂದೇ ಧ್ಯೇಯದಿಂದ ಅನುಬಂಧಿಸಬೇಕು. ಎಲ್ಲ ಪ್ರವೃತ್ತಿಗಳನ್ನೂ ಸಾಮರ್ಥ್ಯಗಳನ್ನೂ ಅನುರಾಗಗಳನ್ನೂ ಒಂದೇ ಧ್ಯೇಯಸಾಧನೆಯಲ್ಲಿ ತೊಡಗಿಸಬೇಕು. ಮಗುವು ಭಾಷೆ, ಗಣಿತ, ವಿಜ್ಞಾನ ಮೊದಲಾದ ಬೇರೆ ಬೇರೆ ವಿಷಯಗಳನ್ನು ಕಲಿಯುತ್ತಿದ್ದರೂ ಅವಕ್ಕೆಲ್ಲ ಒಂದೇ ಕುತೂಹಲಪ್ರವೃತ್ತಿಯು ಮೂಲವಾಗಿರುವಂತೆ ಮನುಷ್ಯನ ಸರ್ವ ಚಟುವಟಿಕೆಗಳಿಗೆ ಒಂದೇ ಧ್ಯೇಯವು ಕಾರಣವಾಗಿರಬೇಕು. ಇದನ್ನು ಕಲಿಸುವುದೇ ಉಚ್ಚ ಶಿಕ್ಷಣ. ತರ್ಕಶಾಸ್ತ್ರ ಮತ್ತು ತತ್ವಜ್ಞಾನವನ್ನು ಅಭ್ಯಾಸಮಾಡುವುದರಿಂದ

ಎಲ್ಲ ಅನುರಾಗಗಳಲ್ಲಿಯೂ ಕಾರ್ಯಕಲಾಪಗಳಲ್ಲಿಯೂ ಸುಸಂಬದ್ಧತೆಯನ್ನುಂಟುಮಾಡುವ ಕ್ರಮವು ಗೊತ್ತಾಗುತ್ತದೆ. "ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರನು, ಎರಡಿಲ್ಲ" ಎಂಬ ಸತ್ಯಪರಿಪಾಲನೆಯ ಧ್ಯೇಯವನ್ನಿಟ್ಟುಕೊಂಡಿದ್ದರಿಂದ ಹರಿಶ್ಚಂದ್ರನ ಜೀವನದಲ್ಲಿ ಏಕರೂಪತೆಯು ಕಾಣುತ್ತದೆ. ಅವಿಚ್ಛಿನ್ನವಾದ ಮನಸ್ಸು ಶ್ರೇಷ್ಠ ವ್ಯಕ್ತಿತ್ವದ ಕುರುಹು.

ಇನ್ನು ಕೊನೆಯದಾಗಿ ಶೀಲದ ವಿಚಾರ. ಶೀಲಸಂವರ್ಧನೆಯು ಸರ್ವಶಿಕ್ಷಣದ ಗುರಿಯು. ಇದು ಅತ್ಯಂತ ಗಹನವಾದ, ಗೂಢವಾದ ಮತ್ತು ಮಹತ್ವವಾದ ವಿಷಯವು. ಶೀಲವೆಂದರೇನು? ಅದನ್ನು ಬೆಳೆಯಿಸುವ ಬಗೆ ಯಾವುದು? ಎಂಬುದನ್ನು ಅರಿಯುವುದೂ ಶಿಕ್ಷಕರಿಗೆ ಅವಶ್ಯವಾದುದು. ಉತ್ತಮವಾದ ನಡತೆಯೇ ಶೀಲ. ಜೀವನಸಂಗ್ರಾಮದಲ್ಲಿ ಮುಂದಡಿಯಿಡುತ್ತ ಹೋದಹಾಗೆ ಶೀಲವು ನಮ್ಮಲ್ಲಿ ಕ್ರಮೇಣ ರೂಪುಗೊಳ್ಳುತ್ತದೆ. ಶೀಲವೆಂಬುದು ಒಂದು ರಚನೆ; ಪ್ರವೃತ್ತಿಗಳು ಅದರ ಮೂಲ ಘಟಕಗಳು. ಶೀಲರಚನೆಯ ಕ್ರಮದಲ್ಲಿ ಎರಡು ಮೆಟ್ಟಿಲುಗಳು ಇವೆ. ಅನೇಕ ಉದ್ದೇಶಗಳ ಕಡೆಗೆ ಹರಿಯುವ ಪ್ರವೃತ್ತಿಗಳನ್ನು ಕ್ರಮಗೊಳಿಸಿ ಅನುರಾಗಗಳನ್ನುಂಟುಮಾಡುವುದು ಮೊದಲನೆಯ ಮೆಟ್ಟಿಲು ಅನೇಕ ಗುರಿಗಳ ಕಡೆಗೆ ಹರಿಯುವ ಅನುರಾಗಗಳನ್ನು ಅನ್ಯೋನ್ಯ ಪರಿಪೋಷಕವಾಗುವಂತೆ ಮಾಡಿ ಅವನ್ನು ಸಮರಸಗೊಳಿಸಿ ಒಂದು ಪ್ರಧಾನ ಅನುರಾಗದಲ್ಲಿ, ಆತ್ಮಗೌರವದಲ್ಲಿ ಒಟ್ಟುಗೂಡಿಸುವುದು ಎರಡನೆಯ ಮೆಟ್ಟಿಲು. **ಅನುರಾಗಗಳ ಸಂಘಟನೆಯೆ ಶೀಲವು.** ಅನುರಾಗಗಳು ಹೆಚ್ಚು ಹೆಚ್ಚು ಸಮರಸವಾದಂತೆ ಉತ್ಕೃಷ್ಟ ಶೀಲವು ರೂಪುಗೊಳ್ಳುತ್ತದೆ. ಶೀಲವನ್ನು ಹಾಗೆ ರೂಪುಗೊಳಿಸುವುದೆ ಶಿಕ್ಷಣದ ಮುಖ್ಯಕಾರ್ಯ. ಉಚ್ಚತರಗತಿಯ ಸಂಘಟನೆಯು ಇರದಿದ್ದರೆ ಅನುರಾಗಗಳಲ್ಲಿ ಪರಸ್ಪರ ವಿರೋಧವುಂಟಾಗಿ ಕಾರ್ಯಸಾಮರ್ಥ್ಯವು ಬಲಗುಂದುತ್ತದೆ; ಕಾರ್ಯಪದ್ಧತಿಯು ಅಸ್ತವ್ಯಸ್ತವಾಗುತ್ತದೆ; ಉದ್ದೇಶಗಳು ಅನಿಶ್ಚಿತವಾಗುತ್ತವೆ. ಈ ಉಚ್ಚತರದ ಸಂಘಟನೆಯು ಪ್ರಾಪ್ತವಾದರೆ ಇಚ್ಛಾಶಕ್ತಿಯು ಬಲಗೊಳ್ಳುತ್ತದೆ. ಸಹವಾಸದ ವರ್ಚಸ್ಸಿನಿಂದ ಶೀಲವು ಬಾಲ್ಯದಲ್ಲಿಯೂ ತಾರುಣ್ಯದಲ್ಲಿಯೂ ಕ್ರಮೇಣ ರೂಪುಗೊಳ್ಳುತ್ತದೆ. ಮೇಲೆ ವಿವರಿಸಿದ ಮನಸ್ಸಿನ ಒಲವು, ಚಿತ್ತವೃತ್ತಿ ಮತ್ತು ಸ್ವಭಾವಗಳು ಸಹಜ ಗುಣಗಳಾದ್ದರಿಂದ ಅವುಗಳನ್ನು ತುಸುಮಟ್ಟಿಗೆ ಮಾತ್ರ ತಿದ್ದಲು ಬರುತ್ತದೆ.

ಆದರೆ ಬುದ್ಧಿಯನ್ನೂ ಶೀಲವನ್ನೂ ಸುವ್ಯವಸ್ಥಿತಗೊಳಿಸುವುದು ನಮ್ಮ ಕೈಯೊಳಗಿನ ಮಾತು. ಹುಟ್ಟಿದ ಶಿಶುಗಳಲ್ಲಿ ಶೀಲವು ಇನ್ನೂ ಒಡಮೂಡಿರುವುದಿಲ್ಲ. ಶೀಲವು ನಮ್ಮಲ್ಲಿಯೆ ಬೆಳೆಯುವುದರಿಂದ ಅದನ್ನು ತಿದ್ದಲು ಸಾಧ್ಯವಿದೆ.

ಸುಸಂಬದ್ಧ ಶೀಲವು ಅನೇಕ ರೂಪಗಳನ್ನು ತಾಳುತ್ತದೆ. ಒಂದು ವ್ಯಕ್ತಿಯಲ್ಲಿ ಯಾವುದಾದರೊಂದು ಅನುರಾಗವು ಪ್ರಬಲವಾಗಿರಬಹುದು. ಅದಕ್ಕೆ ನಾವು ಆ ವ್ಯಕ್ತಿಯ ಪ್ರಧಾನ ಅನುರಾಗವೆನ್ನುತ್ತೇವೆ. ಇದು ಒಮ್ಮೊಮ್ಮೆ ಸದಸದ್ವಿವೇಕವನ್ನು ಬದಿಗೊತ್ತಿ ನ್ಯಾಯಾನ್ಯಾಯಗಳನ್ನು ಲೆಕ್ಕಿಸದೆ ಅನೀತಿಯ ಕಾರ್ಯಗಳನ್ನೂ ಮಾಡಿಸಬಹುದು. ದೇಶಾಭಿಮಾನಿಯಾಗಲಿ, ಮಹತ್ವಾಕಾಂಕ್ಷಿಯಾಗಲಿ, ಪುತ್ರಪ್ರೇಮಿಯಾಗಲಿ ಕೆಲವೊಂದು ಪ್ರಸಂಗಗಳಲ್ಲಿ ಅನ್ಯಾಯದ, ಮೋಸದ, ನಿರ್ದಯೆಯ ಅಥವಾ ಅಪರಾಧದ ಕೆಲಸಗಳನ್ನು ಮಾಡಬಹುದು. ಆದರೆ ಇದು ಉತ್ತಮ ಶೀಲದ ಲಕ್ಷಣವಲ್ಲ. ಅತ್ಯುತ್ಕೃಷ್ಟವಾದ ಶೀಲವು ಇದಕ್ಕೂ ಮೇಲ್ಪಂಕ್ತಿಯದು. ಅದು ನೈತಿಕ ಅನುರಾಗಗಳನ್ನೂ ಉದಾತ್ತ ಧ್ಯೇಯವನ್ನೂ ಒಳಗೊಂಡಿರುತ್ತದೆ; ಮತ್ತು ಸದಸದ್ವಿವೇಕಬುದ್ಧಿಯಿಂದ, ಆತ್ಮಾನುರಾಗದಿಂದ ಲಭಿಸುತ್ತದೆ. ಸರ್ವ ವರ್ತನಗಳಲ್ಲಿ ನೀತಿಯೆ ಆಜೀವ ನೆಲಗಟ್ಟಾಗಬೇಕಾದರೆ **ನೈತಿಕ ಗುಣಗಳು ಆತ್ಮಗೌರವವೆಂಬ ಅನುರಾಗದಲ್ಲಿ ಸಮಾವೇಶವಾಗಿರಬೇಕು.** ಇದೇ ಅತ್ಯಂತ ಮಹತ್ವವಾದದ್ದು. ಇದನ್ನು ಸಾಧಿಸುವುದೇ ನಿಜವಾದ ಶಿಕ್ಷಣ. ಇಂಥ ಶ್ರೇಷ್ಠ ತರಗತಿಯ ಶೀಲವುಳ್ಳಾತನು ಯಾವ ಪ್ರಸಂಗವೇ ಒದಗಲಿ, ಕಡೆಗೆ ಪ್ರಾಣ ಹೋಗುವ ಸಂದರ್ಭವೆ ಬರಲಿ ಅನೀತಿಯ ಕಾರ್ಯವನ್ನು ಮಾಡಲು ಎಂದೂ ಯತ್ನಿಸುವುದಿಲ್ಲ. ಉದಾತ್ತಜೀವನವೇ ಅವನ ಧ್ಯೇಯ. "ಜನಮೆಚ್ಚಿ ನಡೆಕೊಂಡರೇನುಂಟು ಲೋಕದಿ, ಮನಮೆಚ್ಚಿ ನಡೆಕೊಂಬುವುದೇ ಚಂದ" ಎಂದು ಅವನು ನುಡಿಯುತ್ತಾನೆ. ಹರಿಶ್ಚಂದ್ರನು ಸತ್ಯಪರಿಪಾಲನೆಯಲ್ಲಿ ಒಮ್ಮೆಯಾದರೂ ಹುಸಿನುಡಿಯನಾಡಿದನೇ? ಮಹಾತ್ಮಾ ಗಾಂಧಿಯವರು ಸತ್ಯ ಮತ್ತು ಅಹಿಂಸೆ ಎಂಬ ತತ್ವವನ್ನು ಬಿಟ್ಟು ಎಂದಾದರೂ ಕದಲಿರುವರೆ? ಅಂತೆಯೇ ಅವರು ಜಗತ್ಪೂಜ್ಯರಾಗಿರುವರು. ಇಂತಹ ಶೀಲವಂತ ವ್ಯಕ್ತಿಗಳನ್ನು ತಯಾರಿಸುವುದೇ ಶಿಕ್ಷಣದ ಧ್ಯೇಯ. "ಶೀಲ ಸಾಧಿಸಿದಾತನೇ ಹಿರಿಯ ಕಾಣಾ" ಎಂಬ ವಚನದಂತೆ ಶೀಲವುಳ್ಳಾತನೇ ಶ್ರೇಷ್ಠವ್ಯಕ್ತಿಯು.

ವ್ಯಕ್ತಿತ್ವದ ವಿಷಯವನ್ನು ಪ್ರಸ್ತಾಪಿಸುವಾಗ ಮ್ಯಾಕ್‌ಡೂಗಲ್ಲ್‌ನು ತನ್ನ "ಸಾಮಾಜಿಕ ಮನಶ್ಶಾಸ್ತ್ರ" (*Social Psychology*) ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾನೆ— **ಸಹಜ ಪ್ರವೃತ್ತಿಗಳನ್ನು ಸುಸಂಬಂಧಿಸಿ ಅನುರಾಗಗಳನ್ನುಂಟುಮಾಡುವುದು ಮತ್ತು ಈ ಅನುರಾಗಗಳನ್ನು ಆತ್ಮಗೌರವವೆಂಬ ಅನುರಾಗದ ಮತ್ತು ಉದಾತ್ತಶೀಲದ ಆಧಿಪತ್ಯ ದಲ್ಲಿ ಒಂದುಗೂಡಿಸುವುದು ವ್ಯಕ್ತಿತ್ವ ವಿಕಾಸದ ಪರಮಧ್ಯೇಯವು. ಅಚಲವಾದ ಮತ್ತು ಕಾರ್ಯ ಸಾಮರ್ಥ್ಯವುಳ್ಳ ವ್ಯಕ್ತಿತ್ವವನ್ನು ಅಭಿವೃದ್ಧಿಗೊಳಿಸುವ ಮಾರ್ಗವು ಇದೊಂದೇ.**

ವ್ಯಕ್ತಿತ್ವವಿಕಾಸವೆಂದರೆ ಶೀಲಸಂವರ್ಧನೆ. ಮಕ್ಕಳಲ್ಲಿ ಶೀಲವನ್ನು ಬೆಳೆಯಿಸುವ ಕಾರ್ಯವು ಅನೇಕ ಸಂಸ್ಥೆಗಳಿಂದ ನಡೆಯುತ್ತದೆ. ಮನೆ, ಮಠ, ಸಾಲೆ, ಸಿನೇಮಾ-ನಾಟಕ ಗೃಹ, ರೇಡಿಯೊ, ವೃತ್ತಪತ್ರಿಕೆಗಳು, ವಾಚನಾಲಯಗಳು, ವಸ್ತುಸಂಗ್ರಹಾಲಯಗಳು, ಉದ್ಯೋಗ, ಗೆಳೆಯರ ಗುಂಪು ಮೊದಲಾದವು ಇವೆಲ್ಲವೂ ಒಂದು ಬಗೆಯ ಶಿಕ್ಷಣ ಸಂಸ್ಥೆಗಳೇ. ಸಾಲೆಯೊಂದೇ ಶಿಕ್ಷಣಾಲಯವಲ್ಲ; ಉಪಾಧ್ಯಾಯರಷ್ಟೇ ಶಿಕ್ಷಕರಲ್ಲ. ವಿಶಾಲ ಜೀವನವೇ ಶಿಕ್ಷಣ. ಮೇಲೆ ಕಾಣಿಸಿದ ಶಿಕ್ಷಣ ಸಂಸ್ಥೆಗಳಲ್ಲಿ ಹೆಚ್ಚು ಮಹತ್ವ ವುಳ್ಳದ್ದೆಂದರೆ ಮನೆಯು. ಯಾಕೆಂದರೆ ಮಕ್ಕಳು ಬಾಲ್ಯವನ್ನು ಮನೆ ಯಲ್ಲಿಯೇ ಕಳೆಯುವುದರಿಂದ ಮತ್ತು ಬಾಲಕರ ಮನಸ್ಸು ಮೇಣದಂತೆ ಮೃದುವಾಗಿರುವುದರಿಂದ ಮನೆಯ ವಾತಾವರಣವು ಅವರ ಮೇಲೆ ಶಾಶ್ವತ ಪರಿಣಾಮವನ್ನುಂಟುಮಾಡುವುದು. ತಂದೆತಾಯಿಗಳ ನಡೆನುಡಿಗಳನ್ನು ಚಿಕ್ಕ ಬಾಲಕರು ಅನುಕರಣದಿಂದ ಸಹಜವಾಗಿಯೇ ಕಲಿಯುವರು. ಸ್ವಸಂಸ್ಕೃತಿಯ ಅಭಿಮಾನವೂ ಸಾಮ್ರಾಜ್ಯ ಸ್ಥಾಪನೆಯ ಶಕ್ತಿಯೂ ಶಿವಾಜಿಯಲ್ಲಿ ಉಂಟಾಗ ಬೇಕಾದರೆ ಅದು ಅವನ ತಾಯಿಯ ವರ್ಚಸ್ಸಿನ ಪರಿಣಾಮವೆಂದೇ ಊಹಿಸ ಬಹುದು. ತಂದೆತಾಯಿಗಳಲ್ಲಿರುವ ವಿಶಿಷ್ಟ ಗುಣಗಳು ಅವರ ಮಕ್ಕಳಲ್ಲಿಯೂ ಕಂಡುಬಂದರೆ ಅವು ಕೇವಲ ಆನುವಂಶಿಕವೆಂದು ಭಾವಿಸದೆ ಅನುಕರಣದಿಂದ ಸಂಪಾದಿಸಿದವೆಂದೇ ತಿಳಿಯಬೇಕು. ಮನೆಯಲ್ಲಿ ಒಳ್ಳೆಯ ಪರಿಸ್ಥಿತಿಯು ದೊರೆಯದಿದ್ದರೂ ಸಾಲೆಯಲ್ಲಿಯಾದರೂ ಯೋಗ್ಯ ವಾತಾವರಣವು ಅವಶ್ಯ ವಾಗಿ ಇರಲೇಬೇಕು. ಸಾಲೆಗಳು ಸ್ಥಾಪಿತವಾಗಿರುವುದು ಈ ಉದ್ದೇಶದಿಂದಲೆ.

ಒಳ್ಳೆಯ ಅನುರಾಗಗಳು ಮಕ್ಕಳಲ್ಲಿ ನೆಲೆಗೊಳ್ಳುವಂತೆ ಮಾಡುವುದು ಶಿಕ್ಷಕರ ಕೆಲಸ. ತಾನು ಆದರ್ಶಪುರುಷನಾಗಿದ್ದರೆ, ತನ್ನಲ್ಲಿ ಸದ್ಗುಣಗಳು ಅಳವಟ್ಟಿದ್ದರೆ ಬಾಲಕರ ಶೀಲವನ್ನು ಸಹಜವಾಗಿ ಶಿಕ್ಷಕನು ತಿದ್ದಬಲ್ಲನು. ಸಂಪ್ರದಾಯ, ಸಂಘಜೀವನ, ಆಟ, ಅಧ್ಯಾಪನ ಮೊದಲಾದ ಸಾಧನ ಗಳಿಂದಲೂ ತನ್ನ ವರ್ಚಸ್ಸಿನಿಂದಲೂ ಶಿಕ್ಷಕನು ಸಾಲೆಯಲ್ಲಿ ಮಕ್ಕಳ ಶೀಲ ವನ್ನು ತಿದ್ದಬೇಕು; ಅವರ ವ್ಯಕ್ತಿತ್ವದ ವಿಕಾಸಕ್ಕೂ ಸಮಾಜದ ಕಲ್ಯಾಣಕ್ಕೂ ಅನುಕೂಲವಾದ ನೈತಿಕ ಅನುರಾಗಗಳನ್ನು ಪೋಷಿಸಬೇಕು. ಐತಿಹಾಸಿಕ ಮಹಾವ್ಯಕ್ತಿಗಳ ಮತ್ತು ಸದ್ಯದ ಕಾಲದಲ್ಲಿ ಜೀವಿಸಿರುವ ಮಹಾಪುರುಷರ ಜೀವನಚರಿತ್ರೆಗಳೂ ಮಕ್ಕಳ ಶೀಲವನ್ನು ಸನ್ಮಾರ್ಗಕ್ಕೊಯ್ಯಲು, ಅವರಿಗೆ ಸದ್ಗುಣಗಳನ್ನು ಕಲಿಸಲು ನೆರವಾಗುತ್ತವೆ. ನೀತಿಯನ್ನು ಬಲಪಡಿಸಲು ಆಟವೂ ಒಂದು ಸಾಧನವಾಗಿದೆ ಏಕೆಂದರೆ ಆಟದಲ್ಲಿ ಸ್ವಾಮಿನಿಷ್ಠೆ, ಸಂಘಾಭಿಮಾನ, ಸಹಕಾರ, ಧೈರ್ಯ, ಪ್ರಾಮಾಣಿಕತನ, ನಿಷ್ಪಕ್ಷಪಾತ ಮೊದಲಾದ ಸದ್ಗುಣಗಳ ಅಭ್ಯಾಸಕ್ಕೆ ತುಂಬಾ ಅನುವು ದೊರೆಯುವುದು. ಆಟದ ಚಿಕ್ಕಪುಟ್ಟ ಸನ್ನಿವೇಶ ಗಳಲ್ಲಿ ನ್ಯಾಯಶೀಲನಾದವನು ಮುಂದೆ ದೊಡ್ಡ ಕಾರ್ಯಗಳಲ್ಲಿಯೂ ಹಾಗೇ ವರ್ತಿಸುವ ಸಂಭವವಿದೆ. ಸುಪ್ರಸಿದ್ಧರಾದ ಗೋಪಾಲ ಕೃಷ್ಣ ಗೋಖಲೆಯವರು ಹುಡುತುತು ಆಟವನ್ನು ಆಡುವಾಗ ತಮ್ಮ ವಿರುದ್ಧ ದಳದಲ್ಲಿ ತಮ್ಮ ಅಣ್ಣನಿದ್ದರೂ ತಮ್ಮ ದಳದ ಅಭಿಮಾನವೆ ಅವರಿಗೆ ಹೆಚ್ಚಾಗಿದ್ದಿತೆಂದು ಆಖ್ಯಾಯಿಕೆಯಿದೆ. ಸಾಲೆಯಲ್ಲಿ ಹೊಣೆಗಾರಿಕೆಯ ಕೆಲಸಗಳನ್ನು ಕೊಟ್ಟು ಮಕ್ಕಳ ಇಚ್ಛಾಶಕ್ತಿಯನ್ನೂ ಕಾರ್ಯಸಾಮರ್ಥ್ಯವನ್ನೂ ಬಲಪಡಿಸಬೇಕು. ಅವರ ಸದಸದ್ವಿವೇಕವನ್ನು ಪ್ರಚೋದಿಸಿ, ಅವರ ಬುದ್ಧಿ ಶಕ್ತಿಯನ್ನು ಬೆಳೆಯಿಸ ಬೇಕು. ಸದಾಚಾರಗಳನ್ನು ಪ್ರೋತ್ಸಾಹಿಸಿ ಸದ್ಗುಣಗಳನ್ನು ನೆಲೆಗೊಳಿಸಬೇಕು. ಇದಲ್ಲದೆ ಉದಾತ್ತ ಧ್ಯೇಯಗಳನ್ನು ಮಕ್ಕಳ ಕಣ್ಮುಂದೆ ಸದಾ ಇಟ್ಟು, ಅವುಗಳಿಗೆ ಅನುಗುಣವಾಗಿ ವರ್ತಿಸುವುದೇ ಆತ್ಮಗೌರವವೆಂದು ಮಕ್ಕಳು ತಿಳಿಯುವಂತೆ ಮಾಡಬೇಕು. **ಉದಾತ್ತ ಧ್ಯೇಯವುಳ್ಳ ಶೀಲವೇ ವ್ಯಕ್ತಿತ್ವದ ತಿರುಳು.** ಈ ತಿರುಳು ಬಹುದಿನ ಬಾಳಬೇಕಾದರೆ ಅಭ್ಯಾಸದ ಬಲವು ಬೇಕೇಬೇಕು. ಅದು ಇಲ್ಲದಿದ್ದರೆ ಶೀಲವು ಸಿಥಿಲವಾಗುವುದು.

ಧಾರ್ಮಿಕ ಶಿಕ್ಷಣವು ಒಂದು ಸೂಕ್ಷ್ಮವಾದ ಸಮಸ್ಯೆ. ಶೀಲದ ಅಭಿವೃದ್ಧಿಗೆ ಧರ್ಮತತ್ವದ ಪ್ರವಚನಗಳು ನೆರವಾಗುವುವೆಂದು ಕೆಲವರ ಅಭಿಪ್ರಾಯ. ಆದರೆ ಈ ಪ್ರವಚನಗಳಿಂದ ಅಷ್ಟೊಂದು ಲಾಭವಾದೀತೆಂದು ಹೇಳಲು ಬರುವಂತಿಲ್ಲ. ಏಕೆಂದರೆ ಅವು ಗಣಿತ ಅಥವಾ ವ್ಯಾಕರಣ ಕಲಿಸುವ ಧಾಟಿಯಲ್ಲಿರುವುವು. ಧರ್ಮೋಪದೇಶದ ಪರಿಣಾಮವು ಅನಿಶ್ಚಿತವಾದುದು. ಎಷ್ಟೋ ಬಾರಿ ಕೇಳುವವರ ಮೇಲೆ ಅದು ವಿಪರೀತ ಪರಿಣಾಮವನ್ನು ಉಂಟು ಮಾಡಬಹುದು. ಉಪದೇಶಕನು ಮೊದಲು ತಾನು ಹೇಳಬೇಕಾದುದನ್ನು ಆಚರಣೆಯಲ್ಲಿ ತಂದು ತೋರಿಸಿದವನಿದ್ದರೆ ಅವನ ಉಪದೇಶವು ಕೇಳುವವರ ಮನದಲ್ಲಿ ನಾಟುವುದು. ಅವನು ನುಡಿಯಂತೆ ನಡೆಯುಳ್ಳವನಿರಬೇಕು; 'ಆಡದೇ ಮಾಡುವವ ರೂಢಿಯೊಳಗುತ್ತಮನು'. ಶಿಕ್ಷಕನು ಕೇವಲ ಉಪದೇಶಕನಾಗದೆ ಧರ್ಮತತ್ವಗಳಂತೆ ತಾನು ಆಚರಿಸುತ್ತಿದ್ದು, ಧರ್ಮದ ತತ್ವಗಳನ್ನು ಐತಿಹಾಸಿಕ, ಪೌರಾಣಿಕ, ಮತ್ತು ಧಾರ್ಮಿಕ ಮಹಾಪುರುಷರ ಜೀವನ ಚರಿತ್ರೆಗಳ ಮುಖಾಂತರವಾಗಿ ತನ್ನ ವಿದ್ಯಾರ್ಥಿಗಳಿಗೆ ತಿಳಿಸಿಕೊಡಬೇಕು. ಅಂದರೆ ಮಾತ್ರ ಧರ್ಮದ ತತ್ವಗಳು ಬಾಲಕರ ಹೃದಯದಲ್ಲಿ ಬೇರೂರುವವು.

ಶಿಕ್ಷಕನು ತನ್ನ ಧರ್ಮಾಚರಣೆಯಿಂದ ಮಕ್ಕಳ ಗೌರವಕ್ಕೂ ವಿಶ್ವಾಸಕ್ಕೂ ಪಾತ್ರನಾಗಿದ್ದರೆ ಅವರ ಶೀಲವನ್ನು ತಿದ್ದುವುದರಲ್ಲಿ ನಿಜವಾಗಿಯೂ ಯಶಸ್ಸನ್ನು ಸಂಪಾದಿಸುವನು. ಧರ್ಮ-ಶೀಲಗಳಿಂದೊಡಗೂಡಿದವನೇ ಆದರ್ಶ ವ್ಯಕ್ತಿತ್ವವುಳ್ಳವನು. ಅಂತಹ ಶಿಕ್ಷಕನ ನೇತೃತ್ವದಲ್ಲಿ ಶಿಕ್ಷಣವನ್ನು ಪಡೆದ ಮಕ್ಕಳು ಭಾರತವನ್ನು ಭೂ–ಕೈಲಾಸವನ್ನಾಗಿ ಮಾಡಬಲ್ಲರು! ಆದುದರಿಂದ ಶಿಕ್ಷಕರು ಸದಾ ಇದನ್ನು ತಮ್ಮ ಮೂಲ ಮಂತ್ರವಾಗಿಟ್ಟುಕೊಳ್ಳಬೇಕು. ಶೀಲವು ಧರ್ಮದ ತಿರುಳು! ವ್ಯಕ್ತಿತ್ವವು ಶೀಲದ ತಿರುಳು! ಶೀಲ ವ್ಯಕ್ತಿತ್ವದ ಸುಂದರ ಮೂರ್ತಿಗಳನ್ನು ಸಿದ್ಧಗೊಳಿಸುವುದೇ ಶಿಕ್ಷಣದ ತಿರುಳು! ಶಿಕ್ಷಕನ ಪರಮ ಕರ್ತವ್ಯ !

# ಅನುಬಂಧ

## ೧

## ರಸಭಾವಗಳು* (Emotions)

**ಪ್ರವೃತ್ತಿಗಳು ಮತ್ತು ರಸಭಾವಗಳು.**—ಒಂದೆಡೆಯಲ್ಲಿ ಮ್ಯಾಕ್‌ಡೂಗಲ್ಲ್‌ನು ಪ್ರವೃತ್ತಿಯ ವ್ಯಾಖ್ಯೆಯನ್ನು ಈ ರೀತಿಯಾಗಿ ಹೇಳುತ್ತಾನೆ—"ಒಂದು ವಿಶಿಷ್ಟವರ್ಗದ ವಸ್ತುವನ್ನು ನೋಡಹಚ್ಚುವ ( ಅಥವಾ ಅದಕ್ಕೆ ಅವಧಾನವನ್ನು ಕೊಡುವ ), ಮತ್ತು ಅದರ ಸಮ್ಮುಖದಲ್ಲಿ ಒಂದು ವಿಶಿಷ್ಟ ಭಾವೋದ್ರೇಕವನ್ನೂ, ಆ ವಸ್ತುವಿನ ಬಗೆಗೆ ಒಂದು ವಿಶಿಷ್ಟ ವರ್ತನದಲ್ಲಿ ವ್ಯಕ್ತವಾಗುವ ಪ್ರಚೋದನೆಯನ್ನೂ, ಅನುಭವಿಸಹಚ್ಚುವ ಪ್ರಾಣಿಯ ಸಹಜ ಒಲವಿಗೆ ಪ್ರವೃತ್ತಿ ಎಂದೆನ್ನಬಹುದು." ಎಂದರೆ ಪ್ರವೃತ್ತಿವರ ಕ್ರಿಯೆಯಲ್ಲಿ ಬೋಧೆ ( ಸನ್ನಿವೇಶದ ಪರಿಜ್ಞಾನ ), ಸಂವೇದನೆ ( ಭಾವೋದ್ರೇಕ ), ಮತ್ತು ಸಂಕಲ್ಪ (ಕಾರ್ಯಪ್ರಚೋದನೆ) ಎಂಬ ಅನುಭವದ ಮೂರೂ ಅಂಶಗಳು ಸಮಾವೇಶವಾಗಿರುತ್ತವೆ. ಅನುಭವದಲ್ಲಿ ಸಂವೇದನೆಯು ಪ್ರಾಧಾನ್ಯವಾಗಿದ್ದರೆ ಆ ಅವಸ್ಥೆಗೆ ನಾವು ರಸಭಾವವೆಂದು ಕರೆಯುತ್ತೇವೆ. ಒಂದೊಂದು ರಸಭಾವವು ಒಂದೊಂದು ವಿಶಿಷ್ಟ ಅನುಭವವೇ. ಭಯದ ಅನುಭವವು ಒಂದು ತೆರನಾಗಿ ಇದ್ದರೆ ಸಿಟ್ಟಿನ ಅನುಭವವು ಮತ್ತೊಂದು ತೆರನಾಗಿರುತ್ತದೆ. ಪ್ರತಿಯೊಂದು ಪ್ರವೃತ್ತಿಯ ಜೊತೆಗೆ ಅದಕ್ಕೆ ಅನುಗುಣವಾದ ಒಂದು ರಸಭಾವವು ಇರುವುದೆಂದು ಮ್ಯಾಕ್‌ಡೂಗಲ್ಲ್‌ನು ಹೇಳುತ್ತಾನೆ. ಇವುಗಳನ್ನು ಅವನು ಮೂಲ ರಸಭಾವಗಳೆಂದು ಕರೆಯುವನು. (ಉದಾ—ಭಯ, ಜಿಗುಪ್ಸೆ, ಆಶ್ಚರ್ಯ,

* '**ಇಮೋಶನ್**' ಎಂಬ ಇಂಗ್ಲೀಷ ಶಬ್ದಕ್ಕೆ 'ಭಾವ' ಎಂಬ ಪದವನ್ನು ಉಪಯೋಗಿಸುವುದುಂಟು. ಆದರೆ ಭಾವ ಎಂಬುದನ್ನು 'ವಿಚಾರ' ಅಥವಾ 'ಕಲ್ಪನೆ' ಎಂಬ ಅರ್ಥದಲ್ಲಿಯೂ ಉಪಯೋಗಿಸುವ ರೂಢಿ ಇದ್ದುದರಿಂದ 'ರಸಭಾವ'ವು ಹೆಚ್ಚು ಉಚಿತವೆಂದು ತೋರುತ್ತದೆ.

ಕ್ರೋಧ, ಅಹಂಭಾವ, ಭೃತ್ಯಭಾವ, ಕರುಣೆ ಮುಂತಾದವು.) ಕೆಲಕೆಲವು ಸಂದರ್ಭಗಳಲ್ಲಿ ಎರಡು ಇಲ್ಲವೆ ಹೆಚ್ಚಿಗೆ ಪ್ರವೃತ್ತಿಗಳು ಒಮ್ಮೆಲೆ ಜಾಗ್ರತವಾಗುತ್ತವೆ ಆಗ ನಾವು ಒಂದೇ ಸಮಯಕ್ಕೆ ಅನೇಕ ರಸಭಾವಗಳನ್ನು ಅನುಭವಿಸುತ್ತೇವೆ. ಇವುಗಳಿಗೆ ಮಿಶ್ರ ರಸಭಾವಗಳೆಂದು ಅನ್ನಬಹುದು. (ಉದಾ— ವಿಸ್ಮಯ, ಕೃತಜ್ಞತೆ, ಭಕ್ತಿ, ನಾಚಿಕೆ, ದ್ವೇಷ, ಹೊಟ್ಟೇಕಿಚ್ಚು, ತಿರಸ್ಕಾರ ಮೊದಲಾದವು.)

ಜಾಗ್ರತಗೊಂಡ ಪ್ರವೃತ್ತಿಯೊಡನೆ ರಸಭಾವವು ಅವಶ್ಯವಾಗಿ ಇರುವುದರಿಂದ ಒಮ್ಮೊಮ್ಮೆ ಅವೆರಡನ್ನೂ ಒಂದೇ ಹೆಸರಿನಿಂದ ಕರೆಯುವದುಂಟು. 'ಕ್ರೋಧ', 'ಭಯ', 'ಜಗುಪ್ಸೆ', ಕುತೂಹಲ ಎಂಬ ಶಬ್ದಗಳನ್ನು ಅವುಗಳಿಂದ ಸೂಚಿಸಲ್ಪಡುವ ಪ್ರವೃತ್ತಿ ಮತ್ತು ರಸಭಾವ ಇವೆರಡಕ್ಕೂ ಉಪಯೋಗಿಸುತ್ತಾರೆ

**ರಸಭಾವದ ಮುಖ್ಯ ಲಕ್ಷಣಗಳು.—** ವಿಶಿಷ್ಟ ಲಕ್ಷಣವುಳ್ಳ ಪ್ರಕ್ಷುಬ್ಧ ಸಂವೇದನೆಯೇ ರಸಭಾವವೆಂದು ಸಾಮಾನ್ಯವಾಗಿ ಹೇಳಬಹುದು. ಆದರ ರಸಭಾವದಲ್ಲಿ ಸಂವೇದನೆಯೊಂದೇ ಅಲ್ಲದೆ ಪರಾವಲಂಬನ ಮತ್ತು ಅಂಗಕ್ಷೋಭೆ ಎಂಬ ಬೇರೆ ಎರಡು ಲಕ್ಷಣಗಳೂ ಉಂಟು. ಪ್ರವೃತ್ತಿಗಳು ಪ್ರಚೋದನೆಗೊಂಡಾಗ ಮಾತ್ರ ರಸಭಾವವು ಮೈದೋರುತ್ತದೆ. ನಾಯಿಯು ತಿನ್ನುತ್ತಿರುವ ಎಲುಬನ್ನು ತೆಗೆಯಹೋದರೆ, ಅಥವಾ ಅದರ ಕುನ್ನಿಗಳನ್ನು ಕೆಣಕಿದರೆ ಅದು ಸಿಟ್ಟಿಗೇಳುತ್ತದೆ. ಇಲ್ಲಿ ಕ್ರೋಧವೆಂಬ ರಸಭಾವವು ಉಂಟಾಗಲಿಕ್ಕೆ ಆಹಾರ ಅಥವಾ ಪಾಲನ ಪ್ರವೃತ್ತಿಯು ಮೊದಲು ಪ್ರೇರಿತವಾಗಿದ್ದೇ ಕಾರಣವು. ರಸಭಾವವು ಉದ್ರೇಕಗೊಂಡಾಗ ದೇಹದಲ್ಲಿ ಕೆಲವು ಬದಲಾವಣೆಗಳು ಆಗುವುದೂ ಉಂಟು. ಮನುಷ್ಯನು ಸಿಟ್ಟಿಗೆದ್ದಾಗ ಹಲ್ಲುಗಳನ್ನು ಕಡಿಯುತ್ತಾನೆ; ಅವನ ಕಣ್ಣುಗಳು ಕೆಂಪಗಾಗುತ್ತವೆ; ಮೂಗು ಹಿಗ್ಗುತ್ತದೆ ಮತ್ತು ರಭಸದಿಂದ ಕೆಲಸ ಮಾಡುತ್ತಾನೆ. ಅವನು ಇಂಥ ಸ್ಥಿತಿಯನ್ನು ಅನುಭವಿಸುವಾಗ ಶರೀರದೊಳಗಿನ ಕೆಲವು ಗ್ರಂಥಿಗಳು ಒಂದು ರಸ ಪದಾರ್ಥವನ್ನು ಹೊರಚಲ್ಲುತ್ತವೆ. ಈ ಪದಾರ್ಥವು ನಾಡಿಗಳಲ್ಲಿ ಪಸರಿಸಿ ರಕ್ತದಲ್ಲಿ ಬೆರತು ಇಡೀ ದೇಹವನ್ನೇ ವ್ಯಾಪಿಸುತ್ತದೆ. ಆಗ ಉಸಿರಾಡಿಸುವು

ದರಲ್ಲಿಯೂ ರಕ್ತ ಹರಿದಾಡುವುದರಲ್ಲಿಯೂ ಬದಲಾವಣೆಗಳು ಕಂಡು ಬರುತ್ತವೆ. ಮತ್ತು ಸ್ನಾಯುಗಳಲ್ಲಿ ಚೈತನ್ಯವುಂಟಾಗುತ್ತದೆ. ರಸಭಾವದ ಸೆಳವಿಗೆ ಸಿಕ್ಕ ಮನುಷ್ಯನು ಅನೇಕ ಬಾರಿ ಅಗಾಧವಾದ ಕೆಲಸಗಳನ್ನು ಮಾಡುತ್ತಾನೆ.

ಅಂಗವಿಕಾರ ಅಥವಾ ಅಂಗಕ್ಷೋಭೆಯೇ ರಸಭಾವವೆಂದು ವರ್ತನ ವಾದಿಗಳು ಪ್ರತಿಪಾದಿಸುತ್ತಾರೆ. ಜೇಮ್ಸ್ ಮತ್ತು ಲ್ಯಾಂಗ್ ಎಂಬವರು ಈ ವಾದವನ್ನು ಮೊದಲು ಹೂಡಿದರು. ರಸಭಾವದಿಂದ ಅಂಗಕ್ಷೋಭೆ ಉಂಟಾಗುವುದಿಲ್ಲ, ಅಂಗಕ್ಷೋಭೆಯಿಂದ ರಸಭಾವ ಉಂಟಾಗುವುದೆಂದು ಅವರು ಹೇಳುತ್ತಾರೆ. ಜೇಮ್ಸನು ಇದನ್ನು ಈ ರೀತಿಯಾಗಿ ಉದಾಹರಿಸುತ್ತಾನೆ. "ನಾವು ದುಃಖದಿಂದ ಅಳುವುದಿಲ್ಲ, ಅಳುವುದರಿಂದ ನಮಗೆ ದುಃಖ ಬರುತ್ತದೆ, ಸಿಟ್ಟಿನಿಂದ ಹೊಡೆಯುವುದಿಲ್ಲ, ಹೊಡೆಯುವುದರಿಂದ ಸಿಟ್ಟು ಬರುತ್ತದೆ; ಭಯದಿಂದ ನಡುಗುವುದಿಲ್ಲ, ನಡುಗುವುದರಿಂದ ಭಯ ಬರುತ್ತದೆ' ಆದರೆ ವರ್ತನವಾದಿಗಳ ಅಭಿಪ್ರಾಯವು ಸರಿಯಾದುದಲ್ಲ ಯಾಕೆಂದರೆ ಮೊದಲನೆಯದಾಗಿ ರಸಭಾವವು ಯಾವಾಗಲಾದರೂ ಪ್ರವೃತ್ತಿಯನ್ನೇ ಅವಲಂಬಿಸಿರುತ್ತದೆ. ಜೇಮ್ಸನ ಮತದ ಪ್ರಕಾರ ತಾಯಿ ಬೆಕ್ಕಿಗೆ ತನ್ನ ಮರಿಗಳನ್ನು ಯಾರಾದರೂ ಒಯ್ಯುವುದನ್ನು ಕಣ್ಣಿನಿಂದ ನೋಡಿದ ಮಾತ್ರಕ್ಕೆ ಕ್ರೋಧವು ಉಂಟಾಗಬೇಕು; ಇದರಲ್ಲಿ ಪಾಲನಪ್ರವೃತ್ತಿಯ ಸಂಬಂಧವೇ ಇಲ್ಲವಂತೆ. ಆದರೆ ನಿಜಸಂಗತಿ ಏನೆಂದರೆ ಪಾಲನಪ್ರವೃತ್ತಿಗೆ ತಡೆಯುಂಟಾದಲ್ಲಿ ಅದು ಸಿಟ್ಟಿಗೇಳುತ್ತದೆ ಎರಡನೆಯದಾಗಿ ರಸಭಾವದಲ್ಲಿ ಕಾರ್ಯಪ್ರಚೋದನೆಯ ಶಕ್ತಿಯೂ ಇರುತ್ತದೆ. ನಿಜವಾದ ಸಿಟ್ಟು ಇಲ್ಲದೆ ಕೇವಲ ಮೂಗು ಅರಳಿಸಿ ದವಡಿ ಕಚ್ಚುವುದರಿಂದ ಕೋಪಾವೇಶವನ್ನು ತಾಳಿದಂತಾಗುವುದಿಲ್ಲ. ಸಿಟ್ಟಿನ ಭರದಲ್ಲಿ ಇದ್ದಾಗ ಬಡಿಯಬೇಕೆಂಬ ಮನೋವೃತ್ತಿಯು ಹುಟ್ಟುತ್ತದೆ. ಮೂರನೆಯದಾಗಿ ರಸಭಾವವು ಒಂದು ವಸ್ತುವಿನಲ್ಲಿ ಆರೋಪಿತವಾಗಿರುತ್ತದೆ. ಸಿಟ್ಟು ಯಾವುದಾದರೊಂದು ವ್ಯಕ್ತಿಯ ಬಗ್ಗೆ ಅಥವಾ ಸಂಗತಿಯ ಬಗ್ಗೆ ಇರುತ್ತದೆ. ಒಟ್ಟಾರೆ ಹೇಳುವುದಾದರೆ ರಸಭಾವದಲ್ಲಿ ಅಂಗವಿಕಾರವೂ ಸಂವೇದನೆಯೂ ಸಂಕಲ್ಪವೂ ಕೂಡಿಯೇ ಇರುವುವು. ಆದರೆ ಸಂವೇದನೆಯೇ —ಭಾವೋದ್ರೇಕವೇ— ಪ್ರಾಧಾನ್ಯ.

ರಸಭಾವದ ಬಗ್ಗೆ ಭಾರತೀಯ* ಅಲಂಕಾರಶಾಸ್ತ್ರಜ್ಞರ ಅಭಿಪ್ರಾಯವು ಬಹುಮಟ್ಟಿಗೆ ಇದೇ ರೀತಿಯದಾಗಿದೆ. ಅನುಭವದಿಂದ ಮನಸ್ಸಿನಲ್ಲಿ ಉಂಟಾದ ಚಿತ್ತವೃತ್ತಿಗೆ 'ಭಾವ'ವೆಂತಲೂ ಭಾವಕ್ಕೆ ಕಾರಣಗಳಾದ ಸಂಗತಿಗಳಿಗೆ 'ವಿಭಾವ'ಗಳೆಂತಲೂ ಭಾವಗಳ ಫಲರೂಪವಾಗಿ ಹೊರಗೆ ತೋರತಕ್ಕ ಶರೀರದ ಚಿಹ್ನ ಮತ್ತು ಕಾರ್ಯಗಳಿಗೆ 'ಅನುಭಾವ'ಗಳೆಂತಲೂ ಅವರು ಅನ್ನುವರು.

**ರಸಭಾವ ಮತ್ತು ಅನುರಾಗ.**—ಅನುರಾಗವು ಮನಸ್ಸಿನ ಒಂದು ಸ್ಥಿರವಾದ ವೃತ್ತಿಯು. ರಸಭಾವವು ಸ್ಥಿರವಾಗಿ ನಿಲ್ಲುವುದಿಲ್ಲ. ಅದು ತಾತ್ಕಾಲಿಕವಾದುದು. ಅದನ್ನು ಪ್ರತ್ಯಕ್ಷ ಅನುಭವಿಸುತ್ತೇವೆ. ಒಂದು ವಸ್ತುವಿನ ಎದುರಿನಲ್ಲಿ ಇದ್ದಾಗ ಅದರ ಬಗೆಗೆ ಕೆಲವೊಂದು ರಸಭಾವಗಳನ್ನು ಅನುಭವಿಸಹಚ್ಚುವ ಮನಸ್ಸಿನ ಸ್ಥಿರವಾದ ಒಲುವಿಗೆ ಅನುರಾಗವೆನ್ನುತ್ತೇವೆ. ರಸಭಾವವನ್ನು ಉದ್ರೇಕಗೊಳಿಸಿದ ವಸ್ತುವು ಕಣ್ಮರೆಯಾದಾಗ ಅದಕ್ಕೆ ಸಂಬಂಧಿಸಿದ ಅನುರಾಗವು ಮನಸ್ಸಿನೊಳಗೆಯೇ ಅವ್ಯಕ್ತ ರೀತಿಯಲ್ಲಿ ಹುದುಗಿಕೊಳ್ಳುತ್ತದೆ. ಒಬ್ಬ ಬಾಲಕನು ಒಂದು ಬೆಕ್ಕನ್ನು ಪದೇ ಪದೇ ಪೀಡಿಸುತ್ತಿದ್ದರೆ ಅವನ ಬಗ್ಗೆ 'ತಿರಸ್ಕಾರ'ವೆಂಬ ಅನುರಾಗವು ಆ ಬೆಕ್ಕಿನಲ್ಲಿ ರೂಪುಗೊಳ್ಳುತ್ತದೆ. ಈ ಅನುರಾಗವು ಬೆಕ್ಕಿನಲ್ಲಿ ಯಾವಾಗಲೂ ಜಾಗ್ರತವಾಗಿರುವುದಿಲ್ಲ. ಆದರೆ ಆ ಹುಡುಗನನ್ನು ಕಂಡಕೂಡಲೆ ಅದು ಕೆರಳುತ್ತದೆ ಮತ್ತು ಆಗ ಕ್ರೋಧವೆಂಬ ರಸಭಾವವನ್ನು ಬೆಕ್ಕು ಅನುಭವಿಸುತ್ತದೆ.

ಅದರಂತೆಯೇ ಒಂದು ವಸ್ತು, ವ್ಯಕ್ತಿ ಅಥವಾ ವಿಚಾರದ ಬಗೆಗೆ ಹುಟ್ಟಿ ಬೆಳೆದ ಅನುರಾಗವು ಅನೇಕ ರಸಭಾವಗಳನ್ನು ಅನುಭವಿಸಹಚ್ಚುವುದು. ಸ್ವದೇಶಾಭಿಮಾನವೆಂಬ ಅನುರಾಗವನ್ನು ಬೆಳೆಯಿಸಿದವನು ತನ್ನ ದೇಶದ ಹೆಚ್ಚಳವನ್ನು ಕಂಡರೆ ಆನಂದಭಾವವನ್ನೂ, ಅದರ ಅಭಿವೃದ್ಧಿ ಅಥವಾ ಸ್ವಾತಂತ್ರ್ಯಕ್ಕೆ ಚ್ಯುತಿ ಉಂಟಾದರೆ ಭಯಭಾವವನ್ನೂ, ಅದರ ವೈರಿಗಳನ್ನು ಕಂಡರೆ ಕ್ರೋಧಭಾವವನ್ನೂ, ಅದರ ಗೌರವಕ್ಕೆ ಕಲಂಕ

* ಕನ್ನಡ ಕೈಪಿಡಿ (ಮೈಸೂರ ವಿಶ್ವವಿದ್ಯಾನಿಲಯದ ಪ್ರಕಟನೆ) ರಸಪ್ರಕರಣ, ಪುಟ ೨೨೪-೨೪೬ ನೋಡಿ. ಆದರೆ "ರಸ"ಗಳು (emotions) ಒಂಬತ್ತೇ ಆಗಿರದೆ ಅನೇಕವಿರುವುವೆಂದು ಈಗಿನ ಮನಶ್ಶಾಸ್ತ್ರದ ಅಭಿಪ್ರಾಯ.

ಹತ್ತಿದರೆ ವಿಷಾದಭಾವವನ್ನೂ, ಮತ್ತು ಅದರ ಕಲ್ಯಾಣಕ್ಕಾಗಿ ಸ್ವಾರ್ಥತ್ಯಾಗ ಮಾಡುವುದರಿಂದ ಭಕ್ತಿಭಾವವನ್ನೂ ಅನುಭವಿಸುತ್ತಾನೆ. ಹೀಗೆ ಒಂದು ವಸ್ತುವಿನ ಬಗೆಗೆ ಸುವ್ಯವಸ್ಥಿತಗೊಂಡ ಅನೇಕ ರಸಭಾವಗಳ ಸಂಯೋಜನೆಯೆ ಅನುರಾಗವೆಂದು ಹೇಳಬಹುದು.

**ರಸಭಾವ ಮತ್ತು ಶಿಕ್ಷಣ.—** ರಸಭಾವಗಳು ಕಾರ್ಯಪ್ರವರ್ತನೆಗೆ ಪ್ರಚಂಡ ಬೆಂಬಲವನ್ನೀಯುವುದರಿಂದ ಶಿಕ್ಷಕನು ಅವುಗಳ ಉಪಯೋಗವನ್ನು ಅರಿತವನಾಗಿರಬೇಕು. ಪ್ರಪಂಚದಲ್ಲಿ ಬುದ್ಧಿಜೀವಿಗಳಿಗಿಂತ ಭಾವಜೀವಿಗಳೇ ಹೆಚ್ಚು. ರಸಭಾವವು ಇರದಿದ್ದರೆ ಜೀವನವು ನೀರಸವಾಗುತ್ತಿತ್ತು. ರಸಭಾವ ರಹಿತ ಜೀವನ ನಾಟಕವು ಮೂಕ ಚಲಚಿತ್ರದಂತೆ ರುಚಿಯಿಲ್ಲದ್ದು; ರಸಭಾವ ಯುಕ್ತ ಜೀವನ ನಾಟಕವು ಮಾತಾಡುವ ಚಲಚಿತ್ರದಂತೆ ರುಚಿಯುಳ್ಳದ್ದು. ದೊಡ್ಡ ದೊಡ್ಡ ಆಂದೋಲನಗಳೂ, ದೊಡ್ಡ ದೊಡ್ಡ ಕಲಾಕೃತಿಗಳೂ ರಸಭಾವಗಳಿಂದಲೇ ಪೋಷಿಸಲ್ಪಡುತ್ತವೆ.

ಈಗಿನ ಶಿಕ್ಷಣಯೋಜನೆಗಳು ಭಾವಶಿಕ್ಷಣವನ್ನೂ ಉಪೇಕ್ಷಿಸದಿದ್ದರೂ ಅದಕ್ಕೆ ಕೊಡಬೇಕಾದ ಮಹತ್ವವನ್ನು ಕೊಟ್ಟಿರುವುದಿಲ್ಲ, ಬೌದ್ಧಿಕ ಶಿಕ್ಷಣವೇ ಅಗ್ರಸ್ಥಾನದಲ್ಲಿದೆ ಮಹತ್ವದ ವಿಷಯವಾದ ಭಾವಶಿಕ್ಷಣವನ್ನು ಸಾಲೆಯಲ್ಲಿ ಹೇಗೆ ಕೊಡಬಹುದೆಂಬುದರ ಬಗೆಗೆ ಇಲ್ಲಿ ಕೆಲವು ಮಾತುಗಳನ್ನು ಹೇಳುವ. ಗಣಿತ ವಿಜ್ಞಾನ ಮೊದವಾದ ಬೌದ್ಧಿಕ ವಿಷಯಗಳನ್ನು ಕಲಿಸುವಾಗ ಅವುಗಳ ಬಗೆಗೆ ಮಕ್ಕಳಲ್ಲಿ ಕುತೂಹಲ ಮತ್ತು ಪ್ರಾವೀಣ್ಯತೆಯ ಅಹಂಭಾವ ಉಂಟಾಗುವಂತೆ ಮಾಡಿದರೆ ಕಲಿಸುವುದು ಯಶಸ್ವಿಯಾಗುವುದು.

ಆದರೆ ಮುಖ್ಯವಾದ ಭಾವಶಿಕ್ಷಣವೆಂದರೆ ವಿದ್ಯಾರ್ಥಿಗಳಲ್ಲಿ ಸೌಂದರ್ಯ ಪ್ರೇಮವನ್ನೂ ಕಲೋಪಾಸನೆಯ ವೃತ್ತಿಯನ್ನೂ ಹುಟ್ಟಿಸುವುದು. ಕಾವ್ಯ, ಗಾಯನ, ಶಿಲ್ಪ, ಚಿತ್ರ ಮೊದಲಾದ ಕಲೆಗಳನ್ನು ಹೇಗೆ ಅನುಮೋದಿಸಬೇಕೆಂಬುದನ್ನು (Appreciate) ಅಧ್ಯಾಪಕರು ಮಕ್ಕಳಿಗೆ ಕಲಿಸಬೇಕು. ಸೌಂದರ್ಯದ ವ್ಯಾಖ್ಯೆಯನ್ನು ಹೇಳುವುದು ಬಹು ಕಠಿಣ. ಅದು ರಸಭಾವಕ್ಕೆ ಸಂಬಂಧಪಟ್ಟ ವಿಷಯ. ಸೌಂದರ್ಯದಲ್ಲಿ ಎಂದೂ ಅಚ್ಚಳಿಯದ ಸೊಬಗಿದೆ. ಆ ಸೊಬಗಿನಲ್ಲಿ ಆನಂದರಸವನ್ನು ಬೀರುವ ಸಾಮರ್ಥ್ಯವಿದೆ.

ಚಂದದ ಲಕ್ಷಣಗಳನ್ನು ವಿದ್ಯಾರ್ಥಿಗಳ ಎದುರಿಗೆ ಒಂದೊಂದನ್ನಾಗಿ ಬಿಡಿಸಿ ತೋರಿಸಲಿಕ್ಕೆ ಬರುವಂತಿಲ್ಲ. ಒಂದು ಸುಂದರ ವಸ್ತುವನ್ನು ತಕ್ಕೊಂಡು "ಇದರಲ್ಲಿ ಇಂತಿಂಥ ಗುಣಗಳಿವೆ. ಆದುದರಿಂದ ಇದರಲ್ಲಿ ಸೌಂದರ್ಯವಿದೆ" ಎಂದು ಹೇಳಲಿಕ್ಕೆ ಬಾರದು. ಸೌಂದರ್ಯವು ವಿಮರ್ಶೆಯ ಒರೆಗಲ್ಲ ಮೇಲೆ ನಿಂತಿರುವುದಿಲ್ಲ. ಅದು ಸ್ವಾನುಭವದಿಂದ ತಿಳಿದುಕೊಳ್ಳ ಬೇಕಾದ ಒಂದು ಸಂಗತಿಯು. ಗಾಯನದ ಮಾಧುರ್ಯವನ್ನು ಆಡಿ ತೋರಿ ಸಲಿಕ್ಕೆ ಬರುವುದಿಲ್ಲ. ಅದರಂತೆಯೆ ಒಂದು ಕವಿತೆಯನ್ನು ಕಲಿಸುವಾಗ ಶಿಕ್ಷಕನು ಅದರಲ್ಲಿರುವ ಸೌಂದರ್ಯಭಾಗವು ಯಾವುದೆಂದು ಹೇಳಬಹುದು, ಕೇಳಬಹುದು, ಆದರೆ "ಏಕೆ" ಎಂದು ಪ್ರಶ್ನಿಸಬಾರದು. ಯಾಕೆಂದರೆ ಸೌಂದರ್ಯವನ್ನು ತರ್ಕದಿಂದ ತಿಂಜಲಿಕ್ಕೆ ಬರುವುದಿಲ್ಲ ಇಲ್ಲಿ ಪ್ರಶ್ನೋತ್ತರ ರೀತಿಯು ಸಲ್ಲದು ಸೌಂದರ್ಯ ರಸಾಸ್ವಾದವು ಮೂಕ ಕಂಡ ಕನಸಿನಂತೆ ಕಾವ್ಯಾನುಮೋದನೆಯನ್ನು ಅಥವಾ ಸೌಂದರ್ಯಾನುಮೋದನೆಯನ್ನು (Appreciation) ಕಲಿಸುವಾಗ ಅಧ್ಯಾಪಕನಿಗೆ ಸಹಾನುಭೂತಿ ಸೂಚನೆ ಗಳು ಸಹಾಯವಾಗುತ್ತವೆ. ಕಾವ್ಯವು ಶಿಕ್ಷಕನಿಗೆ ಸೇರುತ್ತಿದ್ದರೆ ತನ್ನ ಭಾವೋದ್ರೇಕಗಳನ್ನು ಮಕ್ಕಳಲ್ಲಿ ಪ್ರಕಟಮಾಡಬಲ್ಲನು. ಶಿಕ್ಷಕನಿಗೆ ತಾನು ಕಲಿಸುವ ಕವಿತೆಯು ರುಚಿಸುತ್ತಿದ್ದರೆ ಬಾಲಕರಿಗೂ ಅದು ರುಚಿಕಟ್ಟಾಗುವಂತೆ ಮಾಡಬಲ್ಲನು. ಕಾವ್ಯಶಿಕ್ಷಣದಲ್ಲಿ ಡಾಂಭಿಕತನವು ನಡೆಯುವುದಿಲ್ಲ. ಪದ್ಯ ಕಲಿಸುವ ಪದ್ಧತಿಗೂ ಗದ್ಯ ಕಲಿಸುವ ಪದ್ಧತಿಗೂ ಬಿಡುತ್ತದೆ. ಕಾವ್ಯವು ಭಾವಪ್ರಧಾನವು. ವಾಚನವು ವಿಚಾರಪ್ರಧಾನವು. ಕವಿಯು ತನ್ನ ಹೃದ್ಗತವನ್ನು ಸೂಚಿಸಲಿಕ್ಕೆ ರೂಪಕ ಅಲಂಕಾರಗಳನ್ನೂ ಉಪಮಾನ ಉಪ ಮೇಯಗಳನ್ನೂ ಉಪಯೋಗಿಸುತ್ತಾನೆ. ವಿದ್ಯಾರ್ಥಿಗಳು ಅಂಥವುಗಳನ್ನು ಕಂಡುಹಿಡಿಯಲಿಕ್ಕೆ ಕಲಿಯಬೇಕು.

ಸೌಂದರ್ಯವು ಮುಖ್ಯವಾಗಿ ಕುತೂಹಲಪ್ರವೃತ್ತಿಗೆ ಸಂಬಂಧಪಟ್ಟಿದೆ. ಸುಂದರ ವಸ್ತುವನ್ನು ಎಷ್ಟು ಬಾರಿ ನೋಡಿದರೂ ಕುತೂಹಲವು ತೃಪ್ತಿ ಹೊಂದುವುದಿಲ್ಲ. ಸುಂದರ ವಿಷಯದ ಬಗೆಗೆ ಮಕ್ಕಳಲ್ಲಿ ಕುತೂಹಲ ವನ್ನು ಉಂಟುಮಾಡಬೇಕಾದರೆ ಅದರಲ್ಲಿರುವ ಅಗಾಧತೆ, ನವೀನತೆ ಮತ್ತು ಬದಲಾವಣೆಗಳ ಕಡೆಗೆ ಅವರ ದೃಷ್ಟಿಯನ್ನು ಎಳೆಯಬೇಕು.

ಅದಲ್ಲದೆ ಶಿಕ್ಷಕನು ವಿವಿಧ ಕಲೆಗಳ ಬಗೆಗೆ ಮಕ್ಕಳಲ್ಲಿ ಅನುರಾಗವನ್ನು ಹುಟ್ಟಿಸಿದರೆ ಎಷ್ಟೋ ಕಾರ್ಯ ಮಾಡಿದಂತಾಗುವುದು. ಕಲೆಯಲ್ಲಿ ರುಚಿಯುಳ್ಳವನು ಸ್ವತಃ ಆ ಕಲೆಯನ್ನು ಸಾಧಿಸುವನು, ಆದರೆ ಅದರಲ್ಲಿ ಅನುರಾಗವುಳ್ಳವನು ಒಂದು ವೇಳೆ ಅದನ್ನು ಸಾಧಿಸದಿದ್ದರೂ ಆ ಕಲೆಯನ್ನು ಪೋಷಿಸುವನು, ಕಲೋಪಾಸಕರನ್ನು ಪ್ರೋತ್ಸಾಹಿಸುವನು

ಭಾವಶಿಕ್ಷಣವು ಕೇವಲ ಸೌಂದರ್ಯಾನುಮೋದನೆಗೆ ಸಂಬಂಧಿಸಿಲ್ಲ. ಶೀಲರಚನೆಯಲ್ಲಿಯೂ ಅದು ಮಹತ್ವವುಳ್ಳದ್ದು.* ಭಾವೋದ್ರೇಕಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದನ್ನು ಮಕ್ಕಳು ಕಲಿಯಬೇಕು. ಈ ವಿಷಯದಲ್ಲಿ ತಂದೆ-ತಾಯಿಗಳ ಹೊಣೆಯು ಹೆಚ್ಚು. ಚಿಕ್ಕಮಕ್ಕಳು ಯಾವ ತರಹದ ಭಾವಶಿಕ್ಷಣವನ್ನು ಮನೆಯಲ್ಲಿ ಹೊಂದುವರೋ ಆ ತರಹದ ವ್ಯಕ್ತಿಗಳಾಗಿ ಮುಂದೆ ಅವರು ಬೆಳೆಯುವರೆಂಬುದನ್ನು ಫ್ರಾಯ್ಡ್‌ನು ಪರಿಶೋಧನೆಯಿಂದ ನಿರ್ಣಯಿಸಿರುವನು ಅಯೋಗ್ಯವಾದುದನ್ನು ಅಲ್ಲಗಳೆಯಲಿಕ್ಕೂ ಯೋಗ್ಯವಾದುದನ್ನು ಮೆಚ್ಚಲಿಕ್ಕೂ ಶಾಲೆಯಲ್ಲಿ ಮಕ್ಕಳು ಕಲಿಯಬಲ್ಲರು. ಇಲ್ಲಿ ಶಿಕ್ಷಕನು ಅವರಿಗೆ ಮಾರ್ಗದರ್ಶಕನಾಗಬೇಕು. ಭಾವವು ಉದ್ರೇಕಗೊಂಡಾಗ ಬುದ್ಧಿಯು ಮಾಯವಾಗುತ್ತದೆ. ಭಾವಪರವಶನಾದನು ಅಹಿತವಾದ ಕಾರ್ಯಗಳನ್ನು ಮಾಡುವುದುಂಟು ಮಕ್ಕಳು ಇದನ್ನು ಅರಿತವರಾಗಿರಬೇಕು. ಸದಸದ್ವಿವೇಕ ಬುದ್ಧಿಯನ್ನೂ ಶಾಂತವೃತ್ತಿಯನ್ನೂ ಅವರಲ್ಲಿ ಬೆಳೆಯಿಸಬೇಕು. ಯಾಕಂದರೆ ಅವುಗಳ ಸಹಾಯದಿಂದ ಪ್ರಕ್ಷುಬ್ಧ ರಸಭಾವಗಳನ್ನು ಅವರು ಬಿಗಿಹಿಡಿಯಲು ಶಕ್ತರಾಗುವರು. ಅರಿಷಡ್ವರ್ಗವನ್ನು —ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು—ಗೆಲ್ಲುವ ಉಪಾಯಗಳನ್ನು ಶಿಕ್ಷಕನು ಸೂಚಿಸಬಲ್ಲನು. ಶಾಲೆಯ ಸನ್ನಿವೇಶಗಳ ಮುಖಾಂತರ, ಮುಖ್ಯವಾಗಿ ಆಟಗಳನ್ನು ಆಡಿಸುವಾಗಲೂ ಮಹಾಪುರುಷ ಜೀವನ ಚರಿತ್ರೆಗಳನ್ನು ಕಲಿಸುವಾಗಲೂ ಶೀಲಸಂವರ್ಧನೆಗೆ ಸಂಬಂಧಪಟ್ಟ ಭಾವಶಿಕ್ಷಣವನ್ನು ಉಪಾಧ್ಯಾಯರು ಕೊಡಬಲ್ಲರು.

* "ಮಕ್ಕಳ ಭಾವಜೀವನ" (ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕಮಾಲೆ) ಎಂಬ ಪುಸ್ತಕದಲ್ಲಿ ಭಾವಶಿಕ್ಷಣದ ಬಗೆಗೆ ಕೆಲವು ಉಪಯುಕ್ತ ಸೂಚನೆಗಳಿವೆ.

# ಅನುಬಂಧ

## ೧

## ಶಿಕ್ಷಣದ ವರ್ಗಾಂತರ (Transfer of Training)

**ವರ್ಗಾಂತರದ ಸಮಸ್ಯೆ.**— ಶಾಲೆ ಕಾಲೇಜಗಳಲ್ಲಿ ಶಿಕ್ಷಣ ಹೊಂದುವುದರಿಂದ ಮನುಷ್ಯನ ಬುದ್ಧಿಸಾಮರ್ಥ್ಯ, ವಿಚಾರಸರಣಿ ಮತ್ತು ಸ್ವಭಾವಗಳಲ್ಲಿ ವ್ಯತ್ಯಾಸವು ಉಂಟಾಗುವುದೆಂದು ಸಾಮಾನ್ಯ ನಂಬುಗೆ ಇದೆ. ಅಂದರೆ ಶಾಲೆಯಲ್ಲಿ ಕಲಿಯುವ ವಿಷಯಗಳು ಏನೇ ಇರಲಿ ಅವುಗಳ ಸಾಮಾನ್ಯ ಪರಿಣಾಮವು ಕಲಿಯುವವರ ಮನಸ್ಸಿನ ಮೇಲೆ ಆಗುವುದೆಂಬುದೇ ಈ ನಂಬುಗೆಗೆ ಆಧಾರ. ಒಂದೊಂದು ವಿಷಯದ ಅಭ್ಯಾಸದಿಂದ ಮನಸ್ಸಿನ ಒಂದೊಂದು ಶಕ್ತಿಯು ತರಬೇತು ಹೊಂದುವುದೆಂಬ ವಿಚಾರವು ಹತ್ತೊಂಬತ್ತನೆಯ ಶತಮಾನದ ಮಧ್ಯದ ವರೆಗೆ ಇಂಗ್ಲಂಡ ಮೊದಲಾದ ದೇಶಗಳಲ್ಲಿ ಪ್ರಚಾರದಲ್ಲಿತ್ತು. ಗಣಿತ ಕಲಿಯುವುದರಿಂದ ತರ್ಕಶಕ್ತಿಯೂ ಸಾಹಿತ್ಯದ ಅಭ್ಯಾಸದಿಂದ ಕಲ್ಪನಾಶಕ್ತಿಯೂ ವಿಜ್ಞಾನದಿಂದ ನಿರೀಕ್ಷಣಶಕ್ತಿಯೂ ವಿಷಯಗಳನ್ನು ಬಾಯಿಪಾಠ ಮಾಡುವುದರಿಂದ ಸ್ಮರಣಶಕ್ತಿಯೂ ಹೆಚ್ಚುವುದೆಂದು ಅವರು ನಂಬಿದ್ದರು. ಒಂದು ವಿಶಿಷ್ಟ ವಿಷಯದಲ್ಲಿ ಮನಸ್ಸು ತರಬೇತು ಹೊಂದಿದರೆ ಅದರ ಉಪಯೋಗವು ಮತ್ತೊಂದು ವಿಷಯವನ್ನು ಕಲಿಯುವಾಗ ಆಗುವುದೆಂದು ಅವರು ತಿಳಿದಿದ್ದರು. ಶಿಕ್ಷಣದಿಂದ ಮನಸ್ಸಿನ ಮೇಲೆ ಆಗುವ ಈ ತರಹದ ಅಪ್ರತ್ಯಕ್ಷ ಪರಿಣಾಮಕ್ಕೆ ಶಿಕ್ಷಣದ ವರ್ಗಾಂತರ (Transfer of Training) ಎನ್ನುವರು. ವರ್ಗಾಂತರ ಸಮಸ್ಯೆಯಲ್ಲಿ ಯಾವ ತತ್ವಗಳು ಅಡಕವಾಗಿವೆ ಮತ್ತು ಆಧುನಿಕ ಮನಶ್ಶಾಸ್ತ್ರಜ್ಞರು ಅದರ ಬಗ್ಗೆ ಯಾವ ಅಭಿಪ್ರಾಯವನ್ನು ಪಡುತ್ತಾರೆ ಎಂಬುದನ್ನು ಸ್ವಲ್ಪ ವಿವೇಚಿಸುವ.

**ತಾದಾತ್ಮ್ಯ ವಾದ** (Identity Theory).— ವಿಂಚ್ ಎಂಬವನು ಇತಿಹಾಸದ ವಾಕ್ಯಾವಳಿಗಳನ್ನು ಬಾಯಿಪಾಠ ಮಾಡುವುದರಲ್ಲಿ ಅಷ್ಟೇ ಸಾಮರ್ಥ್ಯವನ್ನು ತೋರಿಸಿದ ಶಾಲೆಯ ಕೆಲವು ಹುಡುಗರಲ್ಲಿ ಎರಡು ಗುಂಪು

ಗಳನ್ನು ಮಾಡಿದನು. ಒಂದು ಗುಂಪಿನವರಿಗೆ ಮಾತ್ರ ಕೆಲವು ದಿವಸಗಳ ವರೆಗೆ ಕವಿತೆಯನ್ನು ಬಾಯಿಪಾಠ ಮಾಡುವ ರೂಢಿಯನ್ನು ಮಾಡಿಸಿದನು. ಅನಂತರ ಈ ಗುಂಪಿನವರಿಗೂ ಮತ್ತು ರೂಢಿ ಮಾಡದ ಎರಡನೆಯ ಗುಂಪಿನವರಿಗೂ ಇತಿಹಾಸದ ಪಾಠಗಳನ್ನು ಬಾಯಿಪಾಠ ಮಾಡಲು ಹೇಳಿದನು. ಈ ಪ್ರಯೋಗದಲ್ಲಿ ರೂಢಿ ಮಾಡಿದ ಗುಂಪಿನ ಹುಡುಗರು ರೂಢಿ ಮಾಡದ ಗುಂಪಿನ ಹುಡುಗರಿಗಿಂತ ಹೆಚ್ಚು ಮೇಲ್ಮೆಯನ್ನು ತೋರಿಸಿದರು. ಮತ್ತೊಂದು ಪ್ರಯೋಗದಲ್ಲಿ ಒಬ್ಬ ನಿರೀಕ್ಷಕನು ಪ್ರಾಥಮಿಕ ಶಾಲೆಯ ಹುಡುಗರಿಗೆ ಗುಣಾಕಾರದ ಬಾಯಿಲೆಕ್ಕಗಳನ್ನು ರೂಢಿ ಮಾಡಿಸಿದ ನಂತರ ಅಂಕಗಣಿತ ಬಿಡಿಸುವುದು, ಶಬ್ದಕೋಶಗಳನ್ನು ಕಲಿಯುವುದು ಮುಂತಾದ ಬೇರೆ ಬೇರೆ ವಿಷಯಗಳಲ್ಲಿ ಪರೀಕ್ಷಣಗಳನ್ನು ಕೈಕೊಳ್ಳಲಾಯಿತು. ರೂಢಿ ಮಾಡಿದ ವಿಷಯಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಮತ್ತು ಕಲಿಯುವ ಪದ್ಧತಿಯು ಒಂದೇ ಇದ್ದ ವಿಷಯಗಳಲ್ಲಿ ಬಾಲಕರು ಪ್ರಗತಿಯನ್ನು ತೋರಿಸಿದರು. ಇದರಿಂದ ಗೊತ್ತಾಗುವುದೇನೆಂದರೆ, ವಿಷಯಗಳಲ್ಲಿ ಅಥವಾ ಕಲಿಯುವ ಕ್ರಮದಲ್ಲಿ ಸಾಮ್ಯವಿದ್ದರೆ ಒಂದು ವಿಷಯದಲ್ಲಿ ಹೊಂದಿದ ತರಬೇತಿನ ಪರಿಣಾಮವು ಮತ್ತೊಂದು ವಿಷಯಕ್ಕೆ ವರ್ಗಾಯಿಸಲ್ಪಡುವುದು.

ಶಿಕ್ಷಣದ ಪರಿಣಾಮವು ವರ್ಗಾಯಿಸಲ್ಪಡುವುದು ಎಂಬ ತತ್ವಕ್ಕೆ ಎರಡು ಸಂಗತಿಗಳು ಆಧಾರವಾಗಿರುವುವೆಂದು ಹೇಳುವರು—ವಸ್ತುನಿಷ್ಠ ಸಾಮ್ಯಗಳು ಮತ್ತು ವ್ಯಕ್ತಿನಿಷ್ಠ ಸಾಮ್ಯಗಳು. ವಸ್ತುನಿಷ್ಠ ಸಾಮ್ಯಗಳೆಂದರೆ ಒಂದನ್ನೊಂದು ಹೋಲುವ ವಿಷಯಗಳಲ್ಲಿ ಇರಬಹುದಾದ ಸಮಾನ ಅಂಶಗಳು ಅಥವಾ ಮನಸ್ಸಿನ ಒಂದೇ ಕ್ರಿಯೆಗೆ ಸಂಬಂಧಪಟ್ಟ ವಿಷಯಗಳು. ಉದಾ— ಐತಿಹಾಸಿಕ ಸಂಗತಿಗಳನ್ನು, ಗದ್ಯಪದ್ಯ ಭಾಗಗಳನ್ನು ಬಾಯಿಪಾಠ ಮಾಡುವುದು. ವ್ಯಕ್ತಿನಿಷ್ಠ ಸಾಮ್ಯಗಳೆಂದರೆ ಕಲಿಯುವವನ ಮನೋವೃತ್ತಿ, ಅವಧಾನ, ಅಭಿರುಚಿ ಮತ್ತು ಕಲಿಯುವ ಪದ್ಧತಿ. ವಿಷಯಗಳು ಬೇರೆ ಬೇರೆ ಇದ್ದರೂ ಅವುಗಳನ್ನು ಅಭ್ಯಾಸಿಸುವಾಗ ಒಬ್ಬ ವ್ಯಕ್ತಿಯು ಸಮನಾದ ಆಸಕ್ತಿಯನ್ನು ತೋರಿಸಬಹುದು ಅಥವಾ ಒಂದೇ ಪದ್ಧತಿಯನ್ನು ಅನುಸರಿಸಬಹುದು.

ಶಿಕ್ಷಣದ ಪರಿಣಾಮವು ವರ್ಗಾಂತರವನ್ನು ಹೊಂದಬೇಕಾದರೆ ವಸ್ತುನಿಷ್ಠ ಅಂಶಗಳ ಸಾಮ್ಯತೆಗಿಂತ ವ್ಯಕ್ತಿನಿಷ್ಠ ಸಾಮ್ಯತೆಯೇ ಹೆಚ್ಚು

ಮಹತ್ವವುಳ್ಳದ್ದೆಂದು ಪ್ರಾಯೋಗಿಕ ಮನಶ್ಶಾಸ್ತ್ರಜ್ಞರು ಪ್ರತಿಪಾದಿಸುತ್ತಾರೆ. ಕಲಿಯುವ ವಿಷಯಗಳಲ್ಲಿ ವೈಷಮ್ಯವಿರಬಹುದು. ಆದರೆ ಆ ಎಲ್ಲ ಪ್ರಸಂಗಗಳಲ್ಲಿಯೂ ಒಬ್ಬ ವ್ಯಕ್ತಿಯು ಬುದ್ಧಿಯನ್ನುಪಯೋಗಿಸಿ ತನಗೆ ಯಶಸ್ವಿ ಎನಿಸುವ ಒಂದೇ ಅಭ್ಯಾಸಕ್ರಮವನ್ನು ಅನುಸರಿಸುವುದರಿಂದ ತರಬೇತಿನ ಪರಿಣಾಮವು ಕಂಡುಬರುವುದು. ಕೆಳಗೆ ಕೊಟ್ಟಿರುವ ಉದಾಹರಣೆಗಳಿಂದ ಈ ಮಾತು ಹೆಚ್ಚು ಸ್ಪಷ್ಟವಾಗುವುದು.

ನೀರಿನ ಪಾತಳಿಯ ಬುಡದಲ್ಲಿ ಇಟ್ಟ ಒಂದು ವಸ್ತುವನ್ನು ಗುರಿಕಟ್ಟಿ ಹೊಡೆಯುವ ಪ್ರಯೋಗದಲ್ಲಿ ಹುಡುಗರ ಎರಡು ಗುಂಪುಗಳನ್ನು ಮಾಡಿದ್ದರು. ಪ್ರಕಾಶದ ಕಿರಣಗಳು ನೀರಿನಲ್ಲಿ ಹಾಯ್ದು ಹೋಗುವಾಗ ವಕ್ರಗತಿಯನ್ನು ಹೊಂದುವುವೆಂಬುದನ್ನು ಒಂದು ಗುಂಪಿನ ಹುಡುಗರಿಗೆ ತಿಳಿಸಿದ್ದರು. ಈ ಎರಡೂ ಗುಂಪಿನಲ್ಲಿ ಸ್ಪರ್ಧೆ ನಡೆದಾಗ, ಕಿರಣಗಳ ಗತಿಯ ತತ್ವವನ್ನು ಅರಿತಿದ್ದ ಹುಡುಗರು ನೀರೊಳಗೆ ಗುರಿ ಹೊಡೆಯುವುದರಲ್ಲಿ ಬೇಗನೆ ಕೌಶಲ್ಯವನ್ನು ತೋರಿಸಿದರು. ಯಾಕೆಂದರೆ ಅವರು ಬುದ್ಧಿಯುತ ಕ್ರಮವನ್ನು ಅನುಸರಿಸಿದರು.

ವಸ್ತುನಿಷ್ಠ ಸಾಮ್ಯದ ತತ್ವವು ನಿರಾಧಾರವೆಂದೂ ಅಭಿರುಚಿ ತತ್ವವೇ ಸರಿಯಾದದ್ದೆಂದೂ ಕೆಳಗಿನ ಪ್ರಯೋಗದಿಂದ ಸಿದ್ಧವಾಗುತ್ತದೆ. ಪ್ರೊ॥ ಕಾಯಲರನು ಬೂದಿ ಬಣ್ಣದ ಎರಡು ತಾಟುಗಳಲ್ಲಿ ಕೋಳಿಗಳಿಗೆ ಆಹಾರವನ್ನು ಇಡುತ್ತಿದ್ದನು. ಒಂದು ತಾಟಿನ ಬಣ್ಣವು ಮಂದವಾಗಿತ್ತು. ಎರಡನೆಯ ತಾಟು ಹೊಳೆಯುತ್ತಿತ್ತು. ಕೋಳಿಗಳು ಹೊಳೆಯುವ ತಾಟನ್ನು ಆರಿಸಿದಾಗ ಮಾತ್ರ ಆಹಾರ ತಿನ್ನಲಿಕ್ಕೆ ಅವುಗಳನ್ನು ಬಿಡುತ್ತಿದ್ದನು. ಮತ್ತು ಮಂದ ಬಣ್ಣದ ತಾಟನ್ನು ಆರಿಸಿದಾಗ ಅವುಗಳನ್ನು ಚದುರಿಸುತ್ತಿದ್ದನು. ಕೋಳಿಗಳಿಗೆ ಇದು ರೂಢಿಯಾದ ಮೇಲೆ ಅದರ ಪರಿಣಾಮವನ್ನು ಪರೀಕ್ಷಿಸಬೇಕೆಂದು ಒಮ್ಮೆ ಮಂದ ಬಣ್ಣದ ತಾಟಿನ ಬದಲು ಎರಡನೆಯ ತಾಟಿಗಿಂತಲೂ ಹೆಚ್ಚು ಹೊಳೆಯುವ ತಾಟಿನಲ್ಲಿ ಆಹಾರವನ್ನು ಇಟ್ಟಿದ್ದನು. ಆ ಪ್ರಸಂಗದಲ್ಲಿ ಕೋಳಿಗಳು ಪೂರ್ವದ ತಾಟನ್ನು ಬಿಟ್ಟು ಹೆಚ್ಚು ಹೊಳೆಯುತ್ತಿದ್ದ ಹೊಸ ತಾಟನ್ನೇ ಆರಿಸಿ ಆಹಾರವನ್ನು ತಿಂದವು. ಮುಂದೆ ನಡೆಯಿಸಿದ ಇಂಥ

ಪರೀಕ್ಷಣಗಳಲ್ಲಿ ಅನೇಕ ಬಾರಿ ಅವು ಹಾಗೆಯೇ ವರ್ತಿಸಿದವು. ಸಮಾನ ಅಂಶದ ತತ್ವವು ನಿಜವಾಗಿದ್ದರೆ ಕೋಳಿಗಳು ಬದಲಾಗದೆ ಇದ್ದ ಎರಡನೆಯ ತಾಟನ್ನೇ ಆರಿಸಬೇಕಾಗಿತ್ತು. ಆದರೆ ಅವು ಹಾಗೆ ಮಾಡಲಿಲ್ಲ. ಪರೀಕ್ಷೆಯ ಪ್ರಯೋಗಗಳಲ್ಲಿ ಅವು ಅಂತರ್ದೃಷ್ಟಿಯಿಂದ ಸಂದರ್ಭಗಳನ್ನು ಪರಿಶೀಲಿಸಿ ಯೋಗ್ಯವಾದುದನ್ನೇ ಮಾಡಿದವು. ಆಹಾರ ಸಂಪಾದನೆಯಲ್ಲಿ ಅಭಿರುಚಿ ಇದ್ದುದರಿಂದಲೇ ಕೋಳಿಗಳಿಗೆ ಅಂತರ್ದೃಷ್ಟಿಯು ಉಂಟಾಯಿತು.

ಮೇಲಿನ ಪ್ರಯೋಗಗಳಿಂದ ಕಂಡುಬರುವುದೇನೆಂದರೆ, ಸಾಲೆಯಲ್ಲಿ ವಿಷಯಗಳನ್ನು ವಿದ್ಯಾರ್ಥಿಗಳ ಅಭಿರುಚಿ ಮತ್ತು ಶಕ್ತಿಗಳಿಗೆ ಹೊಂದಿಕೆಯಾಗುವಂತೆ ಮಾರ್ಪಡಿಸಿ ಕಲಿಸಿದರೆ ಅದರ ಪರಿಣಾಮವು ಅವರ ಮನಸ್ಸಿನ ಮೇಲೆ ಶಾಶ್ವತವಾಗಿ ಉಳಿಯುವುದು ನಿಶ್ಚಯ. ಆದುದರಿಂದ ಕಲಿಯುವ ವಿಷಯಕ್ಕಿಂತ ಕಲಿಸುವ ಪದ್ಧತಿಯು ಹೆಚ್ಚು ಮಹತ್ವವುಳ್ಳದ್ದು.

**ಅನುರಾಗಗಳು.—** ತತ್ಸಾಮ್ಯವಾದವನ್ನು ಆಧುನಿಕ ಮನಶ್ಶಾಸ್ತ್ರಜ್ಞರು ಒಪ್ಪುವುದಿಲ್ಲ. ಯಾಕೆಂದರೆ ಅವರು ನಿರಾಕರಿಸಿರುವ ಮನಸ್ಸಿನ "ಶಕ್ತಿ"ವಾದವನ್ನು ಅದು ಅವಲಂಬಿಸಿದೆ ಮನಸ್ಸಿನಲ್ಲಿ ಸ್ಮರಣಶಕ್ತಿ ಕಲ್ಪನಾಶಕ್ತಿ, ನಿರೀಕ್ಷಣಶಕ್ತಿ, ಅನುಮಾನಶಕ್ತಿ ಮೊದಲಾದ "ಶಕ್ತಿ"ಗಳು ಉಂಟೆಂಬ ತತ್ವವನ್ನು ಅವರು ನಂಬುವುದಿಲ್ಲ. ವರ್ಗಾಂತರ ಸಮಸ್ಯೆಯನ್ನು ಕುರಿತು ನಡೆಯಿಸಿದ ಪ್ರಯೋಗಗಳಿಂದಲೂ ಇದು ಸಿದ್ಧವಾಗಿರುವುದಿಲ್ಲ.

ತರಬೇತಿನ ವರ್ಗಾಂತರ ಸಮಸ್ಯೆಯನ್ನು ಅನುರಾಗಗಳ ದೃಷ್ಟಿಯಿಂದ ನೋಡಿದರೆ ಅದರ ಯಥಾರ್ಥ ಕಲ್ಪನೆಯು ಬರುವುದು. ಅನುರಾಗಗಳ ವರ್ಚಸ್ಸು ಮನಸ್ಸಿನಲ್ಲಿ ದೃಢವಾಗಿ ನಿಲ್ಲುವುದರಿಂದ ನಡತೆಯಲ್ಲಿ ಸ್ಥಿರತೆಯು ಕಂಡುಬರುತ್ತದೆ. ಅನುರಾಗಗಳು ಧ್ಯೇಯಸಾಧನೆಯಲ್ಲಿ ರೂಪುಗೊಂಡಿರುವುದರಿಂದ ಎಲ್ಲ ಸಂದರ್ಭಗಳಲ್ಲಿ ಆ ಧ್ಯೇಯವನ್ನೇ ಮುಂದಿಟ್ಟುಕೊಂಡು ಮನಸ್ಸು ವ್ಯವಹರಿಸುತ್ತದೆ. ಆ ಧ್ಯೇಯವು ಕೆಲಸಕ್ಕೆ ಪ್ರೇರಣೆಯಾಗಿರುವುದರಿಂದ ಅದು ಮನಸ್ಸಿನ ದೃಷ್ಟಿಯನ್ನು **ಸಂಪೂರ್ಣವಾಗಿ** ಬದಲಾಯಿಸುತ್ತದೆ. ಆಗ ಮನಸ್ಸು ತನ್ನ ಧ್ಯೇಯಕ್ಕೆ ವ್ಯತಿರಿಕ್ತವಾದುದನ್ನು ಮಾಡಲೊಪ್ಪುವುದಿಲ್ಲ. ಮನುಷ್ಯನ ನಡತೆಯ ಸಮಸ್ಯೆಯನ್ನು ಮತ್ತು ಪ್ರಾಣಿಗಳ ವರ್ತನದ ಸಮಸ್ಯೆ

ಯನ್ನು ಬಿಡಿಸುವಾಗ ಹಲವು ಮನಶ್ಶಾಸ್ತ್ರಜ್ಞರು ತಪ್ಪು ತಿಳಿವಳಿಕೆಯಿಂದ "ರೂಢಿವಾದ"ವನ್ನೇ ಪುರಸ್ಕರಿಸುತ್ತಾರೆ. ರೂಢಿಯೆಂಬುದು, ತಾನು ಉಗಮ ಹೊಂದಿದ ವಿಶಿಷ್ಟ ಸನ್ನಿವೇಶಗಳಲ್ಲಿ ಮಾತ್ರ ವ್ಯಕ್ತವಾಗುವ ಒಂದು ವಿಶೇಷ ಕ್ರಿಯೆಯು. ಆದರೆ ಒಂದು ವಿಶಿಷ್ಟ ಗುಣದ ಬಗ್ಗೆ ಉಂಟಾದ ಅನುರಾಗವು ಎಲ್ಲ ಸಂದರ್ಭಗಳಲ್ಲಿ ವ್ಯಕ್ತವಾಗುವ ಸಾಮಾನ್ಯ ವೃತ್ತಿಯು. ರೂಢಿವಾದವು ಅಪೂರ್ಣವೆಂದೂ ಅನುರಾಗಗಳ ತತ್ವವೇ ಸರಿಯಾದ ನಿರೂಪಣೆಯೆಂದೂ ಕೆಳಗಿನ ಪ್ರಯೋಗದಿಂದ ಕಂಡುಬರುವುದು

ಶಾಲೆಯು ಒಂದು ವಿಷಯವನ್ನು ಅಚ್ಚುಕಟ್ಟುತನದಿಂದ ಮಾಡುವ ರೂಢಿಯು ಉಂಟಾದರೆ ಅದರ ಪರಿಣಾಮವು ಇತರ ವಿಷಯಗಳಲ್ಲಿಯೂ ಕಂಡುಬರುವುದೋ ಎಂಬುದನ್ನು ತಿಳಿದುಕೊಳ್ಳಲಿಕ್ಕೆ ಪ್ರಯೋಗಗಳನ್ನು ನಡೆಯಿಸಿದ್ದರು. ಗಣಿತ ವಿಷಯದಲ್ಲಿ ರೂಢಿಯ ಬಲದಿಂದ ಅಚ್ಚುಕಟ್ಟುತನ ವನ್ನು ತೋರಿಸಿದ ಹುಡುಗರು ಭಾಷಾವಿಷಯದಲ್ಲಿಯಾಗಲಿ ಇತರ ವಿಷಯ ದಲ್ಲಿಯಾಗಲಿ ಅಚ್ಚುಕಟ್ಟುತನವನ್ನು ತೋರಿಸಲಿಲ್ಲ. ದಿನದ ಇತರ ಕಾರ್ಯ ಗಳ ಮೇಲೆಯೂ ಅದರ ಪರಿಣಾಮವು ಕಂಡುಬರಲಿಲ್ಲ. ಆದರೆ ಮತ್ತೊಬ್ಬ ನಿರೀಕ್ಷಕನು ತನ್ನ ಶಾಲೆಯ ಹುಡುಗರಲ್ಲಿ ಅಚ್ಚುಕಟ್ಟುತನದ ಬಗೆಗೆ ಅನುರಾಗ ವನ್ನು ಉಂಟುಮಾಡಿದ್ದರಿಂದ ಆ ಗುಣದ ಮಹತ್ವವನ್ನರಿತು ಅವರು ಬೇಗನೆ ಅದರ ಪರಿಣಾಮುವನ್ನು ತಮ್ಮ ಇತರ ಎಲ್ಲ ಕೆಲಸಗಳಲ್ಲಿ ವ್ಯಕ್ತಮಾಡಹತ್ತಿದರು. ಈ ಪ್ರಯೋಗದಿಂದ ಸಿದ್ಧವಾಗುವುದೇನೆಂದರೆ, ಶಿಕ್ಷಣವು ವರ್ಗಾಂತರವನ್ನು ಹೊಂದಬೇಕಾದರೆ ಅಭ್ಯಾಸ ಮಾಡುವ ವಿಷಯಗಳಿಂದ ಕಲಿಯಬೇಕಾದ ಗುಣಗಳ ಅಥವಾ ತತ್ವಗಳ ಕಡೆಗೆ ಮಕ್ಕಳ ದೃಷ್ಟಿಯನ್ನು ಎಳೆದು ಅವುಗಳ ಬಗೆಗೆ ಅವರಲ್ಲಿ ಅನುರಾಗವನ್ನು ಹುಟ್ಟಿಸಬೇಕು. ಉದಾಹರಣೆಗಾಗಿ ಗಣಿತ ವನ್ನು ಕಲಿಸುವಾಗ ಸತ್ಯಪ್ರೇಮ ಮತ್ತು ತರ್ಕದೃಷ್ಟಿಗಳ ಬಗೆಗೆ ಅನುರಾಗ ವನ್ನು ಬೆಳೆಯಿಸಬೇಕು.

ಉದಾತ್ತ ಧ್ಯೇಯಗಳನ್ನು ಕುರಿತು ಮಕ್ಕಳಲ್ಲಿ ಅನುರಾಗಗಳನ್ನು ಅಭಿವೃದ್ಧಿಗೊಳಿಸುವುದೇ ಶಿಕ್ಷಣದ ಅಂತಿಮ ಗುರಿಯು. ಆಟಗಳನ್ನು ಆಡು ವಾಗ ಮಕ್ಕಳು ಸಹಕಾರ, ಸಂಘಾಭಿಮಾನ ಮತ್ತು ಸ್ವಾರ್ಥತ್ಯಾಗಗಳನ್ನು

ಕಲಿಯಬಹುದು. ಆದರೆ ಈ ಗುಣಗಳನ್ನು ಅವರು ಶಾಲೆಯ ಹೊರಗೂ ಆಚರಿಸಬೇಕಾದರೆ ಅವು ಶ್ರೇಷ್ಠ ಗುಣಗಳೆಂಬ ಭಾವವು ಮಕ್ಕಳಲ್ಲಿ ದೃಢಗೊಳ್ಳಬೇಕು. ಶಾಲೆಯ ವಾತಾವರಣವು ಅದಕ್ಕೆ ಅನುಕೂಲವಾಗಿರಬೇಕು. ಅಂದರ ಮಾತ್ರ ಆಟವು, ಆದ್ದರಿಂದ ಶಿಕ್ಷಣವು ಜೀವನ ನಾಟಕದ ಪ್ರಥಮ ಸೋಪಾನವಾಗುವುದು. ಇಲ್ಲವಾದರೆ ಒಂದು ಸಂಘದಲ್ಲಿ ಒಳ್ಳೆಯ ರೀತಿಯಿಂದ ನಡೆವವನು ಮುಂದೆ ಸ್ವಾರ್ಥಿಯಾಗಬಹುದು.

ಇಂಗ್ಲೀಷ ಶಿಕ್ಷಣದಿಂದ ಮಕ್ಕಳ ಆಚಾರ ವಿಚಾರಗಳೇ ಬದಲಾಗುತ್ತವೆಂದು ನಮ್ಮ ಹಿರಿಯರು ಅನ್ನುವುದುಂಟು. ಇದು ನಿಜ. ಯಾಕೆಂದರೆ, ಪಾಶ್ಚಾತ್ಯ ಪದ್ಧತಿಯ ಶಿಕ್ಷಣದಿಂದ ಸ್ವಾತಂತ್ರ್ಯಪ್ರೇಮ, ಮೂಢನಂಬುಗೆಯ ಅನಾದರ, ಸಮತಾಭಾವ ಮೊದಲಾದ ಪಾಶ್ಚಾತ್ಯರ ವಿಶೇಷ ಗುಣಗಳ ಅನುರಾಗಗಳು ಮಕ್ಕಳಲ್ಲಿ ಉಂಟಾಗಿರುತ್ತವೆ. ಮತ್ತು ತಮ್ಮ ನಡೆನುಡಿಗಳಲ್ಲಿಯೂ ಕೂಡ ಅವರು ಅವುಗಳನ್ನು ವ್ಯಕ್ತಮಾಡುತ್ತಾರೆ.

# REFERENCES
## ಆಧಾರ ಗ್ರಂಥಗಳು


*§ROSS, J. S. *Groundwork of Educational Psychology.*

§NUNN, T. P. *Education: Its Data and First Principles.*

MCDOUGALL, W. *The Energies of Men.*

MCDOUGALL, W. *An Introduction to Social Psychology.*

MCDOUGALL, W. *The Riddle of Life.*

§SANDIFORD, P. *Educational Psychology.*

FOX, CHARLES *Educational Psychology.*

JAMES, W. *Talks to Teachers on Psychology.*

JOAD, C. E. M. *The Mind and its Workings.*

MATHEW, A. V. *Psychology and Principles of Education.*

§KAMAT, V. V. *Measuring Intelligence of Indian Children.*

---

ಶಿಕ್ಷಣತತ್ವ : ಎಂ. ಸುಲ್ತಾನ್ ಮೋಹಿಯುದ್ದೀನ, ಎಂ. ಎ., ಎಲ್‌ಎಲ್. ಬಿ., ಎಂ. ಇಡಿ.

ಶಿಕ್ಷಣ : ಉಲ್ಲಾಳ ಮಂಗೇಶರಾವ್, ಬಿ. ಎ., ಎಲ್. ಟಿ.

ಪ್ರಾಯೋಗಿಕ ಮನಶ್ಶಾಸ್ತ್ರದ ಪರಿಚಯ ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.

ಹಿಂದಿ ಹುಡುಗರ ಬುದ್ಧಿಮಾಪನವು : ವಿ. ವಿ. ಕಾಮತ, ಬಿ. ಎ., ಪಿಎಚ್. ಡಿ.,


## Dictionaries ( ನಿಘಂಟುಗಳು )


The Mysore University ENGLISH-KANNADA DICTIONARY.

Students' Modern Practical Dictionary—D. K. BHARDWAJ.


( ಇವಲ್ಲದೆ ಬೇರೆ ಪುಸ್ತಕಗಳನ್ನೂ ನಿಘಂಟುಗಳನ್ನೂ ಅವಲೋಕಿಸಲಾಗಿದೆ. )

---

* ಮುಂಬೈ ವಿದ್ಯಾಖಾತೆಯವರಿಂದ ಈ ಪುಸ್ತಕವು ಪ್ರಾಥಮಿಕ ಶಿಕ್ಷಕರ ಟ್ರೇನಿಂಗ ಕಾಲೇಜದ ವಿದ್ಯಾರ್ಥಿಗಳಿಗೆ ವಿಶೇಷ ಅಭ್ಯಾಸಕ್ಕೆಂದು ಮಂಜೂರಾಗಿದೆ.

§ ಈ ಪುಸ್ತಕಗಳನ್ನು ಬಿ. ಟಿ. ಕಾಲೇಜದ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವೆಂದು ಮಂಜೂರು ಮಾಡಿರುವರು.

# ಸೂಚಿ ಮತ್ತು ಶಬ್ದಕೋಶ

## ಕನ್ನಡ–ಇಂಗ್ಲೀಷ–ಹಿಂದುಸ್ಥಾನಿ–ಮರಾಠಿ

(ಹಿ = ಹಿಂದುಸ್ಥಾನಿ; ಮ = ಮರಾಠಿ)

[ಅಂಕಿಗಳು ಪುಟಗಳನ್ನು ಸೂಚಿಸುತ್ತವೆ.]

ಭಾಷೆ ಕಲಿಸುವುದು, ೧೭, ೫೬, ೭೧, ೭೨, ೭೬

# ಪರಿಶಿಷ್ಟ

## ಪ್ರಾಥಮಿಕ ಶಿಕ್ಷಕರ ಸರ್ಟಿಫಿಕೇಟ ಪರೀಕ್ಷೆಯ ಪ್ರಶ್ನೆಗಳು

( ಅಂಕಿಗಳು ಉತ್ತರದ ವಿಷಯಗಳ ಪುಟಗಳನ್ನು ಸೂಚಿಸುತ್ತವೆ. )

### ೧೯೩೯

೧. ನಮಗೆ ಬೋಧವು ಎಷ್ಟು ವಿಧವಾಗಿ ಮತ್ತು ಹೇಗೆ ಆಗುವದು? ಬೋಧೆಯಾಗಬೇಕೆಂದರೆ ಯಾವ ಸಂಗತಿಗಳ ಆವಶ್ಯಕತೆ ಇರುವದು? ( ೫೩-೧೫೫)

ವಸ್ತುಗಳ ರೂಪದಿಂದ ವಿಚಾರ ಮಾಡುವದು ದೃಢವಾಗದಿದ್ದರೆ ಶಬ್ದರೂಪದಿಂದ ವಿಚಾರ ಮಾಡುವದು ಸರಿಯಾಗಿ ಸಾಗಲಾರದು. ಯಾಕೆ? ಇಂಥ ವಿಚಾರಗಳು ಸರಿಯಾಗಿ ಸಾಗಬೇಕೆಂದರೆ ಶಿಕ್ಷಕನು ಯಾವ ಉಪಾಯಗಳನ್ನು ಕೈಕೊಳ್ಳಬೇಕು? ದೃಷ್ಟಾಂತಗಳಿಂದ ಸ್ಪಷ್ಟಮಾಡಿರಿ. (೧೫೬-೧೫೭; ೧೬೪).

೨. ಬಾಲಕರಲ್ಲಿ ಯಾವ ಯಾವ ಹೀನಪ್ರವೃತ್ತಿಗಳು ಬಲವಾಗಿರುವವು? ಅವು ಯಾವ ಯಾವ ಬಗೆಯಿಂದ ತೋರ್ಪಡುವವು? ಅವುಗಳನ್ನು ಯಾವ ಯಾವ ಚಟುವಟಿಕೆಗಳ ಮುಖಾಂತರ ನೀವು ಸಂಶೋಧನ ಮಾಡಿ ಉಚ್ಚ ಪ್ರವೃತ್ತಿಗಳನ್ನಾಗಿ ಪರಿವರ್ತಿಸುವಂತೆ ಮಾಡುವಿರಿ? (೫೧-೫೩; ೧೭೭-೧೮೧).

೩. ಸಾಲೆಯಲ್ಲಿ ಬಾಲಕರ ಅವಧಾನ ಶಕ್ತಿಯನ್ನು ಬೆಳೆಸುವ ಸಾಮಾನ್ಯವಾದ ಕ್ರಮಗಳು ಯಾವವು? ಅವುಗಳನ್ನು ಮನಶ್ಶಾಸ್ತ್ರದ ದೃಷ್ಟಿಯಿಂದ ಪರೀಕ್ಷಿಸಿರಿ, ಮತ್ತು ಆ ಕ್ರಮಗಳು ಯೋಗ್ಯವೆಂಬುದಕ್ಕೆ ಕಾರಣ ಕೊಡಿರಿ. (೧೦೧–೧೦೪).

ಚಿಕ್ಕ ಬಾಲಕರ ಪಾಠಗಳ ಅವಧಿಯು ೨೦-೩೦ ಮಿನಿಟುಗಳಿದ್ದರೂ ಬೇಸರಿಕೆ ಬರಬಹುದು. ಬೆಳೆದವರ ಪಾಠಗಳ ಅವಧಿಯು ೪೦-೫೦ ಮಿನಿಟುಗಳಿದ್ದರೂ ಬೇಸರವಾಗುವದಿಲ್ಲ. ಯಾವ ಯಾವ ಮನಶ್ಶಾಸ್ತ್ರದ ಸಂಗತಿಗಳಿಂದ ಹೀಗಾಗುವದು? (೧೦೩).

೪. ಶೀಲಸಂವರ್ಧನಕ್ಕೆ ಶಾಲೆ ಮನೆ ಇವುಗಳಲ್ಲಿ ಯಾವುದು ಹೆಚ್ಚು ಸಂಬಂಧಪಡುವದು? ಶಾಲೆಯ ಯಾವ ಯಾವ ಚಟುವಟಿಕೆಗಳು ಈ ಕಾರ್ಯದಲ್ಲಿ ಹೆಚ್ಚು ಉಪಯುಕ್ತವಾಗುವವು? (೧೯೮-೨೦೦).

೮. "ಸಾಧಾರಣವಾಗಿ ಬಾಲಕನ ಕ್ರೀಡೆಯಲ್ಲಿಯೇ ಅವನು ಅಭ್ಯಾಸ ಮಾಡಬೇಕಾದ ಅಭ್ಯಾಸಪತ್ರಿಕೆಯಲ್ಲಿಯ ಎಲ್ಲ ವಿಷಯಗಳ ಬೀಜಗಳು ಇರುವವು" ವಿವೇಚಿಸಿರಿ. (೭೫, ೭೪-೭೭, ೬೮-೭೦).

೬. ಕೆಳಗೆ ಕೊಟ್ಟ ಸಂಗತಿಗಳನ್ನು ಮನಶ್ಶಾಸ್ತ್ರದ ದೃಷ್ಟಿಯಿಂದ ತಿಳಿಸಿ ಹೇಳಿರಿ :—

(ಅ) ಅನೇಕ ಸಾರೆ ನೋಡಿದಂಥ ಕ..ವು ವಸ್ತುಗಳು ತಮ್ಮ ಸೊಗಸನ್ನೂ ಆಕರ್ಷತೆಯನ್ನೂ ಕಳಕೊಳ್ಳುವವು. (೪೩-೪೪, ಕುತೂಹಲವು ಅಡಗುವುದು)

(ಆ) ಮೂರು ವರುಷದ ಬುದ್ಧಿ ನೂರು ವರುಷಗಳ ವರೆಗೆ. (೧೨೩, ೧೯೮).

(ಇ) ತಂದೆಯು ಬೇರೂರಿಗೆ ಹೋದಾಗ ಮನೆಯಿಂದ ತನ್ನ ೫-೬ ವರುಷದ ಮಗುವಿನಿಂದ ಕಾಗದವು ಅವನಿಗೆ ಬಂದಿರುತ್ತದೆ. ಅದನ್ನು ಅವನು ಬಲು ಜತನದಿಂದ ಕಾದಿಡುವನು. (೪೪, ಅದು ಅವನ ಪಾಲನಪ್ರವೃತ್ತಿಯನ್ನು ಪ್ರಚೋದನಗೊಳಿಸುವುದು.)

(ಈ) ಯಾರನ್ನಾದರೂ ನೋಡಿ ಇಲ್ಲವೆ ಧ್ವನಿಯನ್ನು ಕೇಳಿ ಮಗು ನಗುವದು. (೫೬, ಸಹಾನುಭೂತಿ).

(ಉ) ನಮಗೆ ಸ್ವತಃ ಹಾಡಲು ಇಲ್ಲವೆ ಚಿತ್ರಿಸಲು ಬಾರದಿದ್ದರೂ ಇಂಪಾದ ಗಾಯನವನ್ನೂ ಆಹ್ಲಾದಕರವಾದ ಚಿತ್ರಗಳನ್ನೂ ಕೇಳಲು ಮತ್ತು ನೋಡಲು ಬಯಸುತ್ತೇವೆ. (೧೧೮, ೨೦೭).

(ಊ) ನಮ್ಮಲ್ಲಿ ಅನೇಕರು ವಾರಪತ್ರಿಕೆಗಳಲ್ಲಿ ಬರೆದ ಭವಿಷ್ಯವನ್ನು ತಪ್ಪದೇ ಓದಿ ಅದನ್ನು ಒಮ್ಮೆಲೆ ನಂಬುತ್ತಾರೆ. (೫೭, ಸೂಚನೆ).

೭. ಶಿಕ್ಷಕರು ಮನಶ್ಶಾಸ್ತ್ರವನ್ನು ಕಲಿಯುವುದರ ಉದ್ದೇಶವೇನು? ಟ್ರೇನಿಂಗ್ ಪಡೆಯುವ ಮೊದಲು ಮತ್ತು ಪಡೆದ ನಂತರ ನಿಮ್ಮ ಕಲಿಸುವ ಕ್ರಮದಲ್ಲಿ ಯಾವ ಹೆಚ್ಚುಕಡಿಮೆಗಳು ಕಂಡುಬರುವವು? (೧-೬).

೮. “ಶಾಲೆಯಲ್ಲಿ ಮಕ್ಕಳಿಗೆ ಶಿಕ್ಷಕರು ವಿಷಯಗಳನ್ನು ಹೇಳುವುದನ್ನು ಆದಷ್ಟು ಕಡಮೆ ಮಾಡಿ ಮಕ್ಕಳೇ ಸಾಧ್ಯವಾದಷ್ಟು ಮಟ್ಟಿಗೆ ವಿಷಯಗಳನ್ನು ಸ್ವಂತವಾಗಿ ಶೋಧಿಸಿ ಕಂಡುಹಿಡಿಯುವ ಚಟವನ್ನುಂಟು ಮಾಡಬೇಕು”— ಈ ತತ್ವವನ್ನು ಭೂಗೋಲ ಅಥವಾ ಪ್ರಕೃತಿವಿಮರ್ಶೆಯ ಪಾಠಗಳಲ್ಲಿ ಹೇಗೆ ವಿನಿಯೋಗಿಸುವಿರಿ? (೭೩, ೭೫-೭೬).

ಅಥವಾ

ಮಕ್ಕಳ ವಿಚಾರಶಕ್ತಿಗೆ ಸರಿಯಾಗಿ ಶಿಕ್ಷಣ ಕೊಡಬೇಕಾದರೆ ಯಾವ ಪದ್ಧತಿಯನ್ನನುಸರಿಸುವಿರಿ? (೧೩೮-೧೪೭), ವಿದ್ಯಾರ್ಥಿಗಳ ವಯಸ್ಸಿಗನುಗುಣವಾಗಿ ನಿಮ್ಮ ಪದ್ಧತಿಗಳನ್ನು ಹೇಗೆ ಹೆಚ್ಚುಕಡಿಮೆ ಮಾಡುವಿರಿ? (೧೫೫, ೧೫೬-೧೫೭, ೧೬೪ ೧೬೭)

## ೧೯೪೦

೧. ಬಾಲಕರ ೬ನೆಯ ವರುಷದಿಂದ ೧೪ನೆಯ ವರುಷದ ವರೆಗಿನ ಶಾರೀರಿಕ ಮತ್ತು ಮಾನಸಿಕ ಬೆಳವಣಿಗೆಯ ಬೇರೆ ಬೇರೆ ಮೆಟ್ಟುಗಳನ್ನು ಹೇಳಿ ಶೈಕ್ಷಣಿಕ ದೃಷ್ಟಿಯಿಂದ ಅವುಗಳ ಮಹತ್ವವನ್ನು ಸ್ಪಷ್ಟೀಕರಿಸಿರಿ. (೮೩-೮೬).

ಬಾಲಕರ ೧೪ನೆಯ ವರ್ಷ ಮತ್ತು ಬಾಲಿಕೆಯರ ೧೨ನೆಯ ವರ್ಷಗಳ ಸುಮಾರಕ್ಕೆ ಅವರಲ್ಲಿ ಯಾವ ಅಂತರವು ಸ್ಪಷ್ಟವಾಗಿ ಕಾಣುವುದು? ಮತ್ತು ಆ ಕಾಲಕ್ಕೆ ಅವರ ಶಿಕ್ಷಣದ ವಿಷಯವಾಗಿ ನೀವು ಯಾವ ಎಚ್ಚರಿಕೆಯನ್ನು ತೆಗೆದುಕೊಳ್ಳುವಿರಿ? (೮೬-೯೧; ೯೩).

೨. ನಿಮ್ಮ ಶಾಲೆಯ ಒಂದು ವರ್ಗದಲ್ಲಿಯ ಬಾಲಕರಲ್ಲಿ ಎಷ್ಟು ಪ್ರಕಾರದ ವೈಯಕ್ತಿಕ ಭೇದಗಳು ಇರಬಹುದು? ಈ ಭೇದಗಳನ್ನು ನೀವು ಯಾವ ತತ್ವದ ಮೇಲೆ ಮಾಡುವಿರಿ? ಈ ಭೇದಗಳನ್ನು ಅನುಲಕ್ಷಿಸಿ ನೀವು ನಿಮ್ಮ ಶಿಕ್ಷಣಪದ್ಧತಿಯಲ್ಲಿ ಹೇಗೆ ಹೆಚ್ಚುಕಡಿಮೆಗಳನ್ನು ಮಾಡಿಕೊಳ್ಳುವಿರಿ? (೧೧೪; ೧೩೭-೧೪೧).

೩. ಭಯ, ಕೋಪ, ಅನುಕರಣ, ಜಿಜ್ಞಾಸೆ, ರಚನೆ ಈ ಸಹಜಪ್ರವೃತ್ತಿಗಳನ್ನು ಬೋಧನೆ ಮತ್ತು ಶೀಲಸಂವರ್ಧನೆಗಳಲ್ಲಿ ಹೇಗೆ ಉಪಯೋಗಿಸಿಕೊಳ್ಳುವಿರೆಂಬುದನ್ನು ವಿವರಿಸಿರಿ (೮೧-೮೮, ೮೨-೮೪, ೮೯-೫೨, ೩೮-೫೬)

೪. ಚಟವೆಂದರೇನು? ಬಾಲಕರಲ್ಲಿ ಯೋಗ್ಯ ಚಟಗಳುಂಟಾಗುವಂತೆ ಯಾವ ಮುಂಜಾಗ್ರತೆಯನ್ನು ತೆಗೆದುಕೊಳ್ಳಬೇಕಾಗುವದು? ಕೆಟ್ಟ ಚಟಗಳನ್ನು ಹೊಡೆದು ಹಾಕಲು ನೀವು ಏನು ಮಾಡುವಿರಿ? (೧೮೩-೧೮೭).

೫. ಜ್ಞಾನಗ್ರಹಣದ ಬೇರೆ ಬೇರೆ ಮೆಟ್ಟುಗಳು ಯಾವವು? ಬಾಲಕರ ಅವಧಾನವನ್ನು ದೊರಕಿಸುವದಕ್ಕೋಸ್ಕರ ಯಾವ ಯಾವ ಉಪಾಯಗಳನ್ನು ಮಾಡಬೇಕಾಗುವದು? (೧೫೨, ೧೫೩-೧೫೫, ೧೬೪ ಮತ್ತು ೧೦೨-೧೦೪).

೬. "ಯಾವದಾದರೊಂದು ವಿಷಯದಲ್ಲಿ ಬಾಲಕನಿಗೆ ಎಷ್ಟೆಷ್ಟು ಹೆಚ್ಚು ಆಸ್ಥೆಯುಂಟಾಗುವದೋ ಅಷ್ಟಷ್ಟು ಹೆಚ್ಚು ಪ್ರಯತ್ನವನ್ನು ಬಾಲಕನು ಆತ್ಮಸಂತೋಷದಿಂದ ಮಾಡುವನು." ಈ ಮಾತನ್ನು ಗಣಿತ ಮತ್ತು ಭೂಗೋಲ ವಿಷಯಗಳ ಉದಾಹರಣೆ ತೆಗೆದುಕೊಂಡು ಸಿದ್ಧಮಾಡಿರಿ. (೯೬-೯೮, ೧೦೩-೧೦೪).

## ೧೯೪೧

೧. ಶಿಕ್ಷಣದಲ್ಲಿ ಮನಶ್ಶಾಸ್ತ್ರಕ್ಕೆ ಯಾವ ಸ್ಥಾನವಿರುವುದು? ಮನಶ್ಶಾಸ್ತ್ರದ ಅಭ್ಯಾಸವು ಮುಖ್ಯವಾಗಿ ಯಾವ ತಳಹದಿಯನ್ನು ಅವಲಂಬಿಸಿದೆ? ಶಿಕ್ಷಕನು ಶಾಲೆಯಲ್ಲಿ ಕೆಲಸ ಮಾಡುತ್ತಿರುವಾಗ ಮನಶ್ಶಾಸ್ತ್ರದ ಅಭ್ಯಾಸವನ್ನು ಹೇಗೆ ಸಾಗಿಸಬಹುದು? (೧-೬ ಮತ್ತು ೭-೮).

೨. 'ಸಾಮಾಜಿಕ ಸಹಜಪ್ರವೃತ್ತಿ'ಗಳಾವವು? ಅವುಗಳಿಗೆ 'ಸಾಮಾಜಿಕ ಸಹಜಪ್ರವೃತ್ತಿ' ಎಂದು ಏಕೆ ಹೇಳುವಿರಿ? ಅನುಕರಣಶೀಲತೆ ಮತ್ತು ಸೂಚನೆ ಇವುಗಳ ಉಪಯೋಗವನ್ನು ಶಿಕ್ಷಣದಲ್ಲಿ ಹೇಗೆ ಮಾಡಿಕೊಳ್ಳಬಹುದು? (೩೯-೪೦ ಮತ್ತು ೫೪-೫೬, ೫೭-೬೦).

೩. ತೀರ ಚಿಕ್ಕ ಬಾಲಕರ ಅಧ್ಯಾಪನದಲ್ಲಿ ಜ್ಞಾನೇಂದ್ರಿಯಗಳ ಶಿಕ್ಷಣಕ್ಕೆ ವಿಶೇಷ ಮಹತ್ವವನ್ನು ಏಕೆ ಕೊಟ್ಟಿದೆ? ನೇತ್ರೇಂದ್ರಿಯ ಮತ್ತು ಸ್ಪರ್ಶೇಂದ್ರಿಯ ಇವುಗಳಿಗೆ ಯಾವ ಯಾವ ಬಗೆಯಿಂದ ಶಿಕ್ಷಣವನ್ನು ಕೊಡುವಿರಿ? ಉದಾಹರಣಗಳಿಂದ ವಿವರಿಸಿರಿ. (೧೫೫, ೧೬೪-೧೬೬, ೧೫೬-೧೫೭).

೪. ಬುದ್ಧಿ ಎಂದರೇನು? ಬುದ್ಧಿಯನ್ನು ಹೇಗೆ ಅಳೆಯಬಹುದು? ಬುದ್ಧಿಮಾಪನಕ್ಕಾಗಿ ಉಪಯೋಗಿಸುವ ಉಪಕರಣಗಳನ್ನು ಕುರಿತು ಸಂಕ್ಷಿಪ್ತ ಮಾಹಿತಿಯನ್ನು ಕೊಟ್ಟು ಅವುಗಳ ಉಪಯೋಗವನ್ನು ತಿಳಿಸಿ ಹೇಳಿರಿ. (೧೨೬-೧೨೮, ೧೩೧-೧೩೬, ೧೩೮-೧೪೧).

೫. ಉತ್ತಮವಾದ ಸ್ಮರಣಶಕ್ತಿ ಎಂದರೇನು? ಅದನ್ನು ವಿದ್ಯಾರ್ಥಿಯಲ್ಲಿ ಉಂಟುಮಾಡಲು ಯಾವ ಉಪಾಯಗಳನ್ನು ಕೈಕೊಳ್ಳುವಿರಿ? (೧೧೧, ೧೦೫-೧೦೬, ೧೦೭, ೧೧೦, ೧೧೩).

೬. ಒಳ್ಳೆಯ ಇಲ್ಲವೆ ಕೆಟ್ಟ ರೂಢಿ (ಚಟ) ಗಳು ಬಾಲಕರಲ್ಲಿ ಹೇಗೆ ನೆಲೆಸುವವು? ಒಳ್ಳೆಯ ರೂಢಿಗಳೇ ಬಾಲಕರಲ್ಲಿ ನೆಲೆಸುವಂತೆ ಯಾವ ಉಪಾಯಗಳನ್ನು ಕೈಕೊಳ್ಳುವಿರಿ? (೧೮೩-೧೮೭).

೭. 'ಡಾಲ್ಟನ್ ಪದ್ಧತಿ' ಮತ್ತು 'ಯೋಜನ ಪದ್ಧತಿ' (ಪ್ರೊಜೆಕ್ಟ ಪದ್ಧತಿ) ಇವುಗಳ ಬಗ್ಗೆ ನಿಮಗೆ ಗೊತ್ತಿದ್ದುದನ್ನು ಬರೆಯಿರಿ. (೭೧ ೭೩).

೮. ಆನುವಂಶಿಕ ಸಂಸ್ಕಾರ ಮತ್ತು ಪರಿಸ್ಥಿತಿ ಇವೆರಡರಲ್ಲಿ ಹೆಚ್ಚು ಬಲವಂತವಾದುದು ಆವುದು? ತಕ್ಕ ಉದಾಹರಣೆಗಳಿಂದ ವಿವರಿಸಿರಿ. (೧೧೪-೧೧೮, ೧೧೯-೧೨೫).

## ೧೯೪೨

## ಶಿಕ್ಷಣ—೧ನೆಯ ಕಾಗದ

೧. ಮನಶ್ಶಾಸ್ತ್ರದ ಅಭ್ಯಾಸದಿಂದ ನಿಮ್ಮ ಕಲಿಸುವಿಕೆಯಲ್ಲಿ ಯಾವ ಮಹತ್ವವುಳ್ಳ ಶೈಕ್ಷಣಿಕ ಅಂಶಗಳು ಒಡಮೂಡಿವೆ? (೧-೬).

೨. ಶಿಕ್ಷಣದಲ್ಲಿ ಸ್ಮರಣಶಕ್ತಿ ಮತ್ತು ಕಲ್ಪನಾಶಕ್ತಿ ಇವುಗಳಿಗೆ ಯಾವ ಸ್ಥಾನವಿರುವುದು? ಮಕ್ಕಳ ಈ ಶಕ್ತಿಗಳನ್ನು ಬೆಳೆಯಿಸಲು ಯಾವ ಉಪಾಯಗಳನ್ನು ಕೈಕೊಳ್ಳುವಿರಿ? (೧೪೩, ೧೦೫-೧೦೬; ೧೫೫, ೧೬೬-೧೬೭ ಮತ್ತು ೧೧೦-೧೧೩; ೧೫೬-೧೬೩).

೩. ಮಕ್ಕಳ ಲಕ್ಷವನ್ನು ಪಾಠದ ಕಡೆಗೆ ಎಳೆಯುವುದಕ್ಕಾಗಿ ನೀವು ಯಾವ ಉಪಾಯಗಳನ್ನು ಕೈಕೊಳ್ಳುವಿರಿ? (೧೦೧-೧೦೪).

೪. ಆಧುನಿಕ ಶಿಕ್ಷಣಪದ್ಧತಿಯಲ್ಲಿ ಮಕ್ಕಳ ಕ್ರೀಡಾಪ್ರವೃತ್ತಿಗೆ ಹೆಚ್ಚು ಮಹತ್ವವನ್ನು ಏಕೆ ಕೊಟ್ಟಿರುವರು? ಬಾಲಕರ ವರ್ಗಕ್ಕೆ ಗಣಿತ ವಿಷಯವನ್ನು ಕಲಿಸುವಾಗ ಈ ಪ್ರವೃತ್ತಿಯನ್ನು ನೀವು ಹೇಗೆ ಉಪಯೋಗಿಸುವಿರಿ? (೬೮-೭೭; ೭೨, ೭೩).

೫. ಬಾಲಕರ ಶೀಲಸಂವರ್ಧನೆಗಾಗಿ ಶಾಲೆಯಲ್ಲಿ ಮತ್ತು ಶಾಲೆಯ ಹೊರಗೆ ಬಾಲಕರ ಯಾವ ಯಾವ ಸಹಜ-ಪ್ರವೃತ್ತಿಗಳನ್ನು ಮತ್ತು ಭಾವನೆಗಳನ್ನು (ಅನುರಾಗಗಳನ್ನು) ಪ್ರಚೋದಗೊಳಿಸಲು ಶಿಕ್ಷಕನು ಯತ್ನಿಸಬೇಕು? ಉದಾಹರಣೆಗಳನ್ನು ಕೊಟ್ಟು ವಿವರಿಸಿರಿ. (೪೯-೫೦, ೫೧-೫೩, ೧೮೦ ಮತ್ತು ೧೮೭, ೧೯೦-೨೦೦).

೬. ಕೆಳಗೆ ಕೆಲವು ಮಾತುಗಳು ಕೊಟ್ಟಿವೆ. ಅವುಗಳ ಕಾರಣಗಳನ್ನು ಆದಷ್ಟು ಸಂಕ್ಷಿಪ್ತದಲ್ಲಿ (ಒಂದೆರಡು ವಾಕ್ಯಗಳಲ್ಲಿ) ಬರೆಯಿರಿ:—

(ಅ) ಉಕ್ತಲೇಖನವನ್ನು ಬರೆಯಿಸುವಾಗ ವಾಕ್ಯವನ್ನು ಅಥವಾ ಶಬ್ದಸಮೂಹವನ್ನು ಮೇಲಿಂದ ಮೇಲೆ ಉಚ್ಚರಿಸುವುದು ತಪ್ಪು. (ಮನಸ್ಸು ಒಂದೇ ಕಾಲಕ್ಕೆ ಒಂದಕ್ಕಿಂತ ಹೆಚ್ಚು ವಿಷಯಗಳ ಕಡೆಗೆ ಅವಧಾನವನ್ನು ಪೂರೈಸಲಾರದು ೧೦೧)

(ಆ) ಪಾಠವನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಿಕ್ಷಕನು ವರ್ಗರಚನೆಯನ್ನು ಲಕ್ಷಿಸಬೇಕಾಗುವುದು. (ನಿಲುವಿಕೆಯಲ್ಲಿ ಕಡಿಮೆ ಇದ್ದವರು, ಕಿವುಡರು, ಮಂದದೃಷ್ಟಿಯವರು ಮತ್ತು ಮಂದಬುದ್ಧಿಯವರು ಶಿಕ್ಷಕನ ಸಮೀಪದಲ್ಲಿ ಇರಬೇಕಾಗುತ್ತದೆ)

(ಇ) ಬುದ್ಧಿಮಾಪನದಿಂದ ಮಕ್ಕಳ ಶ್ರಮ ಮತ್ತು ವೇಳೆ ಇವುಗಳಲ್ಲಿ ಉಳಿತಾಯ ಮಾಡಲು ಸಾಧ್ಯವಾಗುವುದು. (ಯಾಕೆಂದರೆ ಮಕ್ಕಳ ಬುದ್ಧಿಮಾನಕ್ಕೆ ಅನುಗುಣವಾಗಿ ಶಿಕ್ಷಣ ಪದ್ಧತಿಯನ್ನು ಯೋಜಿಸಬಹುದು. ೧೩೪, ೧೩೮-೧೪೧).

(ಈ) ಮೇಲ್ವಿಚಾರಣೆ ಇಲ್ಲದ ಆಟಗಳಿಂದ ಮಕ್ಕಳಲ್ಲಿ ' ಆಟಗಾರಿಕೆ ' ಒಡಮೂಡಲಾರದು. (ಪ್ರವೃತ್ತಿಗಳು ದುರ್ಮಾರ್ಗವನ್ನು ಹಿಡಿಯ ಬಹುದು. ೫೧, ೭೫).

(ಉ) ಪಾಂಡಿತ್ಯವುಳ್ಳ ಶಿಕ್ಷಕನಕಿಂತ ಪ್ರೇಮ ಮತ್ತು ಸಹಾನುಭೂತಿ ಯುಳ್ಳ ಶಿಕ್ಷಕನೇ ಮೇಲು. (೪೪, ೫೬).

(ಊ) ಎಲ್ಲ ಸಹಜಪ್ರವೃತ್ತಿಗಳು ಹುಟ್ಟಿದಂದಿನಿಂದ ನಮ್ಮಲ್ಲಿ ಇದ್ದರೂ ಅವೆಲ್ಲವುಗಳ ಚಟುವಟಿಕೆಗಳು ಏಕಕಾಲಕ್ಕೆ ಒಡಮೂಡುವದಿಲ್ಲ. (೫೧).

೭. ಮಾಂಟೆಸೋರಿ ಶಿಕ್ಷಣ ಪದ್ಧತಿಯ ವೈಶಿಷ್ಟ್ಯಗಳಾವು ? ಆದರಲ್ಲಿಯ ಯಾವ ಅಂಶಗಳು ಈಗಿನ ಶಿಕ್ಷಣ ಪದ್ಧತಿಯಲ್ಲಿ ಸೇರಿಸಿವೆ ? (೪೮, ೭೦, ೧೬೪, ೧೬೬).

## ೧೯೪೨

## ಶಿಕ್ಷಣ—೨ನೆಯ ಕಾಗದ

೧. ಕೆಳಗೆ ಕೆಲವು ಅಪೂರ್ಣ ವಾಕ್ಯಗಳು ಕೊಟ್ಟಿವೆ. ಶಿಕ್ಷಣಶಾಸ್ತ್ರದ ದೃಷ್ಟಿಯಿಂದ ಸರಿಯಾಗಿ ಅರ್ಥವಾಗುವಂತೆ ಅವುಗಳನ್ನು ಪೂರ್ಣಮಾಡಿ ಬರೆಯಿರಿ :—

(ಅ) ಶಿಕ್ಷಕನು ತಾನು ಶೀಲವಂತನಾಗಿರದಿದ್ದರೆ .... ....... (ಮಕ್ಕಳು ಶೀಲವಂತರಾಗುವುದು ಕಡಿಮೆ. ೨೦೦).

(ಆ) ಯಾವುದಾದರೊಂದು ಚಟವು ನಮಗೆ ಅಂಟಿಕೊಳ್ಳಬೇಕಾಗಿ ದ್ದರೆ ............ (ನಿಶ್ಚಿತ ಉದ್ದೇಶವುಳ್ಳ ಪುನರಾಚರಣೆಯು ಆವಶ್ಯಕ. ೧೮೫).

(ಇ) ಸ್ಮರಣಶಕ್ತಿಯ ಸಹಾಯ್ಯದಿಂದ ನಾವು ಹಿಂದಿನ ಅನುಭವ ಗಳನ್ನು ಕಣ್ಮುಂದೆ ತರುವೆವು; ಆದರೆ ಕಲ್ಪನಾಶಕ್ತಿಯ ........ (ಸಹಾಯ್ಯದಿಂದ ಪ್ರತ್ಯಕ್ಷ ಕಾಣದ ವಸ್ತುಗಳನ್ನು ಕಣ್ಮುಂದೆ ತರುವೆವು. ೧೫೬).

(ಈ) ಹೊಸತಾಗಿ ಸಾಲೆಗೆ ಬಂದ ಮಗುವಿನ ವಿಷಯದಲ್ಲಿ ಶಿಕ್ಷಕನ ಮೊದಲನೆಯ ಕರ್ತವ್ಯವೆಂದರೆ ..... .... (ಅವನನ್ನು ಪ್ರೇಮದಿಂದಲೂ ಸಹಾನುಭೂತಿಯಿಂದಲೂ ಕಾಣುವುದು. ೫೬).

(ಉ) ..........ಕಾರಣ ಚಿಕ್ಕಮಕ್ಕಳಿಗೆ ಪುನರಾವೃತ್ತಿಯಿಂದ ಬೇಸರ ಪೆನಿಸುವದಿಲ್ಲ. (ಪ್ರಭುತ್ವದ ಆನಂದ ೬೧).

(ಊ) ...........ಇದ್ದ ವ್ಯಕ್ತಿಯು ಬೇಕಾದ ಸಮಾಜದಲ್ಲಿ ಬೆರೆತು ಹೋಗುವುದು. (ಸಹಾನುಭೂತಿ).

(ಎ) ಹೆದರಿಕೆಯಿಂದ ಜಿಜ್ಞಾಸೆ...........(ಕುಂಠಿತವಾಗುತ್ತದೆ. ೪೪).

(ಏ) ಮಕ್ಕಳ ಅಭ್ಯಾಸಕ್ರಮವನ್ನು ರಚಿಸುವಾಗ ಅವರ....... .. ಲಕ್ಷ ಗೊಡಬೇಕಾಗುವುದು. (ವಯೋಮಾನಕ್ಕೂ ಬುದ್ಧಿಮಾನಕ್ಕೂ ೯೨, ೧೩೫).

(ಐ) .. ................ಈ ನಾಲ್ಕು ಸಂಗತಿಗಳನ್ನು ಶಾಲೆಯ ಶಿಸ್ತು ಅವಲಂಬಿಸಿದೆ. (ಶಿಕ್ಷಕನ ವರ್ಚಸ್ಸು, ವೇಳಾಪತ್ರಿಕೆ, ಕಟ್ಟಡ ಮತ್ತು ಉಪಕರಣಗಳು).

(ಒ) ಆನುವಂಶಿಕತೆ ಮತ್ತು ಸಂಸ್ಕಾರ ಇವೆರಡರಲ್ಲಿ ಶಿಕ್ಷಣಶಾಸ್ತ್ರದ ದೃಷ್ಟಿಯಿಂದ........ಹೆಚ್ಚಿನದು. (ಸಂಸ್ಕಾರ [ಪರಿಸ್ಥಿತಿ] ೧೬೦)

# ಅಭಿಪ್ರಾಯಗಳು

“. .....ಶೈಕ್ಷಣಿಕ ಮನಶ್ಶಾಸ್ತ್ರ” ವೆಂಬ ಈ ಪುಸ್ತಕವನ್ನು ಕನ್ನಡದಲ್ಲಿ ಬರೆಯಲು (ಮ. ರಾ. ವ್ಹಿ. ಕೆ. ಜವಳಿ) ಅವರು ಶಕ್ತರಾದುದು ಸಂತೋಷ ಕರವೇ. .. ”

**ಡಾ|| ಎಮ್. ಸಿದ್ಧಲಿಂಗಯ್ಯ,**

M. A., B. T, Ph. D., (Dip. Edin.)

ಪ್ರೊಫೆಸರ ಆಫ್ ಎಜ್ಯುಕೇಶನ್. ಮಹಾರಾಜ ಕಾಲೇಜ, ಮೈಸೂರು.

---

I went through the book and I am glad to say that I find it useful to students of Training Institutions.

I congratulate you upon your success in writing such a good book on a difficult subject.

**ಬಿ. ಇಂದಿರಮ್ಮ,** M. A.

*Superintendent,*

Women's Training College, Mysore,

---

“....ಇಂಗ್ಲೀಷ್ ತಿಳಿಯದ ಕನ್ನಡ ಉಪಾಧ್ಯಾಯರಿಗೆ ಈ ಪುಸ್ತಕವು ಕೈದೀಪದಂತಿದೆ . ”

**“ ಸ್ವತಂತ್ರ ಕರ್ನಾಟಕ. ”**

---

“.... ಒಟ್ಟಿನ ಮೇಲೆ ಪುಸ್ತಕದ ಭಾಷೆ ತಿಳಿಯಾಗಿದ್ದು ಎಲ್ಲರಿಗೂ ಅವಗತವಾಗುವಂತಿದೆ. ಇದುವರೆಗೆ ಈ ಬಗ್ಗೆ ಆದ ಕನ್ನಡ ಗ್ರಂಥಗಳಲ್ಲಿ ಇದೇ ಹೆಚ್ಚು ತಿಳಿಯಾಗಿಯೂ ಸ್ಪಷ್ಟವಾಗಿಯೂ ಇದೆ ಎನ್ನಲು ಅಡ್ಡಿಯಿಲ್ಲ. ಆಯಾ ಪ್ರಕರಣಗಳಲ್ಲಿ ಮನಶ್ಶಾಸ್ತ್ರದ ಪ್ರಮೇಯಗಳನ್ನು ಹೇಳಿ ಶೈಕ್ಷಣಿಕ ಸಿದ್ಧಾಂತಗಳನ್ನು ಕೊಡಲಾಗಿದೆ. ......”

**“ ಶಿಕ್ಷಕ ಮಿತ್ರ. ”**

On the whole book is very well written. I congratulate you on the service you are rendering Primary Teachers.

**ಎಸ್. ಆರ್. ತಟ್ಟಿ,** B. A., S. T. C. D.,
ಹೆಡ್ ಮಾಸ್ತರ, ಗವ್ಹರ್ನಮೆಂಟ ಹೈಸ್ಕೂಲ, ಕಾರವಾರ.

—

"........ಮನಶ್ಶಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡಿದ ಶ್ರೀಮಾನ್ ವಿರುಪಾಕ್ಷಪ್ಪನವರ ಈ ಪುಸ್ತಕವು ಕನ್ನಡಿಗರ ಕೈಸೇರುವುದು ಸುದೈವವಲ್ಲವೇ! ........ಈ ಪುಸ್ತಕವನ್ನು ಬರೆದ ರೀತಿ, ಭಾಷೆ, ವಿಷಯ ವಿವೇಚನೆಗಳು ಸಾಮಾನ್ಯರಿಗೂ ತಿಳಿಯುವಂತೆ ಸರಳವಾಗಿವೆ. ಯಾವತ್ತೂ ಶಿಕ್ಷಣಪ್ರೇಮಿಗಳಿಗೆ ಇದು ನೆರವಾಗುವುದರಲ್ಲಿ ಸಂದೇಹವಿಲ್ಲ. ಪ್ರಾಥಮಿಕ ಶಾಲಾ ಶಿಕ್ಷಕರಿಗಂತೂ ಇದು ಕೈಗನ್ನಡಿಯಂತಿದೆ........"

**ಕೆ. ಎಫ್. ಪಾಟೀಲ,** B. A.
ಚೇರಮನ್,
ಡಿಸ್ಟ್ರಿಕ್ಟ ಸ್ಕೂಲ ಬೋರ್ಡ, ಧಾರವಾಡ.

—

"........ವಿಷಯ ವಿವೇಚನೆ ಸರಿಯಾಗಿದ್ದು ಎಲ್ಲರಿಗೂ ತಿಳಿಯುವಂತಹ ಸುಲಭ ಭಾಷೆಯಲ್ಲಿ ವ್ಯಕ್ತವಾಗಿದೆ. ಗ್ರಂಥದ ವಿಷಯ ವಿವೇಚನೆಯನ್ನು ಪರಿಶೀಲಿಸಿದರೆ ಶ್ರೀಯುತ ವ್ಹಿ. ಕೆ. ಜವಳಿಯವರು ಮನಶ್ಶಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆಂದು ತಿಳಿದುಬರುವಂತಿದೆ. ಅಲ್ಲಲ್ಲಿ ಪ್ರಸಿದ್ಧ ಮನಶ್ಶಾಸ್ತ್ರಜ್ಞರ ಗ್ರಂಥಗಳಲ್ಲಿಯ ಆಧಾರಗಳನ್ನು ಕೊಟ್ಟಿರುವುದರಿಂದ ಅವರ ಪುಸ್ತಕಕ್ಕೆ ಹೆಚ್ಚಿನ ಬಲ ಬಂದಂತಾಗಿದೆ........"

**ಬಿ. ಎಸ್. ಹಂಚಿನಾಳ,** B. A., B. T.
ಪ್ರಿನ್ಸಿಪಾಲ,
ಕನ್ನಡ ಪ್ರಾಯಮರಿ ಟ್ರೇನಿಂಗ ಕಾಲೇಜ, ಬೆಳಗಾವಿ.